ಸರಕಾರಿ ಆಸ್ಪತ್ರೆಗಳೋ? ತಿಗಣೆಗಳ ತಾಣಗಳೋ?

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಅಗಸ್ಟ್ ೧೯೯೫



ಶೇಷನ್ ಉವಾಚ

ಐದು ಮಿನಿ ಕಥೆಗಳು



ಬೆಲೆ: ರೂ.೬-೦೦



# ಕಸ್ತೂರಿ

ಕನ್ನಡ ಡೈಜೆಸ್ಟ


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎಸ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ವಂದೇ ಮಾತರಂ

ಛಾಯಾ ಚಿತ್ರ:
ವಿ. ಮುರಲೀಧರ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.


## ಚಿಂತನ

**ಮೊ**ನ್ನೆ ಮೊನ್ನೆಯಷ್ಟೆ ಒಂದು ಸುದ್ದಿ ಬಂತು. ರಜತ ಪರದೆಯ ರತಿ ಶ್ರೀದೇವಿಯ ತಾಯಿಗೆ ವಿದೇಶದ ವಿಖ್ಯಾತ ಆಸ್ಪತ್ರೆಯಲ್ಲಿ ಡಾಕ್ಟರುಗಳ ನಿರ್ಲಕ್ಷ್ಯದ ಕಾರಣದಿಂದಾಗಿ ತೊಂದರೆ ಅನುಭವಿಸಬೇಕಾಗಿ ಬಂದ ಸುದ್ದಿ.

ಆದರೆ ಅದೇ ಸುಮಾರಿಗೆ ಹುಬ್ಬಳ್ಳಿಯ ಕಿಮ್ಸ್ ಆಸ್ಪತ್ರೆಯಲ್ಲಿ ಹಾವು ಕಚ್ಚಿದ ಹಳ್ಳಿಯ ಹುಡುಗನೊಬ್ಬ ಸೂಕ್ತ ಚಿಕಿತ್ಸೆ ದೊರೆಯದ ಕಾರಣ ಸಾವನ್ನಪ್ಪಿದ ಘಟನೆಯೂ ನಡೆಯಿತು. ಆತನ ಮರಣ ಕೋಲಾಹಲವನ್ನೆಬ್ಬಿಸಿ ಕ್ರುದ್ಧ ಗ್ರಾಮಸ್ಥರು ಆ ಆಸ್ಪತ್ರೆಯ ವೈದ್ಯ ಸಿಬ್ಬಂದಿಯನ್ನು ತರಾಟೆಗೆ ತೆಗೆದುಕೊಂಡದ್ದೂ ಅದರಿಂದಾಗಿ ಅಲ್ಲಿಯ ಕಿರಿಯ ವೈದ್ಯರು ಮುಷ್ಕರ ಹೂಡಿದ್ದೂ ತದನಂತರದ ವಿದ್ಯಮಾನಗಳು. ಮತ್ತೊಂದು ಸರಕಾರಿ ಆಸ್ಪತ್ರೆಯಲ್ಲಿ, ಬಂದು ಕೂತು ಮೂರು ಗಂಟೆಗಳಾದರೂ ತನ್ನತ್ತ ಕಣ್ಣೆತ್ತಿಯೂ ನೋಡದೆ ತಂತಮ್ಮ 'ವ್ಯವಹಾರ'ಗಳಲ್ಲಿಯೇ ತಲ್ಲೀನರಾದ ಡಾಕ್ಟರುಗಳನ್ನು ಅಸ್ವಸ್ಥನೊಬ್ಬ ವಾಚಾಮಗೋಚರ ಬೈಯತೊಡಗಿದ. ಅಕ್ಕಪಕ್ಕದ ವಿಭಾಗಗಳಲ್ಲಿನ ರೋಗಿಗಳೆಲ್ಲ ಹೊರಗೆ ಬಂದರು. ಆತನನ್ನು ಬೆಂಬಲಿಸಿದರು. ಇದರಿಂದ ಇರಿಸು ಮುರಿಸುಗೊಂಡ ವೈದ್ಯ ಸಿಬ್ಬಂದಿ ಒಗ್ಗೂಡಿತು. ಬೈದುಕೊಳ್ಳುತ್ತಿದ್ದವರತ್ತ ಕಿವಿಗೊಡದೆ ಅವರೆಲ್ಲ ಇಂಗ್ಲೀಷಿನಲ್ಲಿ ಮಾತಾಡಿಕೊಳ್ಳುತ್ತ ಅಲ್ಲಿಂದ ನಡೆದರು. ಕ್ಷಣಾರ್ಧದಲ್ಲೇ ಅಲ್ಲಿಗೆ ಧಾವಿಸಿದ ಪೊಲೀಸರು ಗುಂಪುಗೂಡಿ ಗುಜುಗುಜು ಮಾತಾಡಿಕೊಳ್ಳುತ್ತಿದ್ದವರನ್ನೆಲ್ಲ ಚಂಡು ಹಿಡಿದು ದಬ್ಬಿದರು.

ಶುರುವಾದುವು ಮತ್ತೆರಡು ಮುಷ್ಕರಗಳು: "ತಮ್ಮ ಕರ್ತವ್ಯ ಮರೆತು, ಲಂಚ-ರುಷುವತ್ತು-ಶಿಫಾರಸುಗಳಲ್ಲಿಯೇ ಮುಳುಗಿ, ಹೊರರೋಗಿಗಳ ಪರೀಕ್ಷೆಯನ್ನು ನೆಪ ಮಾತ್ರಕ್ಕೆ ಮಾಡುತ್ತ ಹೊತ್ತುಗಳೆಯುವ ಸರಕಾರಿ ಡಾಕ್ಟರುಗಳನ್ನು ಹದ್ದುಬಸ್ತಿನಲ್ಲಿಡಿ" ಎಂಬುದು ಒಂದು ಗುಂಪಿನ ಒತ್ತಾಯ. "ಪರಿಸ್ಥಿತಿಯನ್ನು ಅರಿತುಕೊಳ್ಳದೆ ಪೂರ್ವಗ್ರಹಪೀಡಿತರಾಗಿ ಗೊಂದಲ ಎಬ್ಬಿಸಿ, ಆಸ್ಪತ್ರೆಯ ಶಾಂತಿಯನ್ನು ಕಲಕಿದ್ದಲ್ಲದೆ ಬಾಯಿಗೆ ಬಂದಂತೆ ಬೈದು ನಮ್ಮನ್ನು ಅವಮಾನಿಸಿದ ಜನ ಕ್ಷಮೆ ಕೇಳುವವರೆಗೂ ಡ್ಯೂಟಿಗೆ ಹಿಂದಿರುಗುವುದಿಲ್ಲ" ಎಂಬುದು ವೈದ್ಯರ ಹಟ.

ಇಂಥದರಲ್ಲಿ ಅತಂತ್ರ ಸ್ಥಿತಿಯನ್ನು ಅನುಭವಿಸುತ್ತ, ತಮ್ಮ ನೋವನ್ನು ಅನಿವಾರ್ಯವಾಗಿ ನುಂಗಿಕೊಂಡು ಸರಕಾರಿ ಆಸ್ಪತ್ರೆಯೆಂಬ ಈ ನರಕದಿಂದ ಎಂದು ಬಿಡುಗಡೆಯೋ ಎಂದು ನೊಂದುಕೊಳ್ಳುವವರ ಪಾಡು!

ಇಲ್ಲಿ ಯಾರದು ತಪ್ಪೆನ್ನಬೇಕು? ಸರಕಾರಿ ಆಸ್ಪತ್ರೆಗಳ ಸ್ಥಿತಿ ಸುಧಾರಿಸಲು ಏನು ಮಾಡಬೇಕು? ವೈದ್ಯ ಸಮುದಾಯದಲ್ಲಿ-ಸಿಬ್ಬಂದಿಯಲ್ಲಷ್ಟು ಸೌಹಾರ್ದಭಾವ ಹಾಗೂ ಸಾರ್ವಜನಿಕರಲ್ಲಿ ಒಂದಷ್ಟು ನಾಗರಿಕ ಪ್ರಜ್ಞೆ ಮೂಡಿಸುವಂಥ ಪ್ರಯತ್ನ ನಡೆಯಬೇಕು. ಅಷ್ಟೆ.

• ವ್ಯವಸ್ಥಾಪಕ ಸಂಪಾದಕ

# ಸಹ ಚಿಂತನ

**ಯಶಸ್ಸಿನತ್ತ ಪಯಣ**

ಜುಲೈ ಸಂಚಿಕೆಯಲ್ಲಿ ಪ್ರಕಟಗೊಂಡ ಯಂಡಮೂರಿ ವೀರೇಂದ್ರನಾಥರ "ಯಶಸ್ಸಿನತ್ತ ಪಯಣ" ಹೊತ್ತಿಗೆಯ ಸಂಗ್ರಹಾನುವಾದ ತುಂಬ ಬೋಧಕವಾಗಿತ್ತು. ನೈಜ್ಯಾನುಸಂಧಾನ, ಆತ್ಮಸ್ಥೈರ್ಯದ ಅಭಾವ, ಅಂತರಾಳದ ತುಮುಲ, ಭಾವನೆಗಳ ಸಂಘರ್ಷ ಮೊದಲಾದ ಮಾನಸಿಕ ಒತ್ತಡಗಳಿಂದ ಬಳಲುವವರಿಗೆ ಇದು ದಾರಿದೀಪ.

**ಜಮಖಂಡಿ** **ಎಸ್. ಜಿ. ಕಾರಜೋಳ**

"ಯಶಸ್ಸಿನತ್ತ ಪಯಣ" ನಿಜವಾಗಿಯೂ ಜೀವನ ಮಾರ್ಗದರ್ಶಿಯೇ ಸರಿ. ಇದರಲ್ಲಿಯ ಕೆಲ ಅಂಶಗಳಾದರೂ ನಮ್ಮ ಮೇಲೆ ಪ್ರಭಾವ ಬೀರುವಂತಾದರೆ ಜೀವನದ ಗತಿಯೇ ಬದಲಾಗುವುದರಲ್ಲಿ ಸಂಶಯವಿಲ್ಲ. ನನ್ನ ಪುಸ್ತಕಗಳ ಸಂಗ್ರಹಕ್ಕೆ ಈ ಕೃತಿ ನವಿಲುಗರಿ ಇದ್ದಂತೆ. ಇಂತಹ ಅಮೂಲ್ಯ ಕೃತಿಗಳನ್ನು ಕೊಡುತ್ತಿರುವದಕ್ಕೆ ತಮಗೆ ಅನಂತ ಧನ್ಯವಾದಗಳು.

**ನಿಲೋಗಲ್** **ಶಿವರಾಜ ಕರಡ್ಡಿ**

**ಸಂಚು**

'ಕಸ್ತೂರಿ'ಯ (ಜೂನ್, ೧೯೯೫) ಪುಸ್ತಕ ವಿಭಾಗದಲ್ಲಿ ಪ್ರಕಟವಾದ ಭೀಮಸೇನ ತೊರಗಲ್ಲ ಅವರ 'ಸಂಚು' ನಿಜವಾಗಿಯೂ ವಿಚಾರ ಪ್ರಚೋದಕ ಕಾದಂಬರಿ. ಎಸ್.ಎಲ್. ಭೈರಪ್ಪನವರ 'ಪರ್ವ'ದಂತೆ, ಪೌರಾಣಿಕ ವ್ಯಕ್ತಿಗಳ ಅತಿಮಾನುಷ ಹಾಗೂ ದೈವಿಕ ಶಕ್ತಿಗಳನ್ನು ದೂರವಿರಿಸಿ ವಿಭಿನ್ನ ದೃಷ್ಟಿಕೋನಗಳ ಮೂಲಕ ಐತಿಹಾಸಿಕ ವಾಸ್ತವಾಂಶಗಳತ್ತ ಬೆಳಕು ಚೆಲ್ಲುವ ಕಾದಂಬರಿ ಇದು.

ಆದರೆ ಇದರಲ್ಲೊಂದು ತಪ್ಪು ನುಸುಳಿದೆ. ಪುಟ ೧೩೧ ಪ್ಯಾರಾ ೧, 'ಘಟೋದ್ಗಜ, ಬಬ್ರುವಾಹನರು.... ಹೆಣವಾಗಲಿಕ್ಕೇ ಹುಟ್ಟಬೇಕೆ?" ಹಾಗೂ ಪುಟ ೧೩೪ ಪ್ಯಾರಾ ೧, "ಕುರುಕ್ಷೇತ್ರದಲ್ಲಿ ನಡೆದ ಮಾರಣ ಹೋಮ.... ತೀರ ಅನವಶ್ಯಕವಾಗಿತ್ತೆ? ಆ ನರಮೇಧದಲ್ಲಿ... ಅಭಿಮನ್ಯು ಬಬ್ರುವಾಹನ, ಘಟೋತ್ಕಜ, ಉಪಪಾಂಡವರು ಎಲ್ಲರೂ ಹೆಣವಾಗಿ ಕುರುಕ್ಷೇತ್ರದ ಕೀರ್ತಿಯನ್ನು ಹೆಚ್ಚಿಸಿದರೇ?"– ಎಂಬ ಮಾತಿದೆ. ಕುರುಕ್ಷೇತ್ರ ಯುದ್ಧದಲ್ಲಿ ಬಬ್ರುವಾಹನ ಭಾಗವಹಿಸಿದ್ದನೇ? ಭಾಗವಹಿಸಿದ್ದರೂ ಅಲ್ಲಿ ಆತ ಸತ್ತಿರಲಿಲ್ಲ. ಏಕೆಂದರೆ ಯುದ್ಧಾನಂತರ ಪಾಂಡವರ ಅಶ್ವಮೇಧಯಾಗದ ಕುದುರೆ ನೆಪವಾಗಿ ತನ್ನಪ್ಪ ಅರ್ಜುನನೊಡನೆ ಹೋರಾಡಿದಾತ ಈ ಬಬ್ರುವಾಹನ ಅಲ್ಲವೆ?

**ಪೆರಿಯಾಲು** **ವಿಷ್ಣು ಭರದ್ವಾಜ್ ಪಡ್ರೆ**

**ಅಸಾಧ್ಯವೇನಲ್ಲ**

ಜೈವಿಕ ತಂತ್ರಜ್ಞಾನಕ್ಕೆ ಸಂಬಂಧಿಸಿದ ನನ್ನ ಲೇಖನವನ್ನು (ಜುಲೈ ೯೫) ಚೆನ್ನಾಗಿಯೇ ಸಂಪಾದಿಸಿದ್ದೀರಿ. ಆದರೆ ಜೈವಿಕ ತಂತ್ರಜ್ಞಾನದಿಂದ ಪ್ರಾಣಿಗಳನ್ನು ನಿರ್ಮಿಸುವ ಬಗೆಗಿನ ಮಾಹಿತಿ ಸ್ವಲ್ಪ ಆಭಾಸಕರವಾಗಿರುವುದರಿಂದ ಈ ಪತ್ರ.

ಸಸ್ಯಗಳ ಮೇಲಿನ ಪ್ರಯೋಗಕ್ಕಿಂತ ಪ್ರಾಣಿಗಳ ಮೇಲಿನ ಪ್ರಯೋಗ ಕಷ್ಟಕರವೇ ಹೊರತು ಅಸಾಧ್ಯವೇನಲ್ಲ. ಕುರಿ ಹಾಗೂ ಮೇಕೆಯ ವೀರ್ಯಾಣು ಮತ್ತು ಅಂಡಾಣುಗಳ 'ಬೆಸುಗೆ'ಯಿಂದ ವಿಜ್ಞಾನಿಗಳು ಈಗಾಗಲೇ Geep ಎಂಬ ಹೊಸ ಪ್ರಾಣಿಯನ್ನು ನಿರ್ಮಿಸಿದ್ದಾರೆ.

**ಬೆಂಗಳೂರು** **ಚೋನ್ನಾಯ್ ಶ್ರೀನಿವಾಸ**

**ತದ್ರೂಪಿಯ ಪ್ರಸಂಗ**

"ಹೀಗೊಬ್ಬ ತದ್ರೂಪಿಯ ಪ್ರಸಂಗ" ಓದಿದಾಗ ನಿಜಕ್ಕೂ ಅಚ್ಚರಿಯಾಯಿತು. ಜೊತೆಗೆ 'ಲತೀಫ'ನ ಬಗ್ಗೆ ಮರುಕವೂ ಮೂಡಿತು. ಒಬ್ಬರ ಹಾಗೆ ಒಬ್ಬರಿರುವದು ಅಪರೂಪವಾದರೂ ಪ್ರಪಂಚದಲ್ಲಿ ಏಳು ಜನರು ಒಂದೇ ರೂಪದಲ್ಲಿರುವದೂ ಸತ್ಯವಂತೆ. ಆದರೆ ತದ್ರೂಪಿಗಳು ಒಟ್ಟಿಗೆ ಸಂಧಿಸುವುದು ಅತ್ಯಪರೂಪ. ಚಿತ್ರರಂಗದಲ್ಲಿ ಕೆಲವು ನಟರ ಹೋಲಿಕೆಯಿರುವ ಜನರನ್ನು ಜ್ಯೂನಿಯರರನ್ನಾಗಿ ಮಾಡುತ್ತಿರುವುದು ಎಲ್ಲರಿಗೂ ಗೊತ್ತಿರುವ ವಿಷಯ. ಸದ್ದಾಂ ಹುಸೇನರ ಮಗನ ಹೋಲಿಕೆಯ ಲತೀಫ್ ಜೀವಭಯದಿಂದ ಪರಿತಪಿಸಿದ್ದನ್ನು ಓದಿದಾಗ ತದ್ರೂಪಿಗಳ ಪಾಡು ಹೀಗೂ ಆಗಬಹುದೇ? ಎಂದೆನಿಸಿತು.

**ಹೂವಿನಶಿಗ್ಲಿ** **ಮಹಾದೇವ ಬಿಷ್ಟಣ್ಣವರ**

"ಹೀಗೊಂದು ತದ್ರೂಪಿಯ ಪ್ರಸಂಗ" ಓದಿದಾಗ ಲತೀಫ್ ಯಾಹ್ಯಾನ ಬಗ್ಗೆ ಅಯ್ಯೋ ಎನಿಸಿತು. ಆತನ ರೂಪವೇ ಅವನಿಗೆ ಮುಳುವಾದದ್ದು ಶೋಚನೀಯ.

ಇಂತಹ ತದ್ರೂಪದ ವ್ಯಕ್ತಿಗಳು ಎಷ್ಟಿರುವರೋ ದೇವರೇ ಬಲ್ಲ.

**ಗಂಗೇನಹಳ್ಳಿ ನೀತಿಗೆರೆ ಗೌರಿಪ್ರಿಯ**

### ಒಂದು ವಿವರಣೆ

'ದೇವನೊಲಿದ ಜೀವ' ಪುಸ್ತಕ ಸಂಗ್ರಹದ ಮುಖಚಿತ್ರದ ಕುರಿತು ಅರುಣ ಜಿ. ಮಾಲೆ ಬೆಟ್ಟೂರ ಅವರ ಪತ್ರ ಓದಿದೆ. (ಜೂನ್ ಕಸ್ತೂರಿ) 'ನಾ ಕಸ್ತೂರಿ' ಅವರ ಆತ್ಮ ಕಥೆಯ ಮೊದಲ ಭಾಗ ಪುಸ್ತಕದ ಮುಖಪುಟ ಶ್ರೀ ಸತ್ಯಸಾಯಿಬಾಬಾರಿಗೆ ಮೀಸಲಾಗಿದೆ. ಇದನ್ನೇ 'ಕಸ್ತೂರಿ' ಪತ್ರಿಕೆ ಪ್ರಾಯಶಃ ಅನುಸರಿಸಿದೆ. 'ದೇವನೊಲಿದ ಜೀವ' ಎರಡನೇ ಭಾಗದ ಮೇಲೆ 'ನಾ ಕಸ್ತೂರಿ' ಯವರ ಚಿತ್ರ ಮುಖಪುಟದಲ್ಲಿ ಕಂಗೊಳಿಸಬಹುದು!

**ಬರೋಡಾ ಎಸ್ಕೆ ಹಳೆಯಂಗಡಿ**

### ಮೊದಲೇ ಬಂದಿದ್ದರೆ....

ಮೂತ್ರಪಿಂಡ ಕಸಿಯ ಬಗೆಗೆ ಸಾಕಷ್ಟು ವಿವಾದ ನಡೆದ ಸಮಯದಲ್ಲಿ ನೀವು ಆ ಕುರಿತು 'ಆರೋಗ್ಯದಂಗಳ'ದಲ್ಲಿ (ಜುಲೈ ೧೯೯೫) ವಿವರವಾದ ಲೇಖನವನ್ನು ಪ್ರಕಟಿಸಿದ್ದು ಸ್ತುತ್ಯರ್ಹ. ಇದೇ ಲೇಖನ ಈಗ ಬಾರದೆ ೧೮ ತಿಂಗಳ ಹಿಂದೆಯೆ ಬಂದಿದ್ದರೆ ಈ ರೋಗದ ಲಕ್ಷಣದ ಅರಿವೇ ಇಲ್ಲದೆ ಕೇವಲ ತಲೆನೋವು, ಕೆಮ್ಮಿನ ಮಾತ್ರೆ ನುಂಗುತ್ತಾ ಇಹಲೋಕವನ್ನೇ ತೊರೆದ ನನ್ನ ತಮ್ಮ ವಿಜಯನರಸಿಂಹ ಬದುಕಿರುತ್ತಿದ್ದನೋ ಏನೊ? ಮೂತ್ರಪಿಂಡದ ಗಾತ್ರವೇ ಕಿರಿದಾಗುತ್ತ ನಡೆದು ಕೊನೆಗೆ ವಿಧಿಯಿಲ್ಲದೆ ನನ್ನ ತಮ್ಮನಿಗೆ ಬದಲಿ ಮೂತ್ರಪಿಂಡ ಜೋಡಣೆ ಮಾಡಿಸಲೇ ಬೇಕಾಯಿತು. ಅನಂತರ ಸೂಕ್ತ ಮಾರ್ಗದರ್ಶನ ದೊರೆಯದೆ ಶಸ್ತ್ರ ಚಿಕಿತ್ಸೆಯಾದ ಆರೇ ತಿಂಗಳಿಗೆ ನನ್ನ ತಮ್ಮ ಇಹಲೋಕ ತ್ಯಜಿಸಿದ. 'ಕಸ್ತೂರಿ'ಯಲ್ಲಿ ಇಂತಹ ಲೇಖನಗಳು ಮೇಲಿಂದ ಮೇಲೆ ಬಂದು ರೋಗಿಗಳು ಮುನ್ನೆಚ್ಚರಿಕೆಯ ಕ್ರಮಗಳನ್ನು ಅನುಸರಿಸುವಂತಾಗಲಿ.

**ಚಾಮರಾಜನಗರ ಎಸ್. ಲಕ್ಷ್ಮೀನರಸಿಂಹ**

### ನಿಯಮವೇ ಇದೆ!

ಜೂನ್ ೧೯೫೫ರ "ನೆನಪು ನೆರಳಿನಲ್ಲಿ" ಬಿ.ಎಲ್. ದೇಶಪಾಂಡೆಯವರು ಒಕ್ಕಣಿಸಿರುವುದು ನಿಜ ಸಂಗತಿಯಾಗಿದ್ದಿರಬಹುದಾದರೂ ಅದೊಂದು ಆತ್ಮ ಪ್ರಶಂಸೆಯ ಪ್ರತೀಕವಾಗಿದೆ. ಯಾಕೆಂದರೆ– ಅಂಚೆ ಕಚೇರಿಯ ವಠಾರದಲ್ಲಾಗಲಿ, ಅಂಚೆ ಪೆಟ್ಟಿಗೆಯಲ್ಲಾಗಲಿ ಅನಾಥವಾಗಿ ದೊರೆತ ಹಣವನ್ನು– ಮೊತ್ತವೆಷ್ಟೇ ಇರಲಿ–ಸೂಕ್ತ ಪರಾವನ್ನು ದಾಖಲಿಸಿ ಸರಕಾರದ ಖಜಾನೆಗೆ ತುಂಬಬೇಕೆಂಬ ಕಟ್ಟುನಿಟ್ಟಾದ ನಿಬಂಧನೆಯನ್ನು ಸಿಬ್ಬಂದಿ ವರ್ಗದ ಪ್ರತಿಯೊಬ್ಬನಿಗೂ ಆರಂಭದಲ್ಲಿಯೇ ತಿಳಿಯಪಡಿಸಲಾಗುತ್ತದೆ.

**ಮಂಗಳೂರು ಪಿ.ಜಿ. ದಾಸ್**

*(ನಿಯಮವಿರುವುದಾದರೂ ಪಾಲಿಸುವವರೆಷ್ಟು ಜನ?*
*- ಸಂಪಾದಕ)*

### ಆನೆಗಳ ಸ್ಕೂಲ್

ಜುಲೈ ೧೯೯೫ ಕಸ್ತೂರಿ ಸಂಚಿಕೆಯಲ್ಲಿ ಹೇಮಚಂದ್ರ ಅಕ್ಕಿಯವರ "ಸಕ್ರೆ ಬಯಲು ಆನೆಗಳ ರೆಸಿಡೆನ್ಸಿಯಲ್ ಸ್ಕೂಲು...." ಸಚಿತ್ರ ಲೇಖನ ಓದಿದೆ. ಅವರು ಈ ಲೇಖನದ ಮೂಲಕ ನಮ್ಮಂತಹ ವಿದ್ಯಾರ್ಥಿಗಳಿಗೆ ಆನೆಯ ಬಗ್ಗೆ ವಿವರ ನೀಡಿ ಮಹದುಪಕಾರ ಮಾಡಿದ್ದಾರೆ. ಲೇಖನ ಓದಿದಾಗ ನಾವು ಅವರ ಸಂಗಡವೆ ಇದ್ದೆವು ಎಂದೆನಿಸಿತು.

**ನಾರೀಕೆರೆ ಎಚ್.ಈ. ತಿಪ್ಪೇರುದ್ರಪ್ಪ**

### ಆಕಸ್ಮಿಕವೆ?

೧೯೯೫ರ ಜೂನ್ ತಿಂಗಳ ಸಂಚಿಕೆಯಲ್ಲಿ ಅಟಲ ಬಿಹಾರಿ ವಾಜಪೇಯಿಯವರ ಕುರಿತು ಲೇಖನ ಬಹಳ ಸ್ವಾರಸ್ಯಕರವಾಗಿ ಮೂಡಿ ಬಂದಿದೆ. ಅದನ್ನು ಓದಿ ಸಂತೋಷವಾಯಿತು. ಆದರೆ ಇದೇ ಲೇಖನದಲ್ಲಿ ಎಲ್ಲಿಯೂ ವಾಜಪೇಯಿಯವರ ಜೀವನದಲ್ಲಿ ಮಹತ್ತರ ಪಾತ್ರ ವಹಿಸಿರುವ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಹೆಸರನ್ನು ಉಲ್ಲೇಖಿಸದಿರುವುದು ತೀರಾ ಆಶ್ಚರ್ಯವಾದ, ಅಸಮಾಧಾನಕರವಾದ ಅಂಶವಾಗಿದೆ. ಇದೊಂದು ಪೂರ್ವಗ್ರಹಪೀಡಿತವಲ್ಲದ, ಅಕಸ್ಮಾತ್ ಸಂಭವಿಸಿದ ಪ್ರಮಾದವೆಂದು ಸಮಾಧಾನಪಟ್ಟುಕೊಳ್ಳೋಣವೇ?

**ಬೆಂಗಳೂರು ಎಂ.ಎಸ್. ನಾಗರಾಜ**

*(ಇಲ್ಲಿಲ್ಲ. ನಮಗೆ ಅಂಥ ಯಾವ ಪೂರ್ವಗ್ರಹಪೀಡನೆಯೂ ಇಲ್ಲ. ನೀವಂದಂತೆ ಅದು ಕೇವಲ ಆಕಸ್ಮಿಕ.*
*- ಸಂಪಾದಕ)*

"ಅಟಲ್ ಬಿಹಾರಿಯವರೊಂದಿಗೆ ಅಪರೂಪದ ಸಂದರ್ಶನ" ಓದಿದೆ. ಚೆನ್ನಾಗಿದೆ. ಸಂದರ್ಶನ ಅನ್ನುವದಕ್ಕಿಂತಲೂ "ವ್ಯಕ್ತಿ ಪರಿಚಯ"ವೆಂಬ ಶಿರೋನಾಮೆಯೇ ಚೆನ್ನಾಗಿತ್ತು. ಐದು ಪುಟದಲ್ಲಿ ಒಂದು ಪುಟವೂ ಪೂರ್ತಿ

( ೭ನೇ ಪುಟಕ್ಕೆ )

# ಅಂತರಂಗ





## ಐದು ಮಿನಿ ಕಥೆಗಳು

## ಸ್ಥಿರ ಶೀರ್ಷಿಕೆಗಳು



## ಬೆಳಕಿಂಡಿ

ಶಬ್ದ ಗಂಡು–ಧ್ವನಿ ಹೆಣ್ಣು
ಶಬ್ದವೇ ಇಲ್ಲದೆ ಧ್ವನಿ ಇಲ್ಲ
ಧ್ವನಿ ಇಲ್ಲದ ಶಬ್ದ ವ್ಯರ್ಥ
ಶಬ್ದ–ಧ್ವನಿಗಳ ಮಧ್ಯ ತಾಳ
ಮೇಳವೇ ಜೀವನದ ಅರ್ಥ.

–ಬೇchi

ಉಕ್ಕು ಮೊಂಡಾಗಬಹುದು; ಆದರೆ ಉಕ್ಕಿಗೆ ಎಂದೂ ತುಕ್ಕು ಹಿಡಿಯುವುದಿಲ್ಲ. ಮಸೆದಷ್ಟೂ ಹರಿತವಾಗುತ್ತದೆ.

–ತರಾಸು

ಅಂತರಾತ್ಮವು ತನ್ನ ತಪ್ಪಿಗೆ ನ್ಯಾಯಾಧೀಶರಂತೆ ಶಿಕ್ಷಿಸುವ ಮೊದಲು ಸ್ನೇಹಿತನಂತೆ ಎಚ್ಚರವನೀಯುತ್ತದೆ.

–ಶ್ರೀ ರಾಮಕೃಷ್ಣ ಪರಮಹಂಸ

ಮಾನವನಿಗೆ ಕೆಲಸದಂಥ ಬಂಧು ಮತ್ತೊಂದಿಲ್ಲ.

–ಭರ್ತೃಹರಿ

ಆಸ್ಪತ್ರೆ: ಬೆಳಗಿನ ನಾಲ್ಕು ಗಂಟೆಗೇ ನಿಮ್ಮನ್ನು ಎಬ್ಬಿಸಿ ನಿದ್ರೆ ಮಾತ್ರೆಗಳನ್ನು ಕೊಡುವ ಸ್ಥಳ.

–ಎಂ.ಆರ್.ಎಸ್.

ನೌಕರಿಯನ್ನು ದೊರಕಿಸಿಕೊಳ್ಳಲು ದೈವಾನುಗ್ರಹ ಬೇಕಾಗಬಹುದು. ಆದರೆ ನೌಕರಿಯನ್ನು ಕಾಯ್ದುಕೊಳ್ಳಲು ಮಾತ್ರ ಯೋಗ್ಯತೆಯೇ ಬೇಕು.

–ಜೋನಾಥನ್ ಆರ್ಮರ್

ಪುಸ್ತಕ ವಿಭಾಗ ೧೧೭

**ಲಾಪುಟಾ ದ್ವೀಪದತ್ತ....**

• ಜೊನಾಥನ್ ಸ್ವಿಫ್ಟ್
ಸಂಗ್ರಹಾನುವಾದ:
ಡಾ. ಬಿ.ಎಸ್. ಶೈಲಜಾ

ಆರೋಗ್ಯದಂಗಳ ೧೪೫

**ಕಂದಮ್ಮಗಳನ್ನು ಕಾಡುವ ಕೊರತೆಯ ಕಾಯಿಲೆಗಳು**

• ಡಾ. ಕರವೀರಪ್ರಭು ಕ್ಯಾಲಕೊಂಡ

( ಮೂರನೇ ಪುಟದಿಂದ )

ಸಂದರ್ಶನವಿಲ್ಲ. ಲೇಖನದಲ್ಲಿ ವಾಜಪೇಯಿಯವರಿಗೆ ಆರ್.ಎಸ್.ಎಸ್ ಜೊತೆ ಇರುವ ಸಂಬಂಧದ ಕುರಿತು ಏನೂ ಹೇಳಲಿಲ್ಲವೇಕೆ?

''ಜೀವ ಜಾಲಾಡಿಸುವ ಜಾಂಡೀಸ್'' ಲೇಖನ ತುಂಬ ಉಪಯುಕ್ತ ಮಾಹಿತಿ ಒದಗಿಸಿತು. ನಮ್ಮ ಮನೆಯಲ್ಲಿ ಇಬ್ಬರಿಗೆ ಜಾಂಡೀಸ್ ಆದಾಗ ಗಿಡಮೂಲಿಕೆ ಔಷಧದಿಂದಲೇ ಕಡಿಮೆಯಾಯ್ತು. ಇನ್ನು ರಷ್ಯಾ ದೇಶದ ವಿಜ್ಞಾನಿಗಳು ಜಾಂಡೀಸ್ ಕುರಿತು ಹೊಸ ಚಿಕಿತ್ಸೆಯನ್ನು ಕಂಡು ಹಿಡಿದಿದ್ದು ಬೆಳ್ಳಿಯ ತಟ್ಟೆ, ಬಟ್ಟಲುಗಳಲ್ಲಿ ನೀರು, ಆಹಾರವನ್ನು ಕೆಲವು ದಿನ ಸೇವಿಸಿದರೆ ಜಾಂಡೀಸ್ ಗುಣವಾಗುವುದು ಎಂದು ಹೇಳಿದ್ದಾರೆ.

**ಮುಂಡಗೋಡ ಅರುಣ ಜಿ ಮಾಲೆಬೆಟ್ಟೂರ**

ಅಟಲ್ ಜೀವನದ ಬಗ್ಗೆ 'ಸ್ವಯಂಭೂ'ರ ಸಂದರ್ಶನ ಚೆನ್ನಾಗಿದೆ. ಅವರ ಹಾಸ್ಯಪ್ರಜ್ಞೆ ಹಾಗೂ ಪ್ರಸಂಗಾವಧಾನದ ಎರಡು ಘಟನೆಗಳು ಉಲ್ಲೇಖನೀಯ.

ಮತ್ತೂರು-ಸಂಸ್ಕೃತ ಗ್ರಾಮದಲ್ಲಿ ಅವರಿಗೆ ಬಂಗಾರದಲ್ಲಿ ಸುತ್ತಿದ ಸ್ಫಟಿಕಮಣಿ ಹಾರ, ಶಾಲು ಹೊದೆಸಿ ಸನ್ಮಾನ ಮಾಡಿದಾಗ ''ರಾಜಕೀಯದಂತಹ, ಅಸಂಸ್ಕೃತ ಕ್ಷೇತ್ರದ ವ್ಯಕ್ತಿಗೆ-ಸಂಸ್ಕೃತ ಗ್ರಾಮದಲ್ಲಿ ಸುಸಂಸ್ಕೃತರು ಸನ್ಮಾನ ಮಾಡುತ್ತಿರುವುದು ನಿಜವಾಗಿಯೂ ಆಶ್ಚರ್ಯ'' ಎಂದು ತಮ್ಮನ್ನೇ ಗೇಲಿ ಮಾಡಿಕೊಂಡು ಎಲ್ಲರನ್ನೂ ನಗಿಸಿದರು.

ಬೆಂಗಳೂರು ನ್ಯಾಶನಲ್ ಕಾಲೇಜಿನ ಮೈದಾನದಲ್ಲಿ ಭಾಷಣಮಾಡುತ್ತಿದ್ದಾಗ ವಿದ್ಯುಚ್ಛಕ್ತಿ ಕೈಕೊಟ್ಟು ಕತ್ತಲು ಆವರಿಸಿತು. ಬ್ಯಾಟರಿ ಸಹಾಯದಿಂದ ಭಾಷಣ ಮುಂದುವರೆಸುತ್ತಾ ''ತಾವೆಲ್ಲ ಕೇಳುತ್ತಿದ್ದೀರಿ ತಾನೆ? ನಾನು ಕಾಣಲು ರಾಜೀವ ಗಾಂಧಿಯಷ್ಟು ಸುಂದರನೂ ಅಲ್ಲ, ಆದ್ದರಿಂದ ನೀವು ಕೇಳಿದರೂ ಸಾಕು,'' ಎಂದಾಗ ನಗೆಯ ಅಲೆ ಯುಕ್ಕಿತು.

**ಶಿವಮೊಗ್ಗ ಕಾ. ಗು. ಶ್ರೀಪಾದರಾವ್**

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೩೯ ಅಗಸ್ಟ ೧೯೯೫ ಸಂಚಿಕೆ: ೧೨

## "ಹೆಜ್ಜೆ ಗುರುತು"

ಭಗವಂತನ ಆತ್ಯಂತಿಕ ಭಕ್ತನೊಬ್ಬ ಒಂದು ದಿನ ಸುಂದರ ಕನಸೊಂದನ್ನು ಕಂಡ. ತನ್ನ ಆರಾಧ್ಯ ದೈವವಾದ ಭಗವಂತನೊಂದಿಗೆ ಸಮುದ್ರದ ದಂಡೆಯಲ್ಲಿ ವಿಹರಿಸುತ್ತಿರುವ ದೃಶ್ಯ!

ಆಗ ದಿಗಂತದಲ್ಲಿ ಭಕ್ತನ ಬಾಳಿನುದ್ದಕ್ಕೂ ನಡೆದ ಘಟನೆಗಳ ದೃಶ್ಯಾವಳಿಗಳು ಒಂದೊಂದಾಗಿ ಸುತ್ತೆಲ್ಲ ಹರಡಿದ ಮರಳಿನಲ್ಲಿ ಮೂಡಿ ಮರೆಯಾಗುತ್ತಿದ್ದಂತೆ ಭಾಸ.

ಪ್ರತಿಯೊಂದು ಘಟನಾ ದೃಶ್ಯದಲ್ಲಿ ಎರಡೆರಡು ಜತೆ ಹೆಜ್ಜೆ ಗುರುತುಗಳು ಕಾಣಬರುತ್ತಿದ್ದವು. ಒಂದು ಭಗವಂತನ ಹೆಜ್ಜೆ ಗುರುತಾದರೆ ಇನ್ನೊಂದು ಭಕ್ತನದು.

ಆದರೆ ಕೆಲವೊಂದು ದೃಶ್ಯಗಳಲ್ಲಿ ಮಾತ್ರ ಒಂದೇ ಜತೆ ಹೆಜ್ಜೆ ಗುರುತು ಕಾಣುತ್ತಿದ್ದುದನ್ನು ಗಮನಿಸಿದ ಭಕ್ತ, ಅವು ತನ್ನ ಬಾಳಿನಲ್ಲಿ ಬಂದ ಕಷ್ಟದ ಸಮಯದಲ್ಲಿನ ಘಟನೆಗಳೆಂದು ಭಾವಿಸಿಕೊಂಡ. ತಾನು ಏಕಾಕಿಯಾಗಿ ಸೋತು ಬಸವಳಿವಾಗ, ದಯಾಮಯಿ ಜೊತೆಗೇಕಿರಲಿಲ್ಲ ಎಂದು ಸಂಶಯದಿಂದ ಭಗವಂತನನ್ನು ಪ್ರಶ್ನಿಸಿದ.

"ದೇವಾ, ನಿನ್ನನ್ನು ನಂಬಿದ ಭಕ್ತರನ್ನು, ಸದಾಕಾಲ ಅವರ ಸಮೀಪವರ್ತಿ ಹಾಗೂ ವಶವರ್ತಿಯಾಗಿದ್ದು, ಕೈ ಬಿಡದೆ ರಕ್ಷಿಸುವೆನೆಂದು ಭಾಷೆ ಕೊಟ್ಟ ನೀನು ನನ್ನ ಕಷ್ಟದ ಕಾಲದಲ್ಲೇಕೆ ನನ್ನೊಂದಿಗಿಲ್ಲ?"

ಅದಕ್ಕೆ ಭಗವಂತ ಭಕ್ತನಿಗೆ ಸಮಜಾಯಿಸಿ ಹೇಳಿದ, "ನನ್ನ ಮಮತೆಯ ಮಗುವೇ, ನಾನು ನಿನ್ನನ್ನು ಬಿಟ್ಟು ಎಂದೂ ಅಗಲಲೇ ಇಲ್ಲ. ನಿನ್ನ ಕಡು ಕಷ್ಟದ ಕಾಲದಲ್ಲೆಲ್ಲ, ನಿನ್ನನ್ನು ಎತ್ತಿಕೊಂಡು ನನ್ನೆದೆಗೆ ಅವಚಿಕೊಂಡಿದ್ದೆನಾದುದರಿಂದ ಅಲ್ಲೆಲ್ಲ ಒಂದೇ ಜತೆ ಹೆಜ್ಜೆ ಗುರುತುಗಳನ್ನು ನೀನು ಕಂಡೆ. ಅವು ನಿನ್ನ ಹೆಜ್ಜೆ ಗುರುತಲ್ಲ, ನನ್ನ ಹೆಜ್ಜೆ ಗುರುತುಗಳು."

ಭಾವಪರವಶತೆಯಿಂದ ನಾಚಿದ ಭಕ್ತ ಭಗವಂತನ ಪದತಲಕ್ಕೆ ಬಾಗಿದ.

• ಡಾ. ಎಂ.ಜಿ. ಸವದತ್ತಿ

# "ಪರಮಾಣು ಯೋಜನೆಗಳಲ್ಲಿ ಭೀಮ ಗಾತ್ರದ ತಪ್ಪು...."



## ಶೇಷನ್ ಉವಾಚ

**ಸಂಗ್ರಹ: 'ಎಂ. ದೀಪಾ'**

ಜಲವಿದ್ಯುತ್ತನ್ನಾಗಲಿ ಔಷ್ಣಿಕ ವಿದ್ಯುತ್ತನ್ನಾಗಲಿ ಉತ್ಪಾದಿಸಬೇಕೆಂದರೆ ವ್ಯಾವಹಾರಿಕ ಕಾರಣಗಳಿಂದಾಗಿ ಸ್ಥಾವರಗಳನ್ನು ಇಂಥಲ್ಲೇ ಸ್ಥಾಪಿಸಬೇಕೆಂಬ ನಿರ್ಬಂಧವಿರುತ್ತದೆ. ಆದರೆ ಪರಮಾಣು ವಿದ್ಯುತ್ತಿನ ಮಾತು ಹಾಗಲ್ಲ. ಸ್ಥಾವರವನ್ನು ಎಲ್ಲಿ ಬೇಕಾದರೂ ಸ್ಥಾಪಿಸಬಹುದು. ಹೀಗಾಗಿ ವಿದ್ಯುತ್ತಿನ ಅಭಾವವನ್ನು ಹೊಡೆದೋಡಿಸಲು, ದೇಶವನ್ನು ಸಮೃದ್ಧಿಯತ್ತ ಕೊಂಡೊಯ್ಯಲು ಇರುವ ಏಕೈಕ ಮಾರ್ಗವೆಂದರೆ ಪರಮಾಣು ಸ್ಥಾವರಗಳನ್ನು ಸ್ಥಾಪಿಸುವುದು ಎಂಬ ಭಾವನೆ ಐವತ್ತರ ದಶಕದಲ್ಲಿ ಸಾರ್ವತ್ರಿಕವಾದದ್ದು ಆಶ್ಚರ್ಯವಲ್ಲ.

ಆದರೆ ಈ ಪರಮಾಣು ವಿದ್ಯುತ್ತಿನ ವಿಷಯದಲ್ಲಿ ನಡೆದಂಥ ದೊಡ್ಡ ಮೋಸ ಬೇರಾವುದೂ ನಡೆದಿಲ್ಲವೆಂದೇ ನನ್ನ ಅಭಿಪ್ರಾಯ. ಈ ಮೋಸ ನಡೆಸಿದವರಲ್ಲಿ ನಮ್ಮ ದೇಶದ ವಿಜ್ಞಾನಿಗಳೂ ಇದ್ದಾರೆ, ಆಡಳಿತಗಾರರೂ ಇದ್ದಾರೆ ಎನ್ನುವುದು ಯಾರಿಗಾದರೂ ದಿಗ್ಭ್ರಮೆ ಹುಟ್ಟಿಸುವ ವಿಚಾರವೆ. ಈ ಬಡದೇಶದ ಕರದಾತರಿಂದ ಬಂದ ಹಣವನ್ನೂ, ದೇಶದ ಸಂಪನ್ಮೂಲಗಳನ್ನೂ ಅವರು ಇನ್ನೆಷ್ಟು ಸಮರ್ಥವಾಗಿ ಬಳಸಬಹುದಿತ್ತೇನೋ?

ತಾವು ಇಷ್ಟಿಷ್ಟು ಮೆಗ್ಯಾವ್ಯಾಟುಗಳಷ್ಟು ವಿದ್ಯುತ್ತನ್ನು ಉತ್ಪಾದಿಸಿ ದೇಶದ ಕೊರತೆಯನ್ನು ನೀಗಿಸುತ್ತೇವೆಂಬ ಬಡಾಯಿಯನ್ನು ಪರಮಾಣುಶಕ್ತಿಗೆ ಸಂಬಂಧಿಸಿದ ಅಧಿಕಾರಿಗಳು ಎಷ್ಟೋ ವರ್ಷಗಳವರೆಗೆ ಕೊಚ್ಚಿಕೊಂಡದ್ದೇ ಕೊಚ್ಚಿಕೊಂಡದ್ದು. ಆದರೆ ಇವರು ಹೇಳಿದ್ದು ಕೃತಿಗಿಳಿದಿದ್ದೇ ಇಲ್ಲ. ಈವರೆಗೆ ಅವರು ಹೇಳಿದ್ದೆಲ್ಲ ಬರಿ ಬುರುಡೆ ಎಂಬ ಭಾವನೆ ಜನಸಾಮಾನ್ಯರಲ್ಲಿ ಬಲಿಯುತ್ತಿರುವಂತೆಯೆ ವಿಕಿರಣಗೊಳಿಸುವ ಮೂಲಕ ಬಟಾಟೆಯ

'ದಿ ಡಿ-ಜನರೇಷನ್ ಆಫ್ ಇಂಡಿಯಾ'ದಿಂದ

ಈಗ ಮುಖ್ಯ ಚುನಾವಣಾ ಕಮೀಶನರ್ ಆಗಿರುವ ಟ.ಎನ್.ಶೇಷನ್ ಹಿಂದೆ ಕೇಂದ್ರ ಸರಕಾರದ ಪರಮಾಣು ಶಕ್ತಿ ಇಲಾಖೆಯಲ್ಲಿ ನಿರ್ದೇಶಕರಾಗಿದ್ದವರು.

● ಸಂಪಾದಕ

ನ್ನಾಗಲಿ ಟೊಮೆಟೊವನ್ನಾಗಲಿ ಕೊನೆಗೆ ಚಪಾತಿಯನ್ನಾಗಲಿ ಹೇಗೆ ರಕ್ಷಿಸಿಡಬಹುದೆಂಬ ಬಗೆಗೆ ಅವರು ಮಾತನಾಡತೊಡಗಿದರು.

ಆದರೆ ವಿಕಿರಣಗೊಳಿಸಿದ ಬಟಾಟೆಯನ್ನಾಗಲಿ ಟೊಮೆಟೊವನ್ನಾಗಲಿ ಯಾರಾದರೂ ಎಂದಾದರೂ ಕಂಡಿದ್ದಾರೆಯೆ? ಕಂಡಿಲ್ಲ. ಹಾಗೂ ಕೇಂದ್ರ ಸರಕಾರದ ಆರೋಗ್ಯ ಖಾತೆ ಇಂಥಾ ವಸ್ತುಗಳ ಸೇವನೆ ಆರೋಗ್ಯಕ್ಕೆ ಮಾರಕ ಎಂದು ನಿರ್ಧರಿಸಿ ಅವುಗಳ ಮಾರಾಟವನ್ನು ನಿಷೇಧಿಸಿರುವುದರಿಂದ ಇಂಥಾ ವಸ್ತುಗಳನ್ನು ಯಾರಾದರೂ ಪೇಟೆಯಲ್ಲಿ ಕಾಣಲು ಸಾಧ್ಯವೂ ಇಲ್ಲ.

ವಾಸ್ತವವಾಗಿ, ತಿನ್ನಲು ಬಾರದ ಈ ಚಪಾತಿಗಳ ಬಗೆಗಾಗಲಿ ಬಟಾಟೆ, ಟೊಮೆಟೋಗಳ ಬಗೆಗಾಗಲಿ ಹೇಳಿಕೊಳ್ಳುವುದನ್ನು ಬಿಟ್ಟರೆ ಪರಮಾಣು ಇಲಾಖೆಯ ಅಥವಾ ರಕ್ಷಣಾ ಸಂಶೋಧನಾಲಯದ ಅಧಿಕಾರಿಗಳಿಗೆ ತಮ್ಮ ಸಾಧನೆಯ ಬಗೆಗೆ ಹೆಚ್ಚಿಗೆ ಹೇಳಿಕೊಳ್ಳುವುದೇನೂ ಇಲ್ಲ. ಆದರೂ ಈ ಸಂಸ್ಥೆಗಳು ಲಂಗುಲಗಾಮಿಲ್ಲದೆ ಹಾಗೆಯೆ ಇರುವುದು ಈ ಕಾಲದ ಒಂದು ದುರಂತ.

ಸಂಸತ್ತಾಗಲಿ ಪಾರ್ಲಿಮೆಂಟರಿ ಕಮಿಟಿಗಳಾಗಲಿ ಈ ಸಂಸ್ಥೆಗಳ ಚಟುವಟಿಕೆಗಳನ್ನು ಪರಿಶೀಲಿಸಿ ಯುಗಗಳೇ ಕಳೆದುಹೋದುವು. ಪರಮಾಣು ಶಕ್ತಿ ಇಲಾಖೆಯ ಲೆಕ್ಕ ಪತ್ರಗಳನ್ನು ಆಡಿಟರ್ ಜನರಲ್ ಆಫ್ ಇಂಡಿಯಾ ಕೂಡ ಪರಿಶೀಲಿಸುವಂತಿಲ್ಲ. ಹೀಗಾಗಿ ಅಲ್ಲಿ ಹಣದ ಅವ್ಯವಹಾರವೇನಾದರೂ ನಡೆದರೆ ಅದನ್ನು ತಹಬಂದಿಗೆ ತರುವಂತಿಲ್ಲ. ವೈಜ್ಞಾನಿಕ ಕ್ಷೇತ್ರದಲ್ಲಿ ಸ್ವತಂತ್ರವಾಗಿಯೆ ಸಂಶೋಧನೆಗಳನ್ನು ನಡೆಸಬೇಕು; ಸಂಶೋಧನೆಯ ಕ್ಷೇತ್ರದಲ್ಲಿ ಆತ್ಮ ನಿರ್ಭರರಾಗಿರಬೇಕು ಎಂಬ ಗುರಿಗಳನ್ನಿರಿಸಿಕೊಂಡ ಪ್ರಸ್ತುತ ಸಂದರ್ಭದಲ್ಲಿ, ನಮ್ಮ ವಿಜ್ಞಾನಿಗಳು ಏನು ಮಾಡುತ್ತಿದ್ದಾರೆ? ಅವರ ಈ ವರೆಗಿನ ಸಾಧನೆಯೇನು? ಎನ್ನುವುದನ್ನು ಪರಿಶೀಲಿಸಲು ಅಂತಾರಾಷ್ಟ್ರೀಯ ಮಟ್ಟದ ವಿಜ್ಞಾನಿಗಳನ್ನು ಕೇಳಿಕೊಂಡರೆ, ವಿದೇಶೀಯರು ನಮ್ಮ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡುತ್ತಿದ್ದಾರೆ ಎಂಬ ಬಲವಾದ ಆಕ್ಷೇಪ ದೇಶದ ಉದ್ದಗಲದ ತುಂಬಾ ಬರುವುದಾದ್ದರಿಂದ ಹಾಗೆ ಮಾಡುವಂತೆಯೂ ಇಲ್ಲ.

ಇದೆಲ್ಲದರ ಪರಿಣಾಮವೆಂದರೆ ಸರಕಾರದ ಹಾಟ್‌ಹೌಸಿನಲ್ಲಿ ಈ ಎರಡು ಸಸ್ಯಗಳು ಬೇಕಾಬಿಟ್ಟಿಯಾಗಿ ಬೆಳೆದದ್ದು.

ಹೋಮಿ ಭಾಭಾ ಪರಮಾಣು ಶಕ್ತಿ ಇಲಾಖೆಯನ್ನು ಸ್ಥಾಪಿಸಿದ ಹೊಸದರಲ್ಲೆ ತಂತ್ರಜ್ಞಾನವನ್ನು ಆಮದುಮಾಡಿಕೊಳ್ಳುವ ಕೆಲಸವನ್ನು ಆರಂಭಿಸಲಾಯಿತು. ಮೊದಲ ಟೆಸ್ಟ್ ರಿಯಾಕ್ಟರನ್ನು ನಿರ್ಮಿಸಿದ್ದು ಟ್ರಾಂಬೆಯಲ್ಲಿ. ದೇಶೀಯವಾಗಿ ನಿರ್ಮಿಸಿದ್ದೆಂಬ ಪ್ರಚಾರ ಆಗ ಅದಕ್ಕೆ. ದೇಶಿಯವಾಗಿ ನಿರ್ಮಿಸಿದ್ದೇನೋ ಸರಿ, ಆದರೆ ಬಳಸಿಕೊಂಡದ್ದು ಡಿಯುಟೆರಿಯಮ್‌ಅನ್ನು ನಿಯಂತ್ರಕವಾಗಿ ಬಳಸುವ ಕೆನಡಾದ ತಂತ್ರಜ್ಞಾನವನ್ನು.

ಪರಮಾಣುವಿನಿಂದ ವಿದ್ಯುತ್ತನ್ನು ಒದಗಿಸುವ ತವಕ ನಮ್ಮಲ್ಲಿ ಎಷ್ಟು ಅದಮ್ಯವಾಗಿತ್ತೆಂದರೆ ಟ್ರಾಂಬೆಯ ಟೆಸ್ಟ್ ರಿಯಾಕ್ಟರಿನ ಪಾಠಗಳನ್ನು ಅರಗಿಸಿಕೊಳ್ಳುವುದಕ್ಕೆ ಮೊದಲ ತಾರಾಪುರದಲ್ಲಿ ಪರಮಾಣು ರಿಯಾಕ್ಟರನ್ನು ನಿರ್ಮಿಸಲು ಅಮೇರಿಕದ ಜನರಲ್ ಇಲೆಕ್ಟ್ರಿಕ್ ಕಾರ್ಪೋರೇಶನ್ ಹಾಗೂ ಬೆಕ್ಟೆಲ್ ಕಾರ್ಪೋರೇಶನ್ನುಗಳಿಗೆ ಹಸಿರು ನಿಶಾನೆ ತೋರಿಸಿದೆವು.

ತಾರಾಪುರದ ಈ ರಿಯಾಕ್ಟರಿಗೆ ಸಮೃದ್ಧಗೊಳಿಸಿದ ಯುರೇನಿಯಮ್‌ನ್ನು ಇಂಧನವಾಗಿ ಬಳಸಬೇಕಾಗಿತ್ತು. ಅದನ್ನು ಹೊರಗಿನಿಂದ ಆಮದು ಮಾಡಿಕೊಳ್ಳಬೇಕಾಗಿತ್ತು ಮತ್ತು ಪೂರೈಸುವ ರಾಷ್ಟ್ರ ಆಕಸ್ಮಾತ್ತಾಗಿ ಕೈ ಕೊಟ್ಟರೆ ರಿಯಾಕ್ಟರಿನ ಕಾರ್ಯ ನಿಂತುಹೋಗುವ ಭಯವಿತ್ತು. ಆದರೂ ಹೋಮಿ ಭಾಭಾ ಈ ವಿಷಯದಲ್ಲಿ ಹಾಗೆಯೆ ಮುಂದುವರೆದರು.

ತಾರಾಪುರದ ಸ್ಥಾವರಕ್ಕಾಗಿ ಸಹಿಹಾಕಬೇಕಾದಾಗ ಅಂತಾರಾಷ್ಟ್ರೀಯ ನಿಯಂತ್ರಣಗಳನ್ನು ಒಪ್ಪಿಕೊಳ್ಳುವ ಪ್ರಸಂಗ ಭಾರತಕ್ಕೆ ಬಂತು. ಇದೇನೂ ರಾಷ್ಟ್ರದ ಹಿತದ ದೃಷ್ಟಿಯಿಂದ ಒಳ್ಳೆಯದಾಗಿರಲಿಲ್ಲ, ಆದರೂ ನಾವು ನಿರ್ಧಾರವನ್ನು ಕೈಬಿಡಲಿಲ್ಲ ಹಾಗೂ ಮುಂದೆ ಸ್ಥಾಪಿಸಲಾದ ಪರಮಾಣು ಸ್ಥಾವರಗಳಿಗೆ ತಾರಾಪುರವನ್ನು ಮಾದರಿಯಾಗಿ ಸ್ವೀಕರಿಸಲೂ ಇಲ್ಲ.

ನಿಜವಾಗಿಯೆಂದರೆ ತಾರಾಪುರ ಯೋಜನೆಯೆ



ಒಂದು ಭೀಮ ಗಾತ್ರದ ತಪ್ಪು. "ನನ್ನ ಪ್ರೀತಿಯ ಜವಾಹರ," ಎಂದು ಸಂಬೋಧಿಸುವ ಮಟ್ಟಿಗೆ ಭಾಭಾ ಅವರಿಗೆ ನೆಹರೂರೊಡನೆ ಸಲಿಗೆಯಿದ್ದುದರಿಂದ ಎಲ್ಲವೂ ಸಲೀಸಾಗಿ ನಡೆದುಹೋಯಿತು.

ತಾರಾಪುರದ ನಂತರ, ಭಾರಜಲ ಹಾಗೂ ಸ್ವಾಭಾವಿಕ ಸ್ಥಿತಿಯಲ್ಲೆ ದೊರೆಯುವ ಯುರೇನಿಯಮ್‌ಅನ್ನು ಬಳಸಿ ಪರಮಾಣುಶಕ್ತಿಯನ್ನು ಉತ್ಪಾದಿಸುವ ಕೆನಡಾದ ತಂತ್ರಜ್ಞಾನವನ್ನು ಆಮದು ಮಾಡಿಕೊಳ್ಳಬೇಕೆಂದು ನಿರ್ಧರಿಸಲಾಯಿತು. ರಾಜಸ್ತಾನದ ಕೋಟಾದಲ್ಲಿ ಸ್ಥಾಪಿಸಲಾದ ಪರಮಾಣು ಸ್ಥಾವರ ಈ ಮಾದರಿಯದು. ಈ ಯೋಜನೆ ಸಂಪೂರ್ಣವಾಗಿ ಸ್ವದೇಶಿಯಾದದ್ದು ಎಂದೆಲ್ಲಾ ಆಗ ಪ್ರಚಾರ ಮಾಡಲಾಯಿತಾದರೂ ಈ ಯೋಜನೆಯ ಹಿಂದಿನ ಶಕ್ತಿ ಕೆನಡಾದ ತಂತ್ರಜ್ಞರದು. ಕಲ್ಪಾಕ್ಕಮ್‌ನಲ್ಲಾಗಲಿ ನರೋರಾದಲ್ಲಾಗಲಿ ಬೇರೆ ಕಡೆಗಳಲ್ಲಾಗಲಿ ನಾವು ಇದೇ ವಿಧಾನವನ್ನು ಅನುಸರಿಸಿದ್ದೇವೆ.

ಇದೆಲ್ಲಾ ನಡೆಯುತ್ತಿರುವಾಗ ಈ ಸ್ಥಾವರಗಳಿಗೆ ಅಗತ್ಯವಾದ ಭಾರಜಲವನ್ನು ಎಲ್ಲಿಂದ ತರುವುದೆಂಬ ಪ್ರಶ್ನೆ ಬಂತು. ಅದಕ್ಕಾಗಿ ಕೋಟಾದ ಸ್ಥಾವರದಿಂದ ಹೆಚ್ಚಾದ ಉಗಿಯನ್ನು ಪಡೆದು ಇದೇ ದೇಶದಲ್ಲಿ ನಿರ್ಮಿಸಿದ ಕೆನಡಾ ಮಾದರಿಯ ಯಂತ್ರದಲ್ಲಿ ಭಾರಜಲವನ್ನು ತಯಾರಿಸುವುದೆಂದು ನಿರ್ಧರಿಸಲಾಯಿತು.

ಆದರೆ ಎಲ್ಲವೂ ಸುಸೂತ್ರವಾಗಿ ನಡೆಯಲಿಲ್ಲ. ಈ ಯೋಜನೆಯೂ ಸರಿಯಾಗಿ ಸಾಗಲಿಲ್ಲ. ಈ ವರೆಗೆ ಎಷ್ಟು ಭಾರಜಲ ತಯಾರಿಸಲಾಗಿದೆಯೆನ್ನುವುದನ್ನು ಅತ್ಯಂತ ರಹಸ್ಯವಾಗಿ ಇಟ್ಟಿರುವುದರಿಂದ ಅಂಕಿಸಂಖ್ಯೆಗಳು ತಿಳಿದುಬರುವುದಿಲ್ಲ. ಆದರೆ ಅಗತ್ಯಕ್ಕಿಂತ ಹೆಚ್ಚು ಭಾರಜಲ ಪಾವರ್ ರಿಯಾಕ್ಟರಿನಿಂದ ಸೋರಿದೆಯೆನ್ನುವುದು ರಹಸ್ಯವಾಗಿ ಯೇನೂ ಉಳಿದಿಲ್ಲ. ಇಷ್ಟೆಲ್ಲಾ ವರ್ಷ ಕೋಟಾದ ಪರಮಾಣು ಸ್ಥಾವರದ ಕಾರ್ಯ ಕುಂಟುತ್ತಾ ನಡೆದಿರುವುದರ ಹಿಂದಿನ ಕಾರಣ ಇದೇ.

ಪರಮಾಣು ಶಕ್ತಿಯ ವಿವರಗಳನ್ನೆಲ್ಲ ಅತ್ಯಂತ ಗೋಪ್ಯವಾಗಿ ಇರಿಸಿದುದರಿಂದ, ಈ ಯೋಜನೆ ಮುಗ್ಗರಿಸಲು ಇದೊಂದೇ ಕಾರಣವೆ? ಅಥವಾ ಬೇರಿನ್ನೇನಾದರೂ ಕಾರಣವಿತ್ತೆ? ಎಂಬುದು ತಿಳಿ







ದುಬರುವ ಸಾಧ್ಯತೆಯೂ ಇಲ್ಲ.

ಕೋಟಾದ ಅನುಭವದ ನಂತರ ನಮ್ಮ ವಿಜ್ಞಾನಿಗಳು ರಸಗೊಬ್ಬರಗಳ ಕಾರಖಾನೆಗಳಿಂದ ಹೊರ ಬೀಳುವ ಅಮೋನಿಯದ ಉಗಿಯಿಂದ ಭಾರ ಜಲವನ್ನು ತಯಾರಿಸುವುದಾಗಿ ಯೋಚಿಸಿದರು. ಅದಕ್ಕಾಗಿ ಗುಜರಾತದ ಬಡೋದೆ, ತಮಿಳುನಾಡಿನ ತುತ್ತಿಕೋರಿನ್ ಹಾಗೂ ಒಡಿಸ್ಸಾದ ತಲಚೇರಿಗಳಲ್ಲಿ ಪ್ರಯೋಗಗಳನ್ನು ನಡೆಸಲಾಯಿತು. ಈ ಪ್ರಯೋಗಗಳನ್ನು ನಡೆಸುವಾಗ ಎಪ್ಪತ್ತರ ದಶಕದಲ್ಲೂ ಎಂಭತ್ತರ ದಶಕದಲ್ಲೂ ಸ್ಫೋಟಗಳು ಸಂಭವಿಸಿ ಆಸ್ತಿಪಾಸ್ತಿಗೆ ಹಾನಿಯಾದದ್ದೂ ಅಲ್ಲದೆ ಸಾಕಷ್ಟು ಪ್ರಾಣಹಾನಿಯೂ ಆಗಿದ್ದರಿಂದ ಈ ಪ್ರಯೋಗಗಳು ತ್ರುಟಿರಹಿತವಾಗಿಲ್ಲ ಎನ್ನುವುದು ಅನುಭವಕ್ಕೆ ಬಂತು.

ಆಗ ಬಂದ ಅನುಭವವನ್ನು ಯಾರೂ ಮರೆಯಲಿಕ್ಕಿಲ್ಲ. ಉದಾಹರಣೆಗೆ ಬಡೋದೆಯನ್ನೇ ತೆಗೆದುಕೊಳ್ಳಿ. ಅಲ್ಲಿ ನಡೆಯುತ್ತಿದ್ದುದ್ದೆಲ್ಲ ಫ್ರೆಂಚ್ ಸಹಯೋಗಿತ್ವದಲ್ಲಿ. ಫ್ರೆಂಚ್ ಕಂಪನಿಗಳ ಒಂದು ಸಂಘಟನೆಯೆ ಅದಕ್ಕಾಗಿ ಮುಂದೆ ಬಂದಿತ್ತು. ಅಲ್ಲಿ ನೂರಕ್ಕೆ ನೂರರಷ್ಟು ಸಾಂದ್ರತೆಯ ಭಾರಜಲವನ್ನು ಉತ್ಪಾದಿಸುವುದಿತ್ತು. ಆದರೆ ಭಾರಜಲದ ಮಟ್ಟ ಶೇಕಡಾ ೭೦ ಕ್ಕಿಂತ ಹೆಚ್ಚು ಏರದಿದ್ದಾಗ ಆ ಫ್ರೆಂಚ್ ಕಂಪನಿಗಳು ಅರ್ಧ ದಾರಿಯಲ್ಲೇ ಮಾಯವಾದವು. ಆದರೆ ಮಾಯವಾಗುವ ಮುನ್ನ ತಮಗೆ ಬರಬೇಕಾದುದೆಲ್ಲವನ್ನೂ ತೆಗೆದುಕೊಳ್ಳಲು ಮಾತ್ರ ಅವು ಮರೆಯಲಿಲ್ಲ.

ಇದಾದ ನಂತರ ಜರ್ಮನ್ ತಂತ್ರಜ್ಞಾನದ ಸರದಿ. ಜರ್ಮನ್ ತಂತ್ರಜ್ಞಾನವನ್ನು ಅನುಸರಿಸಿಯೆ ನಾವು ಅನೇಕ ಯೋಜನೆಗಳನ್ನು ಕಾರ್ಯಗತಗೊಳಿಸಿದ್ದೇವೆ.

ಇದೆಲ್ಲ ನಡೆಯುತ್ತಿದ್ದಾಗ ಕಲ್ಪಾಕ್ಕಮ್‌ನ ಫಾಸ್ಟ್ ಬ್ರೀಡಿಂಗ್ ಟೆಸ್ಟ್ ರಿಯಾಕ್ಟರ್ ಅಥವಾ FBTR ಹೊಸ ಆಶೆಯನ್ನು ಹುಟ್ಟಿಸುತ್ತಿತ್ತು. ಭಾರತದಲ್ಲಿ ಅತ್ಯಂತ ಸಮೃದ್ಧವಾಗಿ ದೊರೆಯುವ ಥೋರಿಯಮ್‌ಅನ್ನು ವಿದಳನಶೀಲ ಯು-೨೩೩ ಆಗಿ ಪರಿವರ್ತಿಸುವ ಇದು ದೇಶಕ್ಕೆ ವರವೇ ಆಗಬಹುದಿತ್ತು.

ಆದರೆ ಎಪ್ಪತ್ತರ ದಶಕದಲ್ಲಿ ಕಾರ್ಯಾರಂಭ ಮಾಡಿದ ಇದು ಪರಮಾಣಶಕ್ತಿಯ ಮಾತಂತೂ

ದೂರ, ಉಳಿಯಿತು ಔಷ್ಣಿಕ ಶಕ್ತಿಯನ್ನು ಉತ್ಪಾದಿಸಿದ ಬಗೆಗೂ ನಾವಾರೂ ಕೇಳಿದ್ದಿಲ್ಲ.

ಈ ಯೋಜನೆ ವಿಫಲವಾಗಲು ಇರುವ ಕಾರಣಗಳು ಹಲವಾರು. ಇದಕ್ಕೆ ನಾವು ಅವಲಂಬಿಸಿದ್ದು ಫ್ರಾನ್ಸಿನ ತಂತ್ರಜ್ಞಾನವನ್ನು. ಆದರೆ ಈ ತಂತ್ರಜ್ಞಾನವನ್ನು ಆಧರಿಸಿ ಫ್ರಾನ್ಸಿನ ರಾಪ್ಸೊಡಿಯಲ್ಲಿ ತಯಾರಿಸಿದ ಘಟಕವೇ ಎಂದಿಗೂ ಸರಿಯಾಗಿ ಕೆಲಸ ಮಾಡಿದ್ದಿಲ್ಲ. ಅಂಥದರಲ್ಲಿ ನಾವು ತಂತ್ರಜ್ಞಾನವನ್ನು ಈ ಆಮದುಮಾಡಿಕೊಂಡೆವು. ಇದಕ್ಕೆ ಸಂಕೀರ್ಣ ಯಂತ್ರವ್ಯವಸ್ಥೆ. ಹಲವಾರು ಸಹಭಾಗಿತ್ವಗಳು. ಅಗತ್ಯದ ಭಾಗಗಳನ್ನು ತಯಾರಿಸಲು ಬೇರೆ ಬೇರೆಯವರೊಡನೆ ಪ್ರತ್ಯೇಕ ಒಪ್ಪಂದಗಳು ವಿದೇಶಿ ತಂತ್ರಜ್ಞಾನವನ್ನು ಬಳಸಿ ಸೋಡಿಯಂ ದ್ರವವನ್ನು ತಯಾರಿಸುವುದೂ ಅವುಗಳಲ್ಲಿ ಒಂದು.

೧೯೭೪ರಲ್ಲಿ ರಾಜಸ್ಥಾನದ ಪೋಖ್ರಾಣದಲ್ಲಿ ಪರೀಕ್ಷಾರ್ಥವಾಗಿ ಅಣುಸಾಧನವನ್ನು ಸ್ಫೋಟಿಸಿದ್ದು ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸಲು ಕಾರಣವಾಯಿತು. ಅಂತಾರಾಷ್ಟ್ರೀಯ ಪರಿಣತರು ಪರಮಾಣು ಸ್ಥಾವರಗಳನ್ನು ಪರಿಶೀಲಿಸಲು ಭಾರತ ಅನುಮತಿ ಕೊಡುವವರೆಗೆ ತಾವು ಭಾಗವಹಿಸುವುದಿಲ್ಲವೆಂದು ಹೇಳಿ ಫ್ರಾನ್ಸ್-ಕೆನಡಾಗಳೆರಡೂ ಯೋಜನೆಯಿಂದ ಹಿಂದೆಗೆದವು. ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾರಕವಾದುದರಿಂದ ಭಾರತ ಸರಕಾರ ಅದರಲ್ಲಿ ಭಾಗಿಯಾಗಲು ಸ್ವಾಭಾವಿಕವಾಗಿಯೆ ಒಪ್ಪಿಕೊಳ್ಳಲಿಲ್ಲ.

ಹೀಗೆ ವಿದೇಶಿ ತಜ್ಞರು ಕೆಲಸವನ್ನು ಅರ್ಧಕ್ಕೇ ನಿಲ್ಲಿಸಿ ಹಿಂದಿರುಗಿ ಹೋದದ್ದು ನಮ್ಮ ವಿಜ್ಞಾನಿಗಳಿಗೂ ಆಡಳಿತಗಾರರಿಗೂ ಒಳ್ಳೆಯ ನೆವವನ್ನು ಮಾತ್ರ ಒದಗಿಸಿಕೊಟ್ಟಿತು.

ಈ ಶತಮಾನ ಕೊನೆಗೊಳ್ಳುವ ಹೊತ್ತಿಗೆ ಭಾರತ ೧೦,೦೦೦ ಮೆಗ್ಯಾವ್ಯಾಟುಗಳಷ್ಟು ಶಕ್ತಿಯನ್ನು ಪರಮಾಣು ಮೂಲದಿಂದ ಉತ್ಪಾದಿಸುವ ಕನಸು ಕನಸಾಗಿಯೇ ಉಳಿಯಲಿದೆ. ಇಂದು ನಮ್ಮ ದೇಶದಲ್ಲಿ ಉತ್ಪನ್ನವಾಗುವ ವಿದ್ಯುತ್ತಿನಲ್ಲಿ ಪರಮಾಣುಶಕ್ತಿಯ ಪಾತ್ರ ಶೇಕಡಾ ಒಂದೂವರೆಯಷ್ಟು ಮಾತ್ರ.

ಇಷ್ಟೆಲ್ಲ ಆಗುತ್ತಿರುವಾಗ ಥ್ರೀ ಮೈಲ್ ಐಲೆಂಡ್ ಹಾಗೂ ಚೆರ್ನೋಬಿಲ್ ದುರಂತಗಳಿಂದಾಗಿಯೂ ಪರಿಸರವಾದಿಗಳ ಪ್ರತಿಭಟನೆಯಿಂದಾಗಿಯೂ ಇಡೀ ಜಗತ್ತೆ ಪರಮಾಣು ಸ್ಥಾವರಗಳ ಯೋಜನೆಗಳಿಂದ ಪರಾಂಙ್ಮುಖವಾಗುತ್ತಿದೆ. ಆದರೆ ಪರಮಾಣು ಯೋಜನೆಗಳನ್ನು ಹೇಗೆ ಅಭಿವೃದ್ಧಿಪಡಿಸಬೇಕು ಎಂಬ ಬಗೆಗೇ ನಮಗೆ ಖಚಿತವಾದ ಧೋರಣೆಯಿಲ್ಲ. ಅಸ್ಪಷ್ಟವಾದ ಪಥದಲ್ಲಿ ಹಾಗೆಯೆ ಮುಂದುವರೆಯುತ್ತಿದ್ದೇವೆ. ●

## ಕಾಲದ ಬೆಲೆ

**ಸು**ಪ್ರಸಿದ್ಧ ವಿಜ್ಞಾನಿ ಹಾಗೂ ರಾಜಕಾರಣಿ ಬೆಂಜಮಿನ್ ಫ್ರಾಂಕ್‌ಲಿನ್ ಒಂದು ಕಾಲದಲ್ಲಿ ಪುಸ್ತಕದ ಅಂಗಡಿಯೊಂದನ್ನು ನಡೆಸುತ್ತಿದ್ದರು. ಒಂದು ದಿನ ಅವರ ಅಂಗಡಿಗೆ ಬಂದ ಗಿರಾಕಿಯೊಬ್ಬ ಪುಸ್ತಕವೊಂದರ ಬೆಲೆ ಎಷ್ಟು? ಎಂದು ಕೇಳಿದ. ಒಂದು ಡಾಲರ್ ಎಂದ ಅಂಗಡಿಯ ಮಾರಾಟಗಾರ. ಬೆಲೆಯಲ್ಲಿ ಸ್ವಲ್ಪ ಚೌಕಾಶಿ ಮಾಡಬಯಸಿದ ಗಿರಾಕಿ, "ಸ್ವಲ್ಪ ನಿಮ್ಮ ಮಾಲಿಕನನ್ನು ಕರೆಯಿರಿ," ಎಂದು ಕೇಳಿದ. ಆಗ ಕೌಂಟರಿಗೆ ಬಂದ ಫ್ರಾಂಕ್ಲಿನ್, "ಈಗ ಈ ಪುಸ್ತಕಕ್ಕೆ ಒಂದೂವರೆ ಡಾಲರು. ನೀವು ಇನ್ನೂ ಚೌಕಾಶಿ ಮಾಡುತ್ತಾ ನನ್ನನ್ನು ಇಲ್ಲಿಯೇ ನಿಲ್ಲಿಸಿಕೊಂಡರೆ ಅದರ ಬೆಲೆ ಏರುತ್ತಲೇ ಹೋಗುತ್ತದೆ. ಏಕೆಂದರೆ ಅದರಿಂದ ಬೆಲೆ ಬಾಳುವ ನನ್ನ ಸಮಯ ವ್ಯರ್ಥವಾಗುತ್ತದೆ," ಎಂದ. ಗಿರಾಕಿ ಮರು ಮಾತಾಡದೆ ಹೇಳಿದ ಬೆಲೆಯನ್ನು ತೆತ್ತು ಪುಸ್ತಕವನ್ನು ಕೊಂಡುಕೊಂಡ.

● **ಕೆ. ವೆಂಕಣ್ಣಾಚಾರ್**

# "ಭಾರೀ ಸಮೀಪದವನ ಆದಿ!"



## ಬೇಂದ್ರೆ ನೆನಪು

**ಸು**ಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ನಾನು ಬೇಂದ್ರೆಯವರನ್ನು ದೂರದಿಂದ ಕಂಡಿದ್ದೆ. ಭಾಷಣ ಕೇಳಿದ್ದೆ. ಕಾವ್ಯ ವಾಚನದ ಮಧುರ ಸವಿಯನ್ನೂ ಉಂಡಿದ್ದೆ. ಆದರೆ ಸಮೀಪದಿಂದ ಮಾತ್ರ ಅವರನ್ನು ಕಂಡಿರಲಿಲ್ಲ....

ಆಕಸ್ಮಾತ್ ನನಗೆ ಅವರ ಸುಮಧುರ ಸಂಗ ಲಭ್ಯವಾಯ್ತು. ಅದು ಹೀಗೆ....

ಸ್ವ. ರಾವ್‌ಬಹಾದ್ದೂರರ ಮಗ, ವಾದಿರಾಜ, ನನ್ನ ಜೀವದ ಗೆಳೆಯ. ನ್ಯೂ ಇಂಗ್ಲೀಷ್ ಸ್ಕೂಲಿನಲ್ಲಿ ಸಹಪಾಠಿಯೂ ಆಗಿದ್ದವ. ಆತ ಮಹಾರಾಷ್ಟ್ರದ ಔರಂಗಾಬಾದ್ (ಜಗದ್ವಿಖ್ಯಾತ ಅಜಂತಾ ಎಲ್ಲೋರಾಗಳಿಗೆ ಹತ್ತಿರವಾದ ಶಹರ)ದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಓವರ್ - ಸೀಯರ್ ಕೆಲಸದಲ್ಲಿದ್ದ. ವಾದಿರಾಜ ನನಗೆ ಅನೇಕ ಸಲ ಪತ್ರ ಬರೆದು, "ನಾನು ಔರಂಗಾಬಾದ್‌ದಿಂದ ವರ್ಗವಾಗುವ ಮುನ್ನವೇ ಇಲ್ಲಿಗೆ ಬಂದು ಅಜಂತಾ, ಎಲ್ಲೋರಾ ನೋಡಿಕೊಂಡು ಹೋಗು," ಎಂದು ದುಂಬಾಲು ಬಿದ್ದಿದ್ದ. ಅದಕ್ಕೆ ವೇಳೆ ಕೂಡಿಬಂತು. ನಾನು ನನ್ನ ಹೆಂಡತಿ ಔರಂಗಾಬಾದ್‌ಗೆ ಹೋದೆವು. ರಾವ್‌ಬಹಾದ್ದೂರ್‌ರ ಧರ್ಮಪತ್ನಿ ಸೀತಾಬಾಯಿಯವರೂ ಮಗ-ಸೊಸೆಯೊಂದಿಗೆ ಕೆಲದಿನ ವಾಸಿಸಲು ಅಲ್ಲಿಗೆ ಬಂದಿದ್ದರು. ಬೆಳಿಗ್ಗೆ ಅಜಂತಾಕ್ಕೆ ಹೋಗುವ ಬಸ್ ಏರಿದೆವು. ಕುತೂಹಲದಿಂದ ನಾನು ಅತ್ತ ಇತ್ತ ಕಣ್ಣಾಡಿಸಿದೆ. ಆಶ್ಚರ್ಯ! ನನ್ನ ಮುಂದಿನ ಸೀಟಿನಲ್ಲಿ ಬೇಂದ್ರೆ, ಹಾಗೂ ಔರಂಗಾಬಾದ್‌ದಲ್ಲಿದ್ದ ಅವರ ಅಳಿಯ, ಮಗಳು, ಮೊಮ್ಮಗ ಆಸೀನರಾಗಿದ್ದರು! ಉಲನ್ ಟೊಪ್ಪಿಗೆ ಬೇಂದ್ರೆಯವರ ಮುಖ ಆವರಿಸಿದ್ದರೂ ನಾನವರ ಗುರುತು ಹಿಡಿದು ಪಕ್ಕದಲ್ಲಿದ್ದ ನನ್ನ ಹೆಂಡತಿಯ ಕಿವಿಯಲ್ಲಿ "ಬೇಂದ್ರೆ ಬಂದಾರ ನೋಡು!" ಎಂದು ಪಿಸುಗುಟ್ಟಿದೆ. ಅಜ್ಜನ ಕಿವಿ ಬಲು ಚುರುಕು. "ಏನೋ ತಮ್ಮಾ ಕನ್ನಡ ಮಾತ್ನಾಡ್ತಿಯಲ್ಲಾ.... ಯಾ ಊರಾಂವಾ?" ಎಂದು ಕೇಳಿಯೇಬಿಟ್ಟರು.

"ನಾ ಹುಬ್ಬಳಿಯಾಂವಾ (.... ಇನ್ನೂ ಯಾಕ ಬರಲಿಲ್ಲಂವಾ ಹುಬ್ಬಳ್ಳಿಯಾಂವಾ...) ನರೇಗಲ್ ಮಾಸ್ತರ ಶಿಷ್ಯಾ. ಇತ್ತೀಚೆಯಿಂದ ಅವರ ಬಳಗ

ಕೂಡಾ! ನರೇಗಲ್ಲ ಮಾಸ್ತರರ ಹಿರೇ ಸೊಸಿ (ರನ್ನನ ಹೆಂಡತಿ) ಮತ್ತ ನನ್ನ ಹೆಣ್ತಿ ಅಕ್ಕಾ-ತಂಗಿ," ನಾನೂ ಅಚ್ಚ ಧಾರವಾಡಿ ಭಾಷೆಯಲ್ಲೆ ಉತ್ತರಿಸಿದೆ.

"ಎಲಾ ಇವ್ನ, ಭಾರೀ ಸಮೀಪದವನs ಆದಿ! ಛೊಲೋ ಆತು: ನಮ್ಮ ಜೋಡೀನs ಅಜಂತಾ ನೋಡ್ಲಿಕ್ಕೆ ಬರ್ರಿ" ಆಮಂತ್ರಣವಿತ್ತರು.

ಬೇಂದ್ರೆ ವಿ.ಆಯ್.ಪಿ. ಗೆಸ್ಟ್! ಗುಹೆಗಳಲ್ಲಿಯ ಬಣ್ಣದ ಚಿತ್ರಕಲೆ ವೀಕ್ಷಿಸಲು ವಿಶೇಷ ಚಲಿಸುವ ವಿದ್ಯುದ್ದೀಪದ ವ್ಯವಸ್ಥೆ ಮಾಡಿದ್ದರು. ಬೇಂದ್ರೆ ತಾತ ನಮ್ಮನ್ನು ಮುಂದೆ ಹಾಕಿಕೊಂಡು, ತಾವು ಹಿಂದೆ ಇರುಗುತ್ತಿದ್ದರು ನಾವೂ ವಿದ್ಯುದ್ದೀಪದ ಬೆಳಕಿನಲ್ಲೇ ಚಿತ್ರಕಲೆ ನೋಡಲೆಂದು! ಅವರ ಮೊಮ್ಮಗ್ಗ ಬಲು ಚೂಟಿ. ಚಿತ್ರಕಲೆ ನೋಡುತ್ತಾ, ಒಂದು ಕಾಗದ ದಲ್ಲಿ ತಾನೂ ಚಿತ್ರ ಬಿಡಿಸುತ್ತಾ ಹೊರಟಿದ್ದ. ಅವನ ತಂದೆ ಮಗನಿಗೆ ಏನೋ ಹೇಳಿದರು ಮರಾಠಿ ಯಲ್ಲಿ. ಬೇಂದ್ರೆ ಅಳಿಯನಿಗೆ ತಾಕೀತು ಮಾಡಿ ದರು, "ಅಂವಗ ಏನೂ ಹೇಳಬ್ಯಾಡಾ: ಅವನ ಮನಸ್ಗೆ ಹ್ಯಾಂಗ ಅನ್ನಿಸ್ತದೋ ಹಾಂಗ ತೆಗೀಲಿ. ಆಮ್ಯಾಲೆ ಬೇಕಾದ್ರ ತಿದ್ದೀಯಂತ."

ಅಲ್ಪೋಪಹಾರದ ವ್ಯವಸ್ಥೆಯಾಗಿತ್ತು. ಅದರಲ್ಲಿ ನಾವೂ ಸಹಭಾಗಿಗಳು.

ಬೇಂದ್ರೆಯವರೊಂದಿಗೆ ಔರಂಗಾಬಾದ್-ಅಜಂತಾ-ಎಲ್ಲೋರಾಗಳಲ್ಲಿಯ ರಸ ನಿಮಿಷ ನನ್ನನ್ನು "ಶ್ರೀಮಾತಾ"ದತ್ತ ಸೆಳೆಯಿತು ಚುಂಬಕದಂತೆ. ಅನಂತರ ಐದಾರು ಸಲ ಬೇಂದ್ರೆ ಯವರನ್ನು ಕಾಣಲೆಂದೇ ಸಾಧನಕೇರಿಗೆ ಹೋಗಿದ್ದೆ. ಹೋದಾಗಲೆಲ್ಲ "ಓಹೋ! ನೀ ಔರಂಗಾಬಾದ್ ದಾಗ ಭೆಟ್ಟಿಯಾದಾಂವಲ್ಲ?" ಎಂದು ತಪ್ಪದೆ ವಿಚಾರಿಸುತ್ತಿದ್ದರು.

ಒಂದು ಸಲ ಪುಟ್ಟ ಕವನ ಬರೆದು ಅವರ ಆಶೀರ್ವಾದ ಕೋರಿದೆ. ಓದುವಂತೆ ಹೇಳಿದರು. "ಛೊಲೋ ಅದ- ಇನ್ನಷ್ಟು ಸುಧಾರಿಸಬೇಕು," ಎಂದು ಬರೆದು ಸಹಿ ಮಾಡಿದ್ದರು.ವಿಷ್ಣು ಸಹಸ್ರ ನಾಮ, ಗಣಪತಿ ಸ್ತೋತ್ರ, ಪುದುಚೆರಿಯ ಶ್ರೀ ಅರವಿಂದ-ಮಾತಾ ಅವರ ಕೆಲ ಸಾಹಿತ್ಯ ಓದಲು ಕೊಟ್ಟಿದ್ದರು!! ಇವೆಲ್ಲ ಈಗ ನನ್ನ ಪಾಲಿನ ಅಮೂಲ್ಯ ಆಸ್ತಿ.

ನಾಸ್ತಿಕವಾದಿಗಳೆಂದರೆ ಅವರಿಗೆ ಅಷ್ಟಕ್ಕಷ್ಟೆ. ಅದನ್ನು ಅವರು ಅನೇಕ ಸಲ ನನ್ನ ಮುಂದೆ ಅಂದೂ ತೋರಿಸಿದ್ದಾರೆ. ಪ್ರತಿಸಲ ಬೀಳ್ಕೊಡು ವಾಗ ಅವರ ಮನೆಯ ಸಂಪ್ರದಾಯದಂತೆ, ಒಂದು ಚಮಚೆ ಸಕ್ಕರೆ ಕೊಟ್ಟು ಬಾಯಿ ಸಿಹಿ ಮಾಡಿ ಕಳುಹುತ್ತಿದ್ದರು ಬೇಂದ್ರೆ. ನರಕ ಚತುರ್ದ ಶಿಯ ದಿನ ಸ್ವರ್ಗವಾಸಿಗಳಾದಾಗ ತೀರಾ ಹತ್ತಿರದ ರಕ್ತ-ಸಂಬಂಧಿಕರು ತೀರಿಕೊಂಡಾಗ ಆದ ಸಂಕಟ-ದುಃಖವಾಯ್ತು. ಆ ದಿನ ದೀವಳಿಗೆ ಸಿಹಿಗೆ ಕಹಿ ಲೇಪನವಾಗಿತ್ತು!

**• ವಾಸುದೇವ್ ರಾ. ಕಲಘಟಗಿ**

---

# ಕದ್ದು ತಿಂದರೆ?

ಜನರಲ್ಲಿ ವಾಚನಾಭಿರುಚಿ ಬೆಳೆಸಲು ಧಾರವಾಡದಲ್ಲೊಂದು ಗ್ರಂಥಾಲಯ ನಡೆಸುತ್ತಿದ್ದ ಆಲೂರು ವೆಂಕಟರಾಯರು ಒಮ್ಮೆ ಎಳೆಂಟು ದಿನಗಳ ಮಟ್ಟಿಗೆ ಪರವೂರಿಗೆ ಹೋಗಬೇಕಾಗಿ ಬಂದಾಗ, ಯುವಕ ಬೇಂದ್ರೆಯವರನ್ನು ಕರೆದು, ಗ್ರಂಥಾಲಯ ಕೀಲಿ ಕೈ ಕೊಟ್ಟು, ತೆರೆದುಕೊಂಡು ಕೂರಲು ಹೇಳಿದರಂತೆ.

ಗ್ರಂಥಾಲಯ ತೆರೆದಿರುವ ಸಮಯವನ್ನು ಹೊರತುಪಡಿಸಿ ಮತ್ತಷ್ಟು ಕಾಲ ಪುಸ್ತಕ ಓದಲಾಗದಿದ್ದುದಕ್ಕೆ ಹಳಹಳಿಸಿದ್ದ ಬೇಂದ್ರೆ ರಾತ್ರಿ ಓದಲೆಂದು ಅಲ್ಲಿಂದ ಹತ್ತಾರು ಪುಸ್ತಕಗಳನ್ನು ರೂಮಿಗೆ ತೆಗೆದುಕೊಂಡು ಹೋದರಂತೆ.

ಅಕಸ್ಮಾತ್ ಎರಡು ದಿನ ಮುಂಚಿತವಾಗಿಯೇ ಮರಳಿ ಬಂದ ವೆಂಕಟರಾಯರು ಗ್ರಂಥಾಲಯದ ಕೆಲ ಪುಸ್ತಕಗಳು ಮಾಯವಾಗಿರುವುದನ್ನು ಕಂಡು ಬೇಂದ್ರೆ ವಾಸಿಸುತ್ತಿದ್ದ ಕೋಣೆಗೆ ರಾತ್ರಿ ಹೋಗಿ ನೋಡಿದರು. ರಾತ್ರಿ ಏಕಾಏಕಿಯಾಗಿ ಬಂದ ವೆಂಕಟರಾಯರನ್ನು ಕಂಡು ಬೇಂದ್ರೆ ತಬ್ಬಿಬ್ಬು. ಆಲೂರರು ಮಾತ್ರ ನಗುತ್ತಲೇ ''ಭಲೇ, ಕದ್ದು ಉತ್ತತ್ತಿ ತಿಂದ್ರ ಟಾನಿಕ್ ಆಗದs ಇರ್ತದೇನು?" ಎಂದು ಬೇಂದ್ರೆಯವರ ಜ್ಞಾನದಾಹವನ್ನು ಮೆಚ್ಚಿ, ಉತ್ತೇಜನ ನೀಡಿದರಂತೆ!

**• ಈರಪ್ಪ ಎಂ. ಕಂಬಳಿ**



# ಸರಕಾರಿ ಆಸ್ಪತ್ರೆಗಳೋ? ತಿಗಣೆಗಳ ತಾಣಗಳೋ?

• ನಿವೇದಿತಾ ದೇಸಾಯಿ

'ಈ ಸಲವಾದರೂ ಶಸ್ತ್ರಚಿಕಿತ್ಸೆ ಮುಗಿದು ಬಿಟ್ಟರೆ ನಿನಗೆ ಜೋಡುಗಾಯಿ ಒಡೆಸುತ್ತೇನೆ'ಂದು ಆ ವೃದ್ಧ ಮನೆದೇವರಲ್ಲಿ ಹರಕೆ ಹೊತ್ತೇ ಆಪರೇಶನ್ ಥಿಯೇಟರಿನೊಳಗೆ ಹೋದ. ತನಗೆ ಕೊಟ್ಟ ಹದಿಮೂರನೇ ಸಂಖ್ಯೆ ಒಂದಷ್ಟು ಅನುಮಾನ ಹುಟ್ಟಿಸಿತಾದರೂ 'ಛೆ, ಇದೆಲ್ಲ ಭ್ರಮೆ. ಸ್ವತಃ ದೊಡ್ಡ ಡಾಕ್ಟರಮ್ಮನೇ ಈ ಸಲ ಖಂಡಿತ ನಿನ್ನ ಆಪರೇಶನ್ನಾಗುತ್ತದೆ' ಎಂಬ ಭರವಸೆ ಇತ್ತಿದ್ದಾರೆಂದ ಮೇಲೆ ಆಗೇ ಆಗುತ್ತದೆಂಬ ನಂಬಿಕೆಯೊಂದಿಗೆ ಆಚೀಚೆಗೆ ದೃಷ್ಟಿ ಹರಿಸಿದ. ಒಂದಷ್ಟು ಪರಿಚಿತ ಮುಖಗಳು ಪರಸ್ಪರ ನಗೆಯ ವಿನಿಮಯ ಮಾಡಿಕೊಂಡವು. ಅಲ್ಲಿದ್ದವರು ಸುಮಾರು ಮೂವತ್ತು ರೋಗಿಗಳಿರಬೇಕು... ಆ ಪೈಕಿ ಈಗಾಗಲೇ ತನ್ನಂತೆ ಹೀಗೆ ಆಪರೇಶನ್ನಿಗೆ ಸಿದ್ಧವಾಗಿ ಥಿಯೇಟರಿನ ಪಕ್ಕದ 'ಕಾಯುವ ಕೋಣೆ'ಯಲ್ಲಿನ ಕಾಟ್‌ಗಳ ಮೇಲೆ ಅನೇಕ ಬಾರಿ ಮಲಗಿ ಮರಳಿ ಹೋಗಿದ್ದ ಎಂಟತ್ತು ಮಂದಿ ಕಂಡರು.

ತಾನೇ ಶಸ್ತ್ರಕ್ರಿಯೆ ನಡೆಸುವವನೇನೋ ಎಂಬ ಗತ್ತಿನಿಂದಲೇ ಬಂದು ಈ ಜನರನ್ನೆಲ್ಲ ಒಮ್ಮೆ

ನೋಡಿ ಮರೆಯಾದ ವಾರ್ಡ್‌ಬಾಯ್ ಕ್ಷಣಾರ್ಧದಲ್ಲೇ ಮತ್ತೆ ಕಾಣಿಸಿಕೊಂಡ. ಹತ್ತು ಹದಿನೈದು ಸಂಖ್ಯೆಗಳನ್ನು ಬಡಬಡನೆ ಒದರಿದ. ಆ ಸಂಖ್ಯೆ ಹೊತ್ತವರ ಮುಖಗಳೆಲ್ಲ ಅರಳಿದವು. ಅವರೆಲ್ಲ 'ಫೋಟೋ ತೆಗೆಸಿಕೊಳ್ಳುವವರ ಸಂಭ್ರಮ'ದಿಂದ ಹಾಸಿಗೆಯ ಮೇಲೇ ಎದ್ದು ಕೂತು ಸಿದ್ಧರಾಗತೊಡಗಿದ್ದಂತೆಯೆ ವಾರ್ಡ್‌ಬಾಯ್ ಹೇಳಿದ.

"ನೀವೆಲ್ಲ ಮುಂದಿನ ವಾರ ಬನ್ನಿ. ಗ್ಯಾಸ್ ತೀರಿದೆ..."

ಈ ಸಲವಾದರೂ ಯಾವ ಮಾತನ್ನು ತಾನು ಕೇಳಲಿಕ್ಕಿಲ್ಲ ಎಂದುಕೊಂಡಿದ್ದನೋ ಅದೇ ಮಾತು ರಪ್ಪನೆ ರಾಚಿದಾಗ ಆ ವೃದ್ಧ ನೆಲಕ್ಕೆ ಕುಸಿಯುವುದೊಂದೇ ಬಾಕಿ. ಮುಖ ಒಣಗಿಸಿಕೊಂಡು ಆ ಸಂಖ್ಯೆ ಹೊತ್ತವರೆಲ್ಲ ಶಂಕೆ ಹೊತ್ತು ಹೊರಗೆ ಹೊರಟರು.

"ಇದೇನಾಟಾ ಹಚ್ಯಾರೋ ಇವ್ರು? ಕೇಳಿದಾಗೊಮ್ಮೆ ಗ್ಯಾಸಿಲ್ಲಾ-ಗ್ಯಾಸಿಲ್ಲಾ ಅಂತ..."

"ಅಲ್ಲಾ, ನಮ್ಮುಂದs ನಾಕ ಮಂದಿನ್ನ ಒಳಗ ಕರ್ಕೊಂಡ ಹ್ವಾದ್ರೂ...."

"ಅವರಿಗ್ಯಾದ್ರ ಗ್ಯಾಸೈತಿ.... ನಾವೇನ ಕುಂತೀ ಮಕ್ಕಳs?"



ಗಂಟು ಮೂಟೆ ಕಟ್ಟಿಕೊಂಡು ಕಿರಿಯ ವೈದ್ಯನೊಬ್ಬನ ಸಲಹೆಯಂತೆ ಬಿಡುಗಡೆ ಪತ್ರ ಪಡೆದು ಸಣ್ಣ ಮೋರೆಯೊಂದಿಗೆ ವಾರ್ಡಿನಿಂದ ಹೆಜ್ಜೆ ಕಿತ್ತುತ್ತಿದ್ದ ಆ ವೃದ್ಧನಿಗೆ ಇನ್ನೊಬ್ಬ ರೋಗಿ ಹೇಳಿದ- "ಪುಣಿವಂತ ಆದೀ ಹೋಗ ಮಾರಾಯಾ. ಇವತ್ತs ಆಪ್ರೇಸನ್ನಾಗಿದ್ರ ಇತ್ತ ನಿನ ಫಜೀತಿ."

"ಯಾಕೋ ಎಪ್ಪಾ... ಎಂತಾ ಫಜೀತಿ?"

"ಒಂದss ಆದ್ರ ಹೇಳೇನು. ನಾಕಾರ ನಮೂನೀವದಾವೋ ಎಪ್ಪಾ.... ಯಾವದಂತ ಹೇಳಲಿ? ಇಕಾ, ನಾ ಅನಬೋಗ್ಸಾಕತ್ತೀನ್ನೋಡು. ಹಗಲೊತ್ತಿನ್ಯಾಗ ಕೆಟ್ಟ ಶೆಕಿ. ಈ ಕಾಲಕಟ್ಟಿ ಒಗದಿದ್ದಿಲ್ಲಾ ಅಂದ್ರ ನಾ ತುಸಾ ಗಾಳಿಗ್ಯಾರೇ ಹೋಗೀ ಬಂದೂ ಮಾಡಾಕಾಕ್ಕಿತ್ತು. ಇನ್ನ ಚೆಂಜ್ಯಾತು ಅಂದ್ರ ಮೈ ನಡುಗತ್ತೋ ಯಜಮಾನಾ. ಢೀಗಗಟ್ಲೆ ಬಂದು ಡ್ಯೂಟಿ ಸುರೂ ಮಾಡತಾವು ತಗಣಿಗೋಳು. ಮೈಯಾಗೇನ ನೆತ್ತರೈತಿ ಅಂತ ಬಂದಬಂದು ಕಾಡತಾವೋ? ಕಣ್ಣ್ಗೆ ಕಣ್ಣು ಹಚ್ಚ್ದಟಿ ರಾತ್ರೆಲ್ಲಾ ತಗಣಿ ವರದೂ ವರದೂ ಕೈ ಒರಟು ಬರತಾವು. ಸಾಲದೂ ಅಂತ ಹಾಡಿಕೋಂತ ಹಾರ್ಯಾಡಿಕೋಂತ ಬಂದು ಚೂಜೀ ಚುಚ್ಚಿದಂಗ ಮಾಡೂ ಗುಂಗಾಡದ ಕಾಟಾ. ಅಂತೂ ಇಂತೂ ಬೆಳಗಾಮುಂಜೇಲೆ ಕೋಳಿ ಕೂಗೂ ಹೊತ್ತಿಗೆ ಹೀಂಗ ಕಣ್ಣ್ಗೆ ಕಣ್ಣು ಹತ್ತಿಗೊಂಡ್ವು ಅನ್ನೂದ್ರಾಗs ಓಲ್ಯೋ ಎಪ್ಪಾ.... ಆ ಪಾಯ್ಖಾನಿಯಿಂದ ಉಗ್ಗಿ ಬರತೈತಿ ಕೆಟ್ಟ ವಾಸ್ನಿ... ವ್ಯಾ..... ನರಕಾ, ನರಕೋ ಎಪ್ಪಾ ಇದು. ಅಚೀ ಕಡೆ ಕ್ವಾಣ್ಯಾಗ ಒಂದೀಟ ಪಾಡಿತ್ತು. ಇಕಾ ಇಲ್ಲೆ ತಂದ ಒಗೆದಾರ ನೋಡ ನನ್ನ.... ಪಾಯ್ಖಾನೀ ಹತ್ತರದ ಹಾಸಿಗ್ಯಾಗ.... ಯಜಮಾನಾ, ಒಂದ ಮಾತ ಹೇಳತೇನ ಕೇಳು. ಇಲ್ಲೇನ ದೊಡ್ಡ ಡಾಕ್ಟರದಾರಲಾ.... ಅವರ್ನ ಹಿಡಿ, ಕೆಲಸಾಕೈತಿ."

**ಅಬ್ಬಾ, ನಮ್ಮ ಸರಕಾರಿ ಆಸ್ಪತ್ರೆಗಳೆಂದರೆ ಅಕ್ಷರಶಃ ನರಕಗಳು.
ನಮ್ಮ ಅರಿವಿಗೆ ಬಾರದಂತೆ ಅಲ್ಲಿ ಹಬ್ಬುವ ರೋಗಗಳು - ಅದೆಷ್ಟೋ!**

"ಅಂದ್ರ?"

"ಅವರದು ಒಂದ್ ಸ್ವಂತ ದವಾಖಾನ್ಯೈತೇ ನಪಾ. ಏನೋ ಒಂದೀಟ ರೊಕ್ಕ ಕರ್ಚಾದೀತು. ಜೀವದಕಿಂತಾ ರೊಕ್ಕ ಹೆಚ್ಚೇನು? ಹೋಗಿ ಕೇಳಲ್ಲಾ.... ಕೆಲಸಾಕೈತಿ. ಇದರಾಗೇನರೆ ಹೈ-ಗೈ ಮಾಡಿದಿ ಅಂದ್ರ ನನ್ನಂಗs ಈ ನರಕದಾಗ ನೆಳ್ಳಿಕೋಂತ ಬೀಳಬೇಕಾಕ್ಕೈತಿ..."

ವೃದ್ಧ ಏನು ಮಾಡುವುದೆಂದು ತೋಚದೆ



**ಹೀಗೊಂದು ಹಾಸಿಗೆ!**

ತಲೆತುರಿಸಿಕೊಂಡ. ಹಾಗೆಯೇ ಸುತ್ತೆಲ್ಲ ಕಡೆ ದೃಷ್ಟಿ ಹರಿಸಿದ. ಇದುವರೆಗೆ ಕೇಳಿದ್ದೆಲ್ಲ ಕಣ್ಣ ಮುಂದೆಯೇ ಕಂಡಿತು. ಒಮ್ಮೆ ಒಳಂಗಿಯ ಕಳ್ಳಗಿಸೆಯನ್ನು ತಟ್ಟಿಕೊಂಡು ನೋಡಿ ಏನೋ ನಿರ್ಧಾರಕ್ಕೆ ಬಂದ ವನಂತೆ ಅಲ್ಲಿಂದ ಧಡಬಡನೆ ನಡೆದುಬಿಟ್ಟ.

ಹೌದು, ಆದರೆ ಹೀಗೆ ಇಂಥಲ್ಲಿಂದ ನಡೆದು ಬಿಡುವ ನಿರ್ಧಾರಕ್ಕೆ ಬರಲು ಎಷ್ಟು ಜನಕ್ಕೆ ಸಾಧ್ಯ? ಆ ವೃದ್ಧನಾದರೂ ದುಡ್ಡು ಹೆಚ್ಚಾಗಿ ಅಲ್ಲಿಂದ ತೆರಳಿದನೆ? ಊಹುಂ. ಆತನಿಗೆ ನಾಲ್ಕು ಬಾರಿ ಮುರಿದು ಡೊಂಕಾದ ತನ್ನ ಕೈಯನ್ನು ಶಸ್ತ್ರಕ್ರಿಯೆಯ ಮೂಲಕ ನೇರವಾಗಿಸಿಕೊಳ್ಳುವ ಇಚ್ಛೆಯಿತ್ತು. ತಕ್ಕ ಮಟ್ಟಿಗೆ ಸ್ಥಿತಿವಂತನೇ ಅನ್ನಬಹುದಾದ ಆತ ದೂರದ ಊರಿನಲ್ಲಿರುವ ಮಗ, ಮಗಳಿಗೆ ಯಾಕೆ ವೃಥಾ ತೊಂದರೆ ಎಂದು ಯೋಚಿಸಿ ಇಲ್ಲಿ ಈ ಸರಕಾರಿ ಆಸ್ಪತ್ರೆಗೆ ಬಂದಿದ್ದ. ಇಲ್ಲಿನ ಸ್ಥಿತಿಯನ್ನು 'ಅನುಭವಿಸಿದ' ಆತ ಇಂಥ ನಿರ್ಧಾರಕ್ಕೆ ಬರದೆ ಏನು ಮಾಡಿಯಾನು?

ಇದೆಲ್ಲ ಸರಿ. ಆದರೆ ಬಡವರ ಪಾಡೇನು? ನಮ್ಮ ದೇಶದಲ್ಲಿ ಬಹುಸಂಖ್ಯಾತರಾಗಿರುವ ಕೂಲಿ ಯಾಳುಗಳ, ಕಾರ್ಮಿಕರ, ನಿರುದ್ಯೋಗಿ, ನಿರಕ್ಷರಿ ಗಳ ಗತಿಯೇನು? ಹದಗೆಟ್ಟ ಆರೋಗ್ಯವನ್ನು ಒಂದು ಹದಕ್ಕೆ ತಂದುಕೊಳ್ಳುವುದೆಂದರೆ ಈಗಿನ ದಿನಮಾನಗಳಲ್ಲೇನು ಅಷ್ಟು ಸುಲಭವೆ? ಚಿಕಿತ್ಸೆ-ಶುಶ್ರೂಷೆಗಳೆಂದರೆ ಒಂದು ಕಾಲದಲ್ಲಿ ಪವಿತ್ರ ಕಾರ್ಯವೆಂದೆನಿಸಿತ್ತು.

ಈಗ?

ಅದರಂಥ ಲಾಭದಾಯಕ ವೃತ್ತಿಯೇ ಬೇರೊಂದಿಲ್ಲ. ಅಂದ ಮಾತ್ರಕ್ಕೆ ವೈದ್ಯ ಸಮುದಾ ಯದ ಎಲ್ಲರೂ 'ಹಣಹದ್ದು'ಗಳೇ ಎಂದೇನಲ್ಲ. ಅಪರೂಪಕ್ಕೊಬ್ಬ ದಯಾಮಯಿ ಡಾಕ್ಟರನೂ ಕಾಣಸಿಗುತ್ತಾನೆ.

ಖಾಸಗಿ ನರ್ಸಿಂಗ್ ಹೋಮ್‌ಗಳು ಶ್ರೀ ಸಾಮಾನ್ಯನ ಪಾಲಿಗೆ 'ಮುಗಿಲಮಲ್ಲಿಗೆ'ಯಾಗಿ ಬಿಟ್ಟಿರುವ ಈ ಕಾಲದಲ್ಲಿ ಗರೀಬರಿಗೂ ಗಮಾರ ರಿಗೂ ಸರಕಾರಿ ಆಸ್ಪತ್ರೆಗಳೇ ಗತಿ. ಆದರೆ ಅಲ್ಲಿ ಎಲ್ಲವೂ ಸರಿಯಾಗಿದೆಯೆ? ಸಮುದಾಯ ಆರೋ ಗ್ಯಕ್ಕಾಗಿ ಸರಕಾರ ಪ್ರತಿ ಬಜೆಟ್ಟಿನಲ್ಲೂ ಗಮನಾರ್ಹ ಹಣವನ್ನು ತೆಗೆದಿರಿಸುತ್ತದೆ. ಅಂಕಿ-ಸಂಖ್ಯೆಗಳು ಕೇವಲ ಕಾಗದ-ಕಡತಗಳಲ್ಲಿ ಮಾತ್ರ ಕಣ್ಣು ಕುಕ್ಕಿ ಸುವಂತೆ ರಾರಾಜಿಸುತ್ತವೆ. ಆರೋಗ್ಯ ಇಲಾಖೆ ನೀಡುವ ವಿವರಗಳು ವರದಿಗಳು ಪತ್ರಿಕೆಗಳಲ್ಲಿ ಓದಲು ಮಾತ್ರ ಚಂದ. ಸರಕಾರಿ ಆಸ್ಪತ್ರೆಗಳಲ್ಲಿ ಆಹಾರೌಷಧಿಯಾದಿಯಾಗಿ ಎಲ್ಲ ಸೌಲಭ್ಯವನ್ನೂ ಕಲ್ಪಿಸಲಾಗುತ್ತದೆ. ಆದರೆ ಅದೆಲ್ಲ ಸಿಕ್ಕುವುದು-ದಕ್ಕು ವುದು ಯಾರಿಗೆ? ಪ್ರಭಾವ ಉಳ್ಳವರಿಗೆ, ಶಿಫಾ ರಸು ತಂದವರಿಗೆ. ಇವೆರಡೂ ಇಲ್ಲದೆಯೆ ಬಂದ ವರಿಗೆ? ಅವರ ಪಾಲಿಗೆ "ಅದು ಇಲ್ಲ," "ಇದು ಇಲ್ಲ," "ಹೊರಗಿಂದ ತಂದುಕೊಡು," ಎಂಬ ಉತ್ತರಗಳೇ ಎದುರಾಗುತ್ತವೆ. ಅದೇ ಹೊತ್ತಿಗೆ, ಜೇಬಿನ ಜರ್ಬುಳ್ಳವರತ್ತ 'ಎಲ್ಲ' ಅಂದರೆ

'ಎಲ್ಲವೂ' ಇದ್ದಲ್ಲಿಂದ ತಂತಾವೇ ಎದ್ದು ಬರುತ್ತವೆ. "ನೀ ನನಗಾದರೆ ನಾ ನಿನಗೆ" ಎಂಬ ಮಾತು ಸರಕಾರಿ ಆಸ್ಪತ್ರೆಗಳಲ್ಲಿ ಬೇರೆಲ್ಲಿಗಿಂತಲೂ ಹೆಚ್ಚಿನ ಅರ್ಥಪಡೆಯುತ್ತದೆ.

ಯಾರೇ ಆಗಲಿ ಸರಕಾರಿ ಆಸ್ಪತ್ರೆಗೆ ಬರುವುದು ಯಾತಕ್ಕೆ? ಒಳ್ಳೆಯ ಚಿಕಿತ್ಸೆ, ಸೂಕ್ತ ಆರೈಕೆ, ಸಾಕಷ್ಟು ವಿಶ್ರಾಂತಿ, ಕಾಲಕಾಲಕ್ಕೆ ಅವಶ್ಯಕ ಉಪಚಾರ ಬಯಸಿಯೇ ಅಲ್ಲವೆ? ಕಣ್ಣ ತುಂಬ ನಿದ್ರೆ, ಮನಸ್ಸಿನ ತುಂಬ ನೆಮ್ಮದಿ ಇವರಡೇ ಸಾಕು ಅನಾರೋಗ್ಯ ತನ್ನ ಮೊದಲ ಹಿಂದೆಜ್ಜೆ ಹಾಕಲು. ಆಸ್ಪತ್ರೆಯ ಸಿಬ್ಬಂದಿಯ ಆತ್ಮೀಯ ನಡೆ-ನುಡಿಗಳು ಅನಾರೋಗ್ಯವನ್ನು ಇನ್ನಷ್ಟು ಹಿಮೆಟ್ಟಿಸುತ್ತವೆ. ಇವುಗಳೊಂದಿಗೆ ನಿರ್ಮಲ ವಾತಾವರಣವಿದ್ದರಂತೂ ರೋಗಿ ಶೀಘ್ರವೇ ಗುಣಮುಖನಾಗುತ್ತಾನೆ.

ಆದರೆ ಇವೆಲ್ಲವನ್ನೂ 'ಖರೀದಿಸ' ಬೇಕಾಗುತ್ತದೆಂಬುದು ಅಪ್ರಿಯ ಸಂಗತಿಯಾದರೂ ಕಟು ಸತ್ಯ.

ನಮ್ಮ ದೇಶದ ಬಹುತೇಕ ಸರಕಾರಿ ಆಸ್ಪತ್ರೆಗಳೆಲ್ಲದರಲ್ಲೂ ಇದೇ ಅಥವಾ ಇಂಥದೇ ಸ್ಥಿತಿಯಿದೆ. ಬರುವ ರೋಗಿಗಳ ಸಂಖ್ಯೆಯ ಬಾಹುಳ್ಯವಂತೂ ಇದ್ದದ್ದೇ. ಅದರಲ್ಲೂ ಅಪಘಾತಗಳು ಹೆಚ್ಚುತ್ತಿರುವ ಈ ದಿನಗಳಲ್ಲಿ ಗಾಯಾಳುಗಳು, ಕೊನೆಯುಸಿರನ್ನು ಸಮೀಪಿಸುತ್ತಿರುವವರನ್ನು ತಕ್ಷಣವೇ ತಂದು ಸರಕಾರಿ ಆಸ್ಪತ್ರೆಗಳಿಗೆ ಸೇರಿಸಲಾಗುತ್ತದೆ. ಅವರಿಗೆಲ್ಲ ತುರ್ತು ಚಿಕಿತ್ಸೆಯ ಅಗತ್ಯವಿರುವುದರಿಂದ ಬಹುತೇಕ ಸಿಬ್ಬಂದಿ ಅತ್ತಲೇ ಧಾವಿಸಬೇಕಾಗುತ್ತದೆ. ಆಗ, ಮೊದಲೇ ಇರುವ ರೋಗಿಗಳ ಪಾಡು ಹೇಳತೀರದು.

ಸರಕಾರಿ ಆಸ್ಪತ್ರೆಗಳ ಜನರಲ್ ವಾರ್ಡುಗಳಲ್ಲಿ ಕಾಣುವುದಾದರೂ ಏನು? ಹರಕು ಹಾಸಿಗೆ, ಮುರುಕು ಮಂಚ; ತುಕ್ಕು ಹಿಡಿದ ಕಬರ್ಡುಗಳು. ಅವುಗಳ ಮುಚ್ಚಿದ ಬಾಗಿಲನ್ನು ತೆರೆಯಲು ಹರಸಾಹಸವನ್ನೇ ಮಾಡಬೇಕು. ಹಾಗೊಂದು ವೇಳೆ ತೆರೆದಿರೆಂದಿಟ್ಟುಕೊಳ್ಳಿ. ಆ ಮೇಲೆ ಮುಚ್ಚುವುದಕ್ಕೆ ಮತ್ತೊಂದು ಸರ್ಕಸ್ಸು. ಅಷ್ಟು ತಾಕತ್ತೆಲ್ಲಿರುತ್ತದೆ? ಸಹನೆಯಾದರೂ ಉಳಿದಿರುತ್ತದೆಯೆ? ಹೀಗಾಗಿ ಅರೆತೆರೆದ ಬಾಗಿಲಿನ ಈ ಕಬರ್ಡುಗಳಲ್ಲೇ ಔಷಧಿ, ಹಣ್ಣು-ಹಂಪಲು, ನೀರು-ಹಾಲು ಎಲ್ಲವನ್ನೂ ಇಡಿ



ಗಾದಿಗಳ ಮೇಲೆಲ್ಲ ವರೆತದ ವರಾತ

ಕಿರಿದು ತುಂಬಿಡುವ ಅನಿವಾರ್ಯತೆ. ಜೇಡಗಟ್ಟಿದ, ಗಾಳಿಯಾಡದ ಇಂಥ ಕಬರ್ಡುಗಳಲ್ಲಿ ಜಿರಳೆಯೂ ಫಿರತಿ ನಡೆಸೀತು; ಅದನ್ನು ಹಿಡಿದುತಿನ್ನುವ ಆಸೆಯಿಂದ ಹಲ್ಲಿಯೂ ಅವಿತುಕೊಂಡು ಕುಳಿತೀತು. ಯಾರೋ ಪ್ರೀತಿಯಿಂದ ತಂದುಕೊಟ್ಟ ಬ್ರೆಡ್ಡು, ಕಟ್ಟಿ ತಂದಿಟ್ಟ ಬುತ್ತಿಯ ಗಂಟುಗಳೂ ಆ ಕಬರ್ಡುಗಳನ್ನೇ ಆಶ್ರಯಿಸಬೇಕು. ಮೇಲೆ ಕಾಣುವಂತಿಟ್ಟರೆ ಡಾಕ್ಟರುಗಳು ಕಣ್ಣು ಕೆಂಪಗೆ ಮಾಡುತ್ತಾರೆ. ಯಾವುದೋ ಕಾಲಕ್ಕೆ ಒಮ್ಮೆ ಮಾತ್ರ ತೊಳೆದ, ಮುಗ್ಗು ವಾಸನೆಯ ಆ ಕಬರ್ಡಿನಲ್ಲಿಟ್ಟ ಆಹಾರ ಪದಾರ್ಥಗಳು ಹಳಸಿಯೋ ಬೂಸುಗಟ್ಟಿಯೋ ನಾರತೊಡಗುತ್ತವೆ. ಇದರೊಂದಿಗೆ ಎಲ್ಲ 'ವಿಸರ್ಜನ'ಗಳನ್ನೂ ಹಾಸಿಗೆಯಲ್ಲೇ ಮಾಡುವ ಸ್ಥಿತಿ ತಲಪಿದ ರೋಗಿಗಳು; ಅವರ ಹಾಸಿಗೆಯಡಿ ವಿಸರ್ಜಕ ಪಾತ್ರೆಗಳು.

ಸಾಮಾನ್ಯವಾಗಿ ಮಹಡಿಗಳುಳ್ಳ ಸರಕಾರಿ ಆಸ್ಪತ್ರೆಗಳ ಕಿಟಕಿಗಳೆಂದರೆ ಗಾಳಿಯಾಡುವ ಕಿಂಡಿಗಳಲ್ಲ; ಮೂಲೆಯಲ್ಲಿಟ್ಟ ಕಸದ ಬುಟ್ಟಿಯವರೆಗೂ ಹೋಗಲಾಗದ ಮುಗ್ಗಲಗೇಡಿಗಳು ಕಸ-ಮುಸುರೆಗಳನ್ನೆಲ್ಲ ಚೆಲ್ಲಲು ಉಪಯೋಗಿಸುವ ಜಾಗಗಳಾಗಿಬಿಟ್ಟಿವೆ. ಅಲ್ಲಿಂದೇನಾದರೂ ಹೊರಗೆ ಹಣಿಕಿಕ್ಕುವ ಮನಸ್ಸು ಮಾಡಿದಿರೋ ಅಂದು ನಿಮಗೆ ಊಟವೇ ಓಕರಿಕೆಯೆನಿಸುವಂಥ ದೃಶ್ಯ. ಅಲ್ಲೊಂದು ಮಿನಿ 'ಧಾರಾವಿ'ಯಂಥ ಕೊಳಚೆ ಪ್ರದೇಶವೇ ಸೃಷ್ಟಿಗೊಂಡಿರುತ್ತದೆ. ಕಸ-ಮುಸುರೆ-ಕಾಗದ-ಪ್ಲಾಸ್ಟಿಕ್ ಕೊಟ್ಟೆಗಳು ಔಷಧಿ ಮಾತ್ರೆಗಳ ಪ್ಯಾಕೆಟ್ಟುಗಳು-ಒಮ್ಮೊಮ್ಮೆ ಚಿಂದಿಬಟ್ಟೆಗಳು ಕೂಡ ಅಲ್ಲಿ ರಾಶಿಬಿದ್ದಿರುತ್ತವೆ. ಇವುಗಳ ಮೇಲೆಲ್ಲ ನಿರಂತರವಾಗಿ ಚೆಲ್ಲಲ್ಪಡುವ ನೀರು. ಎಂದೋ ಕಟ್ಟಿಸಿ ಗಾರೆ ಕಿತ್ತು ಹೋದ ಕಂಪೌಂಡು ಗೋಡೆಯ ಕರಗಿದ ಇಟ್ಟಿಗೆಗಳು ಬಿದ್ದೋ ಇಲ್ಲ ಬೀಳಿಸಲ್ಪಟ್ಟೋ ಹಂದಿ-ನಾಯಿ ಮತ್ತು ಚಿಂದಿ ಆಯುವ ಹುಡುಗರಿಗೆ ಹಾದಿಮಾಡಿಕೊಟ್ಟಿರುತ್ತವೆ.

ಇಂಥ ವಾತಾವರಣದಲ್ಲಿಯಲ್ಲದೆ ಮತ್ತೆಲ್ಲಿ ಬೆಳೆದು ನಿಂತಾವು ಬ್ಯಾಕ್ಟೀರಿಯಗಳು, ಸೊಳ್ಳೆಗಳು? ಮತ್ತೆ ಮತ್ತೆ ಬರುತ್ತಲೇ ಇರುವ ನಾನಾ ನಮೂನೆಯ ಜನರೊಟ್ಟಿಗೆ ಅವರ ಬಟ್ಟೆ-ಬರೆ, ಹಾಸಿಗೆ-ಹುಪ್ಪಡಿಗಳೊಂದಿಗೆ ಸದ್ದಿಲ್ಲದೆ ಬಂದು ಸೇರುವ ತಿಗಣೆಗಳು. ಇವಂತೂ ಇಲ್ಲೇ ಸ್ಥಾಯಿಯಾಗಿ ಸಂತಾನಾಭಿವೃದ್ಧಿಗೆ ತೊಡಗುತ್ತವಲ್ಲದೆ ಬರ ಹೋಗುವವರೊಂದಿಗೆ ಪಯಣವನ್ನೂ ಬೆಳೆಸುತ್ತವೆ. ರೋಗಿಗಳಿಗೊ ಈ 'ರಕ್ತ ಬೀಜಾಸುರ'ರೊಂದಿಗೆ ಸೆಣಸುವ ರಣಭೂಮಿಯಾಗಿಬಿಡುತ್ತವೆ ಹಾಸಿಗೆಗಳು. ಒಂದೊಂದು ದಿಂಬಿನಡಿಗೂ ಇಂಬು ಪಡೆದಿರುವ ಇವು ಗಾದಿಯನ್ನಿಷ್ಟು ಹೊರಳಿಸಿ ನೋಡಿದರೆ ಬೊಗಸೆಗಟ್ಟಲೇ ಬೀಡು ಬಿಟ್ಟಿರುತ್ತವೆ. ಈ ಕ್ಷುದ್ರಜೀವಿಯಿಂದ ನಿದ್ರೆಗೇಡಷ್ಟೇ ಅಲ್ಲ ಸೋಂಕುರೋಗಗಳೂ ಬರುತ್ತವೆಂಬುದು ಬಹ್ವಂಶ ಜನ ಗಮನಿಸಿರಲಾರದ ಸಂಗತಿ.

ರೋಗನಿವಾರಣೆಯ ತಾಣವಾಗಬೇಕಾದ ಸರಕಾರಿ ಆಸ್ಪತ್ರೆಗಳು ಹೀಗೆ ತಿಗಣೆಗಳ ತಾಣಗಳಾಗಿ ಪರಿಣಮಿಸಿವೆ ಅಷ್ಟೇ ಅಲ್ಲ, ಸಾವಿರ ಸಾವಿರ ಸಂಖ್ಯೆಯ ಸೂಕ್ಷ್ಮ ರೋಗಾಣುಗಳ ಹುಟ್ಟು-ಬೆಳವಣಿಗೆ ಹಬ್ಬುವಿಕೆಗೂ ಆಗರಗಳಾಗಿವೆ ಎಂಬುದು ಇನ್ನೂ ಎದೆಗೆಡಿಸುವ ವಿಚಾರ.

ಸೂಕ್ಷ್ಮದರ್ಶಕದ ಮೂಲಕ ವೀಕ್ಷಿಸಿದರೆ ಎಂಥ ಸ್ವಚ್ಛ ಮೈಯವನ ಚರ್ಮದ ಒಂದು ಚದರ ಸೆಂಟಿಮೀಟರ್‌ನಲ್ಲೂ ಸೂಕ್ಷ್ಮಾಣುಜೀವಿಗಳು ಕಂಡುಬರುತ್ತವೆ. ಅಂದಾಗ ನೈರ್ಮಲ್ಯ ಕಾಪಾಡುವಿಕೆ ಒಂದು ದೊಡ್ಡ ಸವಾಲಾಗಿ ಪರಿಣಿಸಿರುವ ಸಾರ್ವಜನಿಕ ಆಸ್ಪತ್ರೆಗಳ ಸ್ಥಿತಿ ಹೇಗಿರಬೇಡ? ಅದರಲ್ಲೂ ಪ್ರತಿದಿನ ಎಲ್ಲ ಹಾಸಿಗೆಗಳ ಬೆಡ್‌ಶೀಟುಗಳು, ದಿಂಬಿನ ಬಟ್ಟೆಗಳು ಬದಲಿಸಲ್ಪಟ್ಟು, ನೆಲ ಕನಿಷ್ಟ ಮೂರುಬಾರಿಯಾದರೂ ಗುಡಿಸಲ್ಪಟ್ಟು ಫಿನಾಯಿಲ್‌ನಿಂದ ತೊಳೆಯಲ್ಪಟ್ಟರೂ ಈ ಸೂಕ್ಷ್ಮ ಜೀವಿಗಳು ಮತ್ತು ತಿಗಣೆ-ಸೊಳ್ಳೆಗಳಂಥವು ಜಪ್ಪಯ್ಯ ಅನ್ನುವುದಿಲ್ಲ.

"ಕೇವಲ ಬೆಡ್‌ಶೀಟು, ದಿಂಬಿನ ಬಟ್ಟೆಗಳನ್ನು ಬದಲಿಸಿದರಾಯಿತೆ? ಕೊಳೆತ, ಹರಿದ ಹತ್ತಾರು ವರ್ಷ ಹಳೆಯ ಗಾದಿಗಳನ್ನು ದಿಂಬುಗಳನ್ನು ಹಾಗೇ ಬಿಟ್ಟು ಬಿಡುತ್ತೀರಲ್ಲ... ಅಂದ ಮೇಲೆ ಅವುಗಳಲ್ಲಿನ ತಿಗಣೆಗಳು ಹೇಗೆ ನಿವಾರಣೆಗೊಂಡಾವು? ಅವುಗಳಿಗೆ ಕ್ರಿಮಿನಾಶಕಗಳನ್ಯಾಕೆ ಬಳಸುವುದಿಲ್ಲ?"-ದೊಡ್ಡ ಸರಕಾರಿ ಆಸ್ಪತ್ರೆಯ ಒಬ್ಬ

ಮುಖ್ಯ ಆಡಳಿತಾಧಿಕಾರಿಗಳನ್ನು ಕೇಳಿದೆ.

"ಸಾವಿರಾರು ರೋಗಿಗಳಿರುವ ಇಲ್ಲಿ ಅದು ಅಕ್ಷರಶಃ ಅಸಾಧ್ಯದ ಮಾತು. ಅಷ್ಟು ಫಂಡ್ ಆದರೂ ಎಲ್ಲಿದೆ? ಎರಡು ವರ್ಷಕ್ಕೊಮ್ಮೆ ಹಳೆಯ ಗಾದಿಗಳನ್ನು ಬದಲಿಸಬಹುದಾದರೂ ಅದಕ್ಕೆ ವಿಶೇಷ ಅನುಮತಿ ಹಾಗೂ ಹಣಮಂಜೂರಿ ಅವಶ್ಯವಾಗುತ್ತದೆ. ಇನ್ನು ಕ್ರಿಮಿನಾಶಕಗಳ ಬಳಕೆಯ ವಿಷಯ. ಸಾಧ್ಯವಿದ್ದಷ್ಟು ಆ ಕ್ರಮ ಕೈಗೊಳ್ಳುತ್ತೇವಾದರೂ ಇಂಥ ಕ್ರಿಮಿನಾಶಕಗಳಿಗೆ ಪ್ರತಿರೋಧಕ ಶಕ್ತಿ ಬೆಳೆಸಿಕೊಂಡ ತಿಗಣೆಗಳು ನಿವಾರಿಸಲ್ಪಡುವುದಾದರೂ ಹೇಗೆ?" ಅವರು ಸಮಜಾಯಿಷಿ ನೀಡಿದರು.

"ಆದರೆ ತಿಗಣೆಗಳ ಕಚ್ಚುವಿಕೆಯಿಂದ ರೋಗಿಗಳ ಸ್ಥಿತಿ ಉಲ್ಬಣಗೊಳ್ಳುವುದಿಲ್ಲವೆ? ಅವರಿಗೆ ಬೇರೆ ರೀತಿಯ ಸೋಂಕು ರೋಗಗಳು ತಟ್ಟುತ್ತವಲ್ಲ....."

"ನೋನೋ.. ಇದು ತಪ್ಪು ತಿಳಿವಳಿಕೆ. ತಿಗಣೆಗಳ ಕಚ್ಚುವಿಕೆ ಸೋಂಕು ರೋಗ ಹಬ್ಬಿಸುತ್ತದೆನ್ನುವುದು ಈವರೆಗೆ ನಾನು ಕೇಳಿ ಅರಿಯದ, ಕಂಡು ಅರಿಯದ ಮಾತು."

ನಾನು, ದೇಶದ ಹಲವಾರು ಸರಕಾರಿ ಆಸ್ಪತ್ರೆಗಳಲ್ಲಿ ತಿಗಣೆ ಕಚ್ಚಿ ಸೋಂಕು ರೋಗ ತಟ್ಟಿದ ಕುರಿತ, ತಜ್ಞರ ಅಭಿಪ್ರಾಯಗಳನ್ನಾಧರಿಸಿದ ವರದಿಗಳನ್ನು ಅವರ ಮುಂದಿಟ್ಟೆ. ಅವುಗಳ ಮೇಲೆ ಕಣ್ಣಾಡಿಸಿದ ಆ ಮುಖ್ಯಸ್ಥರು ಸ್ವತಃ ತಿಗಣೆ ಕಚ್ಚಿಸಿಕೊಂಡವರಂತೆ ಚಡಪಡಿಸತೊಡಗಿದ್ದು ಮತ್ತು ಆ ಚಡಪಡಿಕೆಯನ್ನು ಮರೆಮಾಚಲು ಯತ್ನಿಸತೊಡಗಿದ್ದು ನನ್ನ ಗಮನಕ್ಕೆ ಬಾರದೇ ಇರಲಿಲ್ಲ.

ಇಲ್ಲಿ ತಿಗಣೆಗಳನ್ನು ಕೇವಲ ಉದಾಹರಣೆಗೆ ಮಾತ್ರ ಉಲ್ಲೇಖಿಸಿದ್ದೇನೆ. ಯಾವುದಕ್ಕೂ ಬಗ್ಗದ ಬ್ಯಾಕ್ಟೀರಿಯಗಳು ತಂದೊಡ್ಡುವ ಭೀಕರತೆ-ಭೀಭತ್ಸತೆಗಳ ಚಿತ್ರ ಇನ್ನೂ ಭಿನ್ನ. ನಿಂತ ನೀರು, ಕೊಳೆತ ತರಕಾರಿ, ತೆರೆದಿಟ್ಟ ತಿಂಡಿ-ತಿನಿಸುಗಳ ಮೂಲಕವಂತೂ ಸರಿಯೆ; ಆದರೆ ಜನಸಾಮಾನ್ಯರ ಮಾತಿರಲಿ ತಜ್ಞ ವೈದ್ಯರುಗಳ ಕಲ್ಪನೆಗೂ ಮೀರಿದ ಹಲವಾರು ಕಾರಣಗಳಿಂದಾಗಿ ಈ ಬ್ಯಾಕ್ಟೀರಿಯಗಳು ಬೆಳೆದು ನಿಲ್ಲುತ್ತವೆ. ನವಜಾತ ಶಿಶುವಿನಿಂದ ಹಿಡಿದು, ನವೆನವೆದು ಸಾಯುವ ಸ್ಥಿತಿ ತಲುಪಿದವನವರೆಗೂ ಈ ರೋಗಾಣುಗಳ ಭೀತಿ ತಪ್ಪಿದ್ದಲ್ಲ.



**ಕಿಟಕಿಯಿಂದ ಹೊರಗಿಣಿಕಿದರೆ...**

ಅದೇ ತಾನೇ ಬಂದು ದಾಖಲಾದವನಿಂದ ಹಿಡಿದು, ಶಸ್ತ್ರಕ್ರಿಯಾನಂತರದ ಚಿಕಿತ್ಸೆ ಪಡೆಯುತ್ತಿರುವವನವರೆಗೂ ಹಲವು ತೆರನಾದ ಸೋಂಕು ತಟ್ಟುವ ಸಂಭವ ಇಲ್ಲದಿಲ್ಲ. ವಾಯುನಿಯಂತ್ರಿತ ಕಕ್ಷೆಗಳು, 'ಇಕು'ಗಳು (ಇಂಟೆನ್ಸಿವ್ ಕೇರ್ ಯುನಿಟ್), ಆಪರೇಶನ್ ಥಿಯೇಟರ್‌ಗಳು ಕೂಡ ಈ ಬ್ಯಾಕ್ಟೀರಿಯಗಳಿಂದ ಮುಕ್ತವಲ್ಲ. ಕಾರ್ಡಿಯೊ ಥೊರಾಸಿಕ್ ವಾಸ್ಕುಲರ್ ಸರ್ಜರಿ ವಿಭಾಗ, ಟ್ರಾನ್ಸ್‌ಪ್ಲಾಂಟ್ ಯುನಿಟ್‌ಗಳಂಥವೂ ಇದಕ್ಕೆ ಹೊರತಲ್ಲ. ಇಂಥಲ್ಲೆಲ್ಲ ಈ ಅಸಂಖ್ಯಾತ ಸೂಕ್ಷ್ಮಾಣುಜೀವಿಗಳು "ನೀವಿರುವುದೆ ನಮಗಾಗಿ" ಎಂದು ಹಾಡಿಕೊಂಡು ಹಾರಾಡಿಕೊಂಡಿದ್ದರೆ ಅಚ್ಚರಿಯಿಲ್ಲ. ಬ್ಯಾಕ್ಟೀರಿಯಗಳು ಬಹುರೂಪಿಯಷ್ಟೇ ಅಲ್ಲ, ಶೀಘ್ರ ವ್ಯಾಪಿಗಳು ಕೂಡ.

ಮಹಾನಗರಗಳಲ್ಲಿ ಮೆಗಾಸಿಟಿಗಳಲ್ಲಿ ಈಗ ದೊಡ್ಡ ಧಂದೆಯಾಗಿಬಿಟ್ಟಿರುವ 'ಸಕಲ ಸೌಲಭ್ಯ ಸಹಿತದ ಸುಸಜ್ಜಿತ ಆಸ್ಪತ್ರೆ'ಗಳಲ್ಲಿ ಎಲ್ಲವೂ ಸರಿಯಾಗಿಯೇ ಇದೆ ಎಂಬುದು ಕೇವಲ ಭ್ರಮೆ. ಇಂಥಲ್ಲಿ ಬರಿ ವಾಸಕ್ಕೇ ದಿನದ ಬಾಡಿಗೆ ಮೂರಂಕಿಗಳ ಮೊತ್ತದ್ದು. ನಿರ್ಮಲ ವಾತಾವರಣ, ಸ್ವಚ್ಛ ಪರಿಸರ, ಇಪ್ಪತ್ತನಾಲ್ಕೂ ಗಂಟೆ ಸೇವೆಗೆ ಸಿದ್ಧವಾಗಿರುವ ಸಿಬ್ಬಂದಿ ಇರುವ ಈ ಖಾಸಗಿ ಆಸ್ಪತ್ರೆ-ನರ್ಸಿಂಗ್ ಹೋಮ್‌ಗಳನ್ನೂ ಬ್ಯಾಕ್ಟೀರಿಯಗಳು ಮುತ್ತಿಕೊಂಡಿರುತ್ತವೆ.

### ಕೆಲವು ಪ್ರಕರಣಗಳನ್ನು ನೋಡಿ

ಮುಂಬಯಿಯ ಖಾಸಗಿ ಆಸ್ಪತ್ರೆಗಳಲ್ಲಿ ಪ್ರತಿ ವರ್ಷ ಸುಮಾರು ೬೦ ಹಸುಗೂಸುಗಳು 'ಮೆನಿಂಜೈಟಿಸ್'ನಿಂದ ಸಾಯುತ್ತವೆ ಎಂಬುದು ಶಿಶು ಆರೋಗ್ಯ ತಜ್ಞರೊಬ್ಬರ ಅಭಿಪ್ರಾಯ.

ಮುಂಬಯಿಯಲ್ಲಿರುವ ಸರಕಾರಿ ಸ್ವಾಮ್ಯದ ಕಾಮಾ ಆ್ಯಂಡ್ ಆಲ್‌ಬೆಸ್ ಹೆರಿಗೆ ಆಸ್ಪತ್ರೆಯಲ್ಲಿ ಕಳೆದ ಆರು ತಿಂಗಳ ಅವಧಿಯಲ್ಲಿ ಮೆನಿಂಜೈಟಿಸ್ ಮತ್ತು ಸೆಪ್ಟೀಸೀಮಿಯದಿಂದ ಸತ್ತ ನವಶಿಶುಗಳ ಸಂಖ್ಯೆ ೧೫೫!

ಅಲ್ಲಿಯ ಕೆ.ಇ.ಎಂ. ಆಸ್ಪತ್ರೆಯ 'ಇಕು'ಗಳಲ್ಲಿ ಉಸಿರಾಟಕ್ಕೆಂದು ಗಂಟಲಲ್ಲಿ ನಳಿಕೆಯಿರಿಸಿ ಮಲಗಿಸಲ್ಪಟ್ಟವರಲ್ಲಿ ಶೇಕಡಾ ೩೫ರಷ್ಟು ರೋಗಿಗಳಿಗೆ ಸೋಂಕು ತಟ್ಟಿ ನ್ಯುಮೋನಿಯಾ ಬಾಧಿಸುತ್ತದೆಂದು ಇನ್ನೊಬ್ಬ ತಜ್ಞರ ಅಧ್ಯಯನ ತಿಳಿಸುತ್ತದೆ.

ಲಕ್ನೋದ ಸರಕಾರಿ ಆಸ್ಪತ್ರೆಯೊಂದರಲ್ಲಿ ೪೫ ಜನ ಮೋತಿಬಿಂದು ಶಸ್ತ್ರ ಚಿಕಿತ್ಸೆಯ ನಂತರ ಸೋಂಕು ಉಂಟಾಗಿ ಸತ್ತರು. ಅದಕ್ಕೆ ಕಾರಣ ಅಲ್ಲಿಯ ಶಸ್ತ್ರ ಚಿಕಿತ್ಸಾ ಗೃಹದ ಅವ್ಯವಸ್ಥೆ.

ಮುಂಬಯಿಯ ಕ್ಷಯ ನಿವಾರಣಾ ಸಂಸ್ಥೆಯಲ್ಲಿ ಬಹುತೇಕ ಕೆಲಸಗಾರರೇ ಆ ರೋಗದಿಂದ ಪೀಡಿತರು.

ಕಲಕತ್ತಾ ಮೆಡಿಕಲ್ ಕಾಲೇಜು ಆಸ್ಪತ್ರೆಯ ಪ್ರಸೂತಿ ವಿಭಾಗವನ್ನು, ಅಲ್ಲಿಯ ಹೆರಿಗೆ ಕೋಣೆ ದೋಷಪೂರ್ಣವೆಂದೂ ಆ ಕಾರಣದಿಂದಾಗಿಯೇ ಐದಕ್ಕೂ ಹೆಚ್ಚು ಶಿಶು ಮರಣಗಳುಂಟಾದವೆಂದೂ ತನಿಖೆಯಿಂದ ತಿಳಿದು ಬಂದ ಮೇಲೆ ತಾತ್ಕಾಲಿಕವಾಗಿ ಮುಚ್ಚಬೇಕಾಯಿತು. ಅಲ್ಲಿಯದೇ ಇನ್ನೊಂದು ವಿಭಾಗದಲ್ಲಿನ ಶಸ್ತ್ರಕ್ರಿಯಾ ನಂತರದ ಚಿಕಿತ್ಸಾ ಕೊಠಡಿಯಲ್ಲಿ ಆರು ಜನ ಸೋಂಕು ರೋಗಕ್ಕೆ ಬಲಿಯಾದರು.

ಇದೇ ಫೆಬ್ರುವರಿ ೧೫ ರಿಂದ ಮಾರ್ಚ್ ೧೫ರ ನಡುವೆ ಮುಂಬಯಿಯ ಬೃಹತ್ ಸಾರ್ವಜನಿಕ ಆಸ್ಪತ್ರೆಯೊಂದರಲ್ಲಿ ಒಟ್ಟು ೮೫ ಶಸ್ತ್ರಚಿಕಿತ್ಸೆಗಳು ನಡೆದವು. ಈ ಪೈಕಿ ೨೧ ಜನಕ್ಕೆ ವಾರದಲ್ಲೇ ವಿವಿಧ ರೀತಿಯ ಸೋಂಕು ತಟ್ಟಿತು. ೧೪ ಜನ ಆ ಕಾರಣದಿಂದಲೇ ಸತ್ತರು. ಇನ್ನೊಬ್ಬ ಐದನೆಯ ದಿನವೇ ಕಣ್ಣು ಮುಚ್ಚಿದ: ಆತನಿಗೆ ಎದೆಯಲ್ಲಿ ಸೋಂಕು ಉಂಟಾಗಿತ್ತು. ಮತ್ತೊಬ್ಬ ಎದೆಗೂಡಿನಲ್ಲಿ 'ಮೀಡಿಯಾಸ್ಟಿನಿಟಿಸ್' (ಹೃದಯದ ಬಳಿ ಬಾವುರಿತ) ಬಾಧಿಸಿದ ಪರಿಣಾಮವಾಗಿ ಇಹಲೋಕ ಯಾತ್ರೆ ಮುಗಿಸಿದ.

ಕೇವಲ ಮುಂಬಯಿಯ ಕೆ.ಇ.ಎಂ. ಆಸ್ಪತ್ರೆಯ ಹೃದ್ರೋಗ ಚಿಕಿತ್ಸಾ ವಿಭಾಗವೊಂದರಲ್ಲೇ ಶಸ್ತ್ರಕ್ರಿಯಾ ನಂತರ ಸೋಂಕು ತಟ್ಟಿ ಸತ್ತವರೆಷ್ಟು ಗೊತ್ತೆ? ೧೬ ಜನ. ಇದೇ ವರ್ಷ ಜನವರಿ ೧ ರಿಂದ ಎಪ್ರಿಲ್ ೩೦ರ ಅವಧಿಯಲ್ಲಿ, ಇಲ್ಲಿ ಹೃದ್ರೋಗಕ್ಕೆ ಶಸ್ತ್ರಚಿಕಿತ್ಸೆಗೊಳಗಾದವರ ಸಂಖ್ಯೆ ೪೨೫. ಸೋಂಕುಂಟಾಗಿ ಸತ್ತ ೧೬ ಮಂದಿಯನ್ನು ಒಳಗೊಂಡಂತೆ ಪ್ರಾಣ ಕಳೆಕೊಂಡ ಒಟ್ಟು ೫೮

ರೋಗಿಗಳು. (೧೯೯೩ರಲ್ಲಿ ಶಸ್ತ್ರಕ್ರಿಯೆಗೊಳಗಾದ ವರಲ್ಲಿ ೧೫೦, ಹಾಗೂ ೧೯೯೪ರಲ್ಲಿ ೧೪೫೭ರ ಪೈಕಿ ೧೫೩ ಸಾವುಗಳು, ಸಂಭವಿಸಿದವು. ಆದರೆ ಇದರಲ್ಲಿ 'ಸೋಂಕು ಸಾವು' ಗಳೆಷ್ಟು ಎಂಬುದರ ಕುರಿತು ದಾಖಲೆಗಳು ಸಿಕ್ಕುವುದಿಲ್ಲ.)

ಇನ್ನು ಬೆಳಕಿಗೆ ಬಾರದೆಯೊ ಅಥವಾ ಮುಚ್ಚಿ ಹಾಕಲ್ಪಟ್ಟೋ ಹೋದ ಇಂಥ ಸಾವುಗಳೆಷ್ಟಿರ ಬೇಡ?

ಇದೆಲ್ಲದರ ಅರ್ಥ ಏನು? ನಾವು ವೈದ್ಯಕೀಯ ವಿಜ್ಞಾನದಲ್ಲಿ ಏನೆಲ್ಲಾ ಪ್ರಗತಿ ಸಾಧಿಸಿದ್ದೇವೆಂದು ಇರುತ್ತದೆ. ಆದರೆ ಇಲ್ಲಿರುವ ಮುಖ್ಯ ತೊಂದರೆ ಎಂದರೆ 'ನೀವು ಚಾಪೆಯ ಕೆಳಗೆ ನುಸುಳಿದರೆ ನಾವು ರಂಗೋಲಿಯ ಅಡಿಗೆ ನುಸುಳುತ್ತೇವೆ' ಎಂಬ ಹಟದ ಬ್ಯಾಕ್ಟೀರಿಯಗಳದು: ನಾವು ಅನುಸರಿಸುವ ಕ್ರಮಗಳೆಲ್ಲವನ್ನೂ ಮೆಟ್ಟಿ ನಿಲ್ಲುವ ಸಾಮರ್ಥ್ಯ ಅವುಗಳಿಗೆ ಇರುವುದು. ಇದರೊಂದಿಗೆ, ಡಾಕ್ಟರುಗಳು ಮಾಡುವ ಒಂದು ದೊಡ್ಡ ತಪ್ಪೂ ಸಮಸ್ಯೆ ಬಿಗಡಾಯಿಸಲು ಕಾರಣವಾಗುತ್ತದೆ. ಅದೆಂದರೆ ಆ್ಯಂಟಿಬಯಾಟಿಕ್‌ಗಳ ಅತಿ ಬಳಕೆ. ಔಷಧ ತಯಾರಿಕಾ ಕಂಪನಿಗಳು ಉತ್ಪಾದಿಸುವ



**ಹರಕು ಹಾಸಿಗೆ, ಮುರುಕು ಮಂಚ**

ಡೊಳ್ಳು ಬಾರಿಸಿಕೊಳ್ಳುತ್ತಿದ್ದೇವೆಯೋ ಅದೆಲ್ಲ ಬರಿ ಪೊಳ್ಳು ಎಂದೆ? ಹಾಗಾದರೆ ಸೋಂಕು ಹರಡುವುದನ್ನು ತಡೆಗಟ್ಟುವುದು ವೈದ್ಯಕೀಯ ವಿಜ್ಞಾನಕ್ಕಿನ್ನೂ ಸಾಧ್ಯವಾಗಿಲ್ಲವೆ? ನಮ್ಮ ಆಸ್ಪತ್ರೆಗಳನ್ನು ಸೋಂಕುಮುಕ್ತವನ್ನಾಗಿಸುವ ಯಾವ ಪ್ರಯತ್ನಗಳೂ ನಡೆದಿಲ್ಲವೆ?

"ಯಾಕಿಲ್ಲ? ವೈದ್ಯಕೀಯ ಜಗತ್ತು ಅನುಕ್ಷಣವೂ ಅಂಥ ಪ್ರಯತ್ನ -ಪ್ರಯೋಗ ಹಾಗೂ ಯೋಚನೆ-ಯೋಜನೆಗಳಲ್ಲಿ ತೊಡಗಿಕೊಂಡೇ ಸಂದರ್ಭದಲ್ಲಿ ಮತ್ತು ಅವುಗಳನ್ನು ವಿಧಿಸುವಾಗ ಡಾಕ್ಟರುಗಳು ಅವು ಎಷ್ಟರ ಮಟ್ಟಿಗೆ ಪರಿಣಾಮಕರ ಎಂಬ ಅಂಶವನ್ನು ಗಮನಿಸುವುದೇ ಇಲ್ಲ. ಸದಾ ಸೂಕ್ಷ್ಮಾಣುಜೀವಿಗಳ ಮೇಲೆ ಯಾವ ಪ್ರತಿಜೈವಿಕ ಪರಿಣಾಮಕಾರಿ, ಯಾವ ಔಷಧಿಗೆ ಯಾವ ಬ್ಯಾಕ್ಟೀರಿಯ ಪ್ರತಿರೋಧಕವನ್ನು ಬೆಳೆಸಿಕೊಂಡಿದೆ ಎಂಬುದನ್ನು ಗಮನಿಸುತ್ತಲೇ ಇರುವ ಮೈಕ್ರೋಬಯಾಲಜಿಸ್ಟರನ್ನು ಈ ಇಬ್ಬರೂ ಗಮನಕ್ಕೆ ತಂದುಕೊಳ್ಳುವುದು ಕಮ್ಮಿ. ನಿರ್ದಿಷ್ಟವಾದ ಮಾರಕ

ಸೋಂಕು ರೋಗಗಳಿಗೆಂದು ಬಳಸಬೇಕಾದ ಪ್ರಬಲ ಆ್ಯಂಟಿಬಯಾಟಿಕ್‌ಗಳನ್ನು ಸಾಮಾನ್ಯ ಸೋಂಕುಗಳಿಗೂ ಬರೆದುಕೊಡುವ ಡಾಕ್ಟರುಗಳೂ ಇದ್ದಾರೆ. ಇದರಿಂದ ಸಮಸ್ಯೆ ಮತ್ತೊಂದು ತಿರುವು ಪಡೆಯುತ್ತದೆ," ಎನ್ನುತ್ತಾರೆ ಒಬ್ಬ ಹಿರಿಯ ವೈದ್ಯ ತಜ್ಞ.

ಕ್ಯಾನ್ಸರಿನ ವಿಷಯಕ್ಕೆ ಬರೋಣ. ಅದಕ್ಕಾಗಿ ನೀಡಲಾಗುವ ಕೆಲವು ಚಿಕಿತ್ಸೆಗಳಿಂದ ದೇಹದಲ್ಲಿನ ಸೋಂಕು ವಿರೋಧಕ ಶಕ್ತಿ ಸಂಪೂರ್ಣವಾಗಿ ನಶಿಸಿಹೋಗುತ್ತದೆ. ಅಲ್ಲದೆ ಪರಾಂಗ ಕಸಿಯ ನಂತರ ರೋಗಿಗೆ ನೀಡಲಾಗುವ ತಿರಸ್ಕಾರವಿರೋಧಕ ಔಷಧಿ (anti-rejection drugs)ಗಳು ಕೂಡ ಇಂಥದೇ ಪರಿಣಾಮ ಉಂಟುಮಾಡುತ್ತವೆ.

ಇನ್ನೊಬ್ಬ ತಜ್ಞವೈದ್ಯರ ಪ್ರಕಾರ, "ಶಸ್ತ್ರ ಚಿಕಿತ್ಸೆಯ ನಂತರ ಒಂದು ವೇಳೆ ರೋಗಿಗೆ ಸೋಂಕು ತಟ್ಟಿದರೆ ಆತನಿಗೆ ಸೆಪ್ಟೀಸೀಮಿಯ ಅಥವಾ 'ನೆತ್ತರುನಂಜು' ಉಂಟಾಗಬಹುದು. ಇದು ತಹಬಂದಿಗೆ ತರಲು ಆಗದಂಥದು. ಕೆಲ ದಿನಗಳಲ್ಲೇ ರೋಗಿ ಸಾವನ್ನಪ್ಪಬಹುದು. ಒಂದು ವೇಳೆ ಸೋಂಕು ನೆತ್ತರುನಂಜಲ್ಲದೆ ಸ್ಥಾನಿಕವಾಗಿದ್ದರೆ ಅದರ ಪರಿಣಾಮವಾಗಿ ಇನ್ನಿತರ ತೀವ್ರ ಕಾಯಿಲೆಗಳು ಕಾಣಿಸಿಕೊಳ್ಳಬಹುದು."

ಅಮೆರಿಕದಲ್ಲಿ ನಡೆಸಿದ ಒಂದು ಅಧ್ಯಯನದ ಫಲವಾಗಿ ತಿಳಿದು ಬಂದ ಅಂಶವೆಂದರೆ ಆಸ್ಪತ್ರೆಗಳಲ್ಲಿ ದಾಖಲಾತಿ ಪಡೆದವರಲ್ಲಿ ಶೇಕಡಾ ಐದರಷ್ಟು ರೋಗಿಗಳಿಗೆ ಸೋಂಕು ಉಂಟಾಗುತ್ತದೆ. ಮೂತ್ರನಾಳದ ಸೋಂಕು, ಶಸ್ತ್ರ ಚಿಕಿತ್ಸೆಗಳ ಸಂದರ್ಭಗಳಲ್ಲಿ ಮಾಡಲಾಗುವ ಗಾಯದ ಸೋಂಕು ಹಾಗೂ ಉಸಿರಾಟದ ತೊಂದರೆಗೆ ನೀಡಲಾಗುವ ಶಸ್ತ್ರಚಿಕಿತ್ಸೆಯ ನಂತರದ ಸೋಂಕುಗಳು ಸಾಮಾನ್ಯ. ಇದರಿಂದಾಗಿ ರೋಗಿಯ ಆಸ್ಪತ್ರೆವಾಸ ದೀರ್ಘಗೊಂಡು ಅವನ ಜೇಬಿಗೆ ನಿರಂತರ ಕತ್ತರಿಬೀಳುತ್ತಲೇ ಇರುತ್ತದೆ. ಕೆಲವು ದುರಾದೃಷ್ಟದ ರೋಗಿಗಳು ಪ್ರಾಣವನ್ನೇ ಶುಲ್ಕವಾಗಿ ನೀಡಬೇಕಾಗುತ್ತದೆ.

ಭಾರತದ ಯಾವುದೇ ಸಾರ್ವಜನಿಕ ಆಸ್ಪತ್ರೆಗೆ ಎಲ್ಲ ರೀತಿಯ ರೋಗಿಗಳೂ ಬರುವುದುಂಟು. ಅವರ ಪೈಕಿ ಒಂದು ಹೊತ್ತಿನ ತುತ್ತಿಗೂ ಗತಿಯಿರದವರು, ಕುಪೋಷಿತರು ಹಾಗೂ ತುರ್ತುಚಿಕಿತ್ಸೆಯ ಅಗತ್ಯವಿರುವವರೇ ಜಾಸ್ತಿ. ನೈರ್ಮಲ್ಯದ ಕುರಿತು ಯೋಚಿಸುವ ವ್ಯವಧಾನವೂ ವಿವೇಚನೆಯೂ ಇಲ್ಲದ ಈ ಜನ ಆಸ್ಪತ್ರೆ ಸೇರುವ ಹೊತ್ತಿಗಾಗಲೇ ತಮ್ಮ ಆರೋಗ್ಯವನ್ನು ಎಷ್ಟು ಸಾಧ್ಯವೋ ಅಷ್ಟು ಹದಗೆಡಿಸಿಕೊಂಡೇ ಬಂದಿರುವುದುಂಟು.

ಇನ್ನು ಹಳ್ಳಿಗಾಡಿನ ಸ್ಥಿತಿವಂತರ ಮಾತಂತೂ ಕೇಳುವುದೇ ಬೇಡ. ಸಂಬಂಧಿಯೊಬ್ಬ ನಗರದ ಸರಕಾರಿ ಆಸ್ಪತ್ರೆ ಸೇರಿದ್ದಾನೆಂದರೆ ಸಾಕು ಹಿಂಡು ಗಟ್ಟಿಕೊಂಡು ಹುಯ್ಯೆಂದು ಬರುತ್ತಾರೆ. ಸರತಿಯ ಪ್ರಕಾರ ರೋಗಿಯೊಂದಿಗೆ ಇರುತ್ತಾರೆ. ಮನೆಯಲ್ಲಿನ ಎಲ್ಲ ನಿತ್ಯದ ಆಗು ಹೋಗುಗಳನ್ನೂ ಇಲ್ಲಿ ನಡೆಸುತ್ತಾರೆ. ಇಂಥ ಸಂದರ್ಭಗಳು ಡಾಕ್ಟರುಗಳು ಮತ್ತು ಸಿಬ್ಬಂದಿಗೆ ತಲೆನೋವು ತರುವಂಥವಷ್ಟೇ ಅಲ್ಲ, ರೋಗ ಹರಡಲೂ ಸೋಂಕು ತಟ್ಟಲೂ ಕಾರಣವಾಗುವುದೂ ಉಂಟು.

ಸೋಂಕು ತಡೆಗಟ್ಟಲು ಕೆಲವೊಂದು ನಿರ್ದಿಷ್ಟವಾದ ನಿಯಮ ಸೂತ್ರಗಳನ್ನು ಅನುಸರಿಸುವುದು ಅವಶ್ಯ. ಉದಾ: ರೋಗಿಯಿಂದ ರೋಗಿಗೆ ಸೋಂಕು ಹರಡುವುದನ್ನು ತಡೆಗಟ್ಟಲು ಅತ್ಯಂತ ಸರಳ ಸೂತ್ರವಾದ ಆಗಾಗ ಕೈ ತೊಳೆಯುವಿಕೆ, ಶಸ್ತ್ರಕ್ರಿಯೆ ಮಾಡುವಾಗ ಮಾಸ್ಕ್, ಗ್ಲೋವ್ಸ್, ಗೌನ್ ಧರಿಸುವುದೇ ಮೊದಲಾದವುಗಳನ್ನು ವೈದ್ಯರು ಮಾಡಿಯೇ ಮಾಡುತ್ತಾರೆ. ರೋಗಿಗಳಿಗೆ ಬಳಸುವ ಸಾಧನಗಳನ್ನು ಸ್ಟರಲೈಸ್ ಮಾಡಿ ಅಂದರೆ ಅದರೊಳಗಿರಬಹುದಾದ ರೋಗಾಣುಗಳನ್ನು ನಾಶಗೊಳ್ಳುವಂತೆ ಮಾಡಿ ಉಪಯೋಗಿಸಬೇಕು. ರೋಗಿಗಳಿಗೆ ಹಾಕುವ ನಳಿಕೆಗಳನ್ನು ಸೂಕ್ತ ಸಮಯಕ್ಕೆ ಬದಲಾಯಿಸುತ್ತಿರಬೇಕು. ಈ ಕೆಲವು ಸರಳ ಸೂತ್ರಗಳನ್ನು ನಿಯಮಬದ್ಧವಾಗಿ ಪಾಲಿಸಿದರೆ ಸಂಪೂರ್ಣವಾಗಿ ತಡೆಗಟ್ಟಲಾಗದಿದ್ದರೂ, ಸೋಂಕು ತಟ್ಟುವ ಸಂಭಾವ್ಯ ಪ್ರಮಾಣವನ್ನು ಕಡಿಮೆಗೊಳಿಸಬಹುದು.

ಭಾರತದಲ್ಲಿ ಆಸ್ಪತ್ರೆ ಸೋಂಕನ್ನು ವ್ಯವಸ್ಥಿತವಾಗಿ ತಡೆಗಟ್ಟುವ ಪರಿಕಲ್ಪನೆ ತೀರ ಇತ್ತೀಚಿನದು.

೧೯೯೧ರಲ್ಲಿ 'ಭಾರತೀಯ ಆಸ್ಪತ್ರೆ ಸೋಂಕು ಸಮಾಜ'ದ ಸ್ಥಾಪನೆಯಾಯಿತು. ಕೆಲವೇ ಕೆಲವು ಖಾಸಗಿ ಆಸ್ಪತ್ರೆಗಳಲ್ಲಿ ಇಂತಹ ಸಮಿತಿಗಳ ರಚನೆ ಆಗಿದೆ.

ಖಾಸಗಿ ಆಸ್ಪತ್ರೆ ಮತ್ತು ಶುಶ್ರೂಷಾ ಕೇಂದ್ರಗಳಲ್ಲಿ ಯಾವುದೇ ರೀತಿಯ ನಿಬಂಧನೆಗಳನ್ನು ಸರಕಾರ ವಿಧಿಸದಿರುವುದೂ ಇದಕ್ಕೆ ಕಾರಣವಾಗಿದೆ. ದೇಶದೆಲ್ಲೆಡೆ ಇಂತಹ ಆರೋಗ್ಯ ಕೇಂದ್ರಗಳು ನಾಯಿಕೊಡೆಗಳಂತೆ ಬೆಳೆಯುತ್ತಿವೆ. ದೆಹಲಿಯ ೨೫೦೦ ಶುಶ್ರೂಷಾ ಕೇಂದ್ರಗಳಲ್ಲಿ ಕೇವಲ ಶೇಕಡಾ ೫ರಷ್ಟು ನೋಂದಾವಣೆ ಆಗಿವೆ. ಇನ್ನು ಮುಂಬಯಿಯಲ್ಲಿರುವ ೬೦೦ ಕೇಂದ್ರಗಳೆಲ್ಲ ಅಸ್ವಸ್ಥರಿಗೆ ಯೋಗ್ಯ ಸ್ಥಳಗಳೇ ಅಲ್ಲ ಎಂದು ಸರಕಾರ ಆರೋಪಿಸುತ್ತದೆ. ದೇಶದಲ್ಲಿ ಶೇಕಡಾ ೮೦ರಷ್ಟು ಚಿಕಿತ್ಸೆಯನ್ನು ಖಾಸಗಿ ಆಸ್ಪತ್ರೆಗಳೇ ಒದಗಿಸುತ್ತಿವೆ. ಆದರೂ ಇಂತಹ ಅನಾದರ, ಅವ್ಯವಸ್ಥೆಯನ್ನು ತಡೆಗಟ್ಟಲು ಸರಕಾರ ಇನ್ನೂ ಯಾವುದೇ ರೀತಿಯ ಕ್ರಮ ತೆಗೆದುಕೊಂಡಿಲ್ಲ.

ಆಸ್ಪತ್ರೆಯಲ್ಲಿ ಸೋಂಕನ್ನು ಸಂಪೂರ್ಣ ತಡೆಗಟ್ಟುವುದು ಅತ್ಯಂತ ಕಷ್ಟದಾಯಕ. ಎಷ್ಟೇ ಕಾಳಜಿ ವಹಿಸಿದರೂ ಇದರಿಂದ ಮುಕ್ತಿ ಹೊಂದುವುದು ಅಸಾಧ್ಯ. ಆದರೆ ಸೋಂಕು ತಗಲುತ್ತದೆಂಬ ಭೀತಿಯಿಂದ ರೋಗಿಗಳು ಆಸ್ಪತ್ರೆಗೆ ಹೋಗದಿರಲಾದೀತೆ?

ಸೋಂಕು ತಟ್ಟುವಿಕೆ ಒಂದು ಗಂಭೀರ ಸಮಸ್ಯೆ ಎಂದು ಪರಿಗಣಿಸಿ, ಸರಕಾರ ಮತ್ತು ವೈದ್ಯಕೀಯ ಸಮುದಾಯ ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಮುಂದೆ ಬರುವವರೆಗೂ ಇದು ಹೀಗೆಯೇ.

ಅಂಥ ಸಮಯ ಬರುವುದೆಂದು? -ಇದೊಂದು ಯಕ್ಷಪ್ರಶ್ನೆ.

●

## ಮೆಹರ್‌ಮೂಸ್ ತಿಂದದ್ದು ಮೊಸಳೆ!

**ಮೆ**ಹರ್‌ಮೂಸ್? ಎಂದ ತಕ್ಷಣ ಹಾಗಂದರೇನು? ಎಂದು ಸೋಜಿಗಗೊಂಡಿರಲ್ಲವೇ? ಮೆಹರ್‌ಮೂಸ್ ಎಂಬುದು ಭಾರತೀಯ ನಾರಿಯೊಬ್ಬಳ ಹೆಸರು. ಈಕೆ ಸಾಹಸಿಯೂ ಸುಂದರಿಯೂ ಆದ ಒಂಟಿ ಹೆಣ್ಣು. ಆಫ್ರಿಕಾ, ಪೆಸಿಫಿಕ್, ಅಂಟಾರ್ಟಿಕಾಗಳೆಂದು ಪ್ರಪಂಚವನ್ನೇ ಸುತ್ತಿದ್ದಾಳೆ. ಪ್ರವಾಸಗಳನ್ನೆಲ್ಲಾ ಒಂಟಿಯಾಗಿಯೇ ಕೈಗೊಳ್ಳುವ ಈಕೆ ಕಳೆದ ಇಪ್ಪತ್ತು ವರ್ಷಗಳಿಂದಲೂ ಈ ರೀತಿಯ ಪ್ರವಾಸಗಳನ್ನು ನಡೆಸುತ್ತಲೇ ಬಂದಿದ್ದಾಳೆ. ಇಂತಹ ಪ್ರವಾಸಗಳಲ್ಲಿ, ಹಲವು ಸಾರಿ, ಇತ್ತೀಚಿನವರೆಗೂ ನರಭಕ್ಷಕರೆನಿಸಿಕೊಂಡಿದ್ದ ಜನಾಂಗಗಳ ನಡುವೆ ವಾಸಿಸಿ ಬಂದಿದ್ದಾಳೆ. ಸಂದರ್ಶನವೊಂದರಲ್ಲಿ ಈಕೆಯನ್ನು "ಆಫ್ರಿಕಾದಲ್ಲಿ ತಿನ್ನಲು ಏನು ಸಿಕ್ಕಿತು?" ಎಂದು ಕೇಳಲಾಯಿತು. ಇದಕ್ಕೆ ಆಕೆ ನೀಡಿದ ಉತ್ತರ "ಮೊಸಳೆ!" ಮೊಸಳೆಯೇ ಏಕೆ? ಎಂದಿದ್ದಕ್ಕೆ "ಬೇಯಿಸಿದ ಸಿಂಬೆಸುತ್ತಿದ ಹೆಬ್ಬಾವು ಮತ್ತು ಮೊಸಳೆಗಳ ನಡುವೆ ಆಯ್ದುಕೊಳ್ಳುವ ಅವಕಾಶ ನೀಡಿದಾಗ ನನ್ನ ಆಯ್ಕೆ ಮೊಸಳೆಯೇ," ಎಂದು ಆಕೆ ಉತ್ತರಿಸಿದಳು.

"ಒಂಟಿಯಾಗಿಯೇ ಪ್ರಪಂಚ ಏಕೆ ಸುತ್ತುತೀರಿ?" ಎಂಬ ಪ್ರಶ್ನೆಗೆ, ಈ ಮೋಹಕ ಚೆಲುವೆಯ ಉತ್ತರ, "ಭಾರತೀಯ ನಾರಿ ಒಂಟಿಯಾಗಿ ಯಾವುದನ್ನೇ ಆದರೂ ಸಾಧಿಸಲಾರಳು. ಹಣಕಾಸಿನ ತೊಂದರೆಯಿಂದಾಗಿ ಭಾರತೀಯರು ಹೊರ ದೇಶ ಸುತ್ತಲಾರರು ಎಂಬ ಭಾವನೆ ವಿದೇಶೀಯರಲ್ಲಿದೆ. ಹಾಗೆಯೇ ಭಾರತೀಯರ ಪಾಸ್‌ಪೋರ್ಟ್ ಹೊಂದಿದವರಿಗೆ ಹೊರಗಿನ ದೇಶಗಳು ವೀಸಾ ನೀಡಲಾರವು ಎಂಬ ಭಾವನೆಯೂ ಇದೆ. ಅದೃಷ್ಟದಿಂದ ಒಂದಿಷ್ಟು ಮೋಹಕರೂಪು ಪಡೆದಿದ್ದರೆ ಇವುಗಳನ್ನೆಲ್ಲಾ ಸುಳ್ಳೆಂದು ನಿರೂಪಿಸುವುದು ಸಾಧ್ಯವೆಂದು ನನಗನ್ನಿಸಿತು;" ಎಂದಳು ಆಕೆ.

● ಕೆ. ಗಣೇಶ್

# ಬರಲಿವೆ ಹೊಸ ಬಗೆಯ ಔಷಧಗಳು!

## ಒಂದು ವೈಜ್ಞಾನಿಕ ವರದಿ



ಪ್ರತಿ ಜೈವಿಕಗಳಿಗೆ ಒಗ್ಗಿ ಹೋಗಿರುವ ರೋಗಾಣುಗಳ ಸಂಖ್ಯೆ ಇತ್ತೀಚೆಗೆ ಹೆಚ್ಚು ತ್ತಿದ್ದರೂ ಇದೀಗ ಈ ನಿಟ್ಟಿನಲ್ಲಿ ಹೊಸ ಪ್ರಯತ್ನಗಳು ನಡೆದಿವೆ ಎಂಬುದೊಂದು ಸಮಾಧಾನಕರವಾದ ಸಂಗತಿ.



• 'ಕಸ್ತೂರಿಮೃಗ'

(ಆಧಾರ: ಜೇನೇ ಬೈಲಿನ್‌ಸ್ಕಿ ಅವರ ಲೇಖನ.)

೧೯೪೪ರಲ್ಲಿ ಪೆನ್‌ಸಿಲಿನ್ ಶೋಧಿಸಲ್ಪಟ್ಟಾಗ ಎಲ್ಲ ಬಗೆಯ ರೋಗಾಣುಗಳ ವಿರುದ್ಧ ಬ್ರಹ್ಮಾಸ್ತ್ರವನ್ನೇ ಕಂಡುಹಿಡಿಯಲಾಗಿದೆ ಎಂಬ ಭಾವನೆ ಸಾರ್ವತ್ರಿಕವಾಗಿತ್ತು. ಆದರೆ ಈ ಭಾವನೆಗೆ ಆಧಾರವಿಲ್ಲ ಎನ್ನುವುದು ಗಮನಕ್ಕೆ ಬರಲು ತಡವಾಗಲಿಲ್ಲ. ಎರಡೇ ವರ್ಷಗಳಲ್ಲಿ ರೋಗಾಣುಗಳು ಪೆನ್‌ಸಿಲಿನ್ನಿನ ವಿರುದ್ಧ ನಿರೋಧಕ ಶಕ್ತಿಯನ್ನು ಬೆಳೆಸಿಕೊಂಡುಬಿಟ್ಟಿದ್ದವು.

ವಿಜ್ಞಾನಿಗಳು ಪೆನ್‌ಸಿಲಿನ್ನಿನಲ್ಲೆ ಅಲ್ಪ ಬದಲಾವಣೆ ಮಾಡಿ ಹೊಸ ಸಂಯುಕ್ತಗಳನ್ನು ಹೊರಗೆ ತಂದಿದ್ದರಿಂದ ಉಲ್ಬಣಿಸುತ್ತಿದ್ದ ರೋಗಾಣುಗಳ ಸಮಸ್ಯೆ ತಾತ್ಕಾಲಿಕವಾಗಿ ಶಾಂತವಾಯಿತು. ಆದರೆ ಈ ಸಂಯುಕ್ತಗಳಿಗೂ ಅವು ನಿರೋಧಕ ಶಕ್ತಿಯನ್ನು ಬೆಳೆಸಿಕೊಳ್ಳಲು ತಡವಾಗಲಿಲ್ಲ. ಅಷ್ಟರಲ್ಲೆ ಹೊಸ ಹೊಸ ಪ್ರತಿಜೈವಿಕಗಳು ಸಂಶೋಧಿಸಲ್ಪಟ್ಟಿದ್ದರಿಂದ ವಿಜ್ಞಾನಿಗಳಿಗೆ ರೋಗಾಣುಗಳನ್ನು ಅವು ನಿರೋಧಕಶಕ್ತಿಯನ್ನು ಬೆಳೆಸಿಕೊಳ್ಳುವವರೆಗೆ ತಹಬಂದಿಯಲ್ಲಿಟ್ಟುಕೊಳ್ಳಲು ಸಾಧ್ಯವಾಯಿತು. ಮತ್ತೆ ರೋಗಾಣುಗಳ ಆಟಾಟೋಪ; ಮತ್ತೆ ಹೊಸ ಪ್ರತಿಜೈವಿಕಗಳ ಸಂಶೋಧನೆ ಅಥವಾ ಇದ್ದ ಪ್ರತಿಜೈವಿಕಗಳಲ್ಲೆ ಅಲ್ಪಸ್ವಲ್ಪ ಬದಲಾವಣೆ ಇಲ್ಲವೆ ಒಂದಕ್ಕಿಂತ ಹೆಚ್ಚು ಪ್ರತಿಜೈವಿಕಗಳನ್ನು ಬಳಸಿ ಹೊಸ ಸಂಯುಕ್ತಗಳ ತಯಾರಿಕೆ.

ಹೀಗೆ ರೋಗಾಣುಗಳ ವಿರುದ್ಧ ವಿಜ್ಞಾನಿಗಳ ಸಮರ ನಡೆಯುತ್ತಲೇ ಇದೆ. ಆದರೂ

ಟ್ಟಿಗೆ ಪ್ರತಿಜೈವಿಕಗಳನ್ನು ತಯಾರಿಸುವ ಉದ್ದಿಮೆ ಬೃಹದಾಕಾರವಾಗಿ ಬೆಳೆದುಕೊಂಡು ಬಂದಿದೆ. ಪರಿಣಾಮವಾಗಿ ಇಂದು ಹದಿನೈದು ಬಗೆಯ ಪ್ರತಿಜೈವಿಕಗಳೂ ಅವುಗಳಿಂದ ತಯಾರಿಸಲಾದ ೧೬೦ ಬಗೆಯ ವಿವಿಧ ಸಂಯುಕ್ತಗಳೂ ಪೇಟೆಯಲ್ಲಿ ಲಭ್ಯ.

ಇಷ್ಟೆಲ್ಲ ಆದರೂ ರೋಗಾಣುಗಳದೇ ಮೇಲುಗೈ. ಇದಕ್ಕೆ ಕಾರಣ ಇಲ್ಲದಿಲ್ಲ. ರೋಗಾಣುಗಳು ಮನುಷ್ಯ ಜನ್ಮತಾಳುವುದಕ್ಕೆ ಎಷ್ಟೋ ಕೋಟಿ ವರ್ಷಗಳಷ್ಟು ಮೊದಲೇ ಈ ಭೂಮಿಯ ಮೇಲೆ ಬಂದಂಥವು. ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸಿ ಅಂಥ ಗುಣವನ್ನು ಮೈಗೂಡಿಸಿಕೊಂಡಂಥವು. ಇದೂ ಅಲ್ಲದೆ ಅವುಗಳ ಪುನರುತ್ಪಾದನೆಯ ಶಕ್ತಿಯೂ ಅಗಾಧವಾದದ್ದು. ಒಂದೇ ಒಂದು ರೋಗಾಣುವು ಒಂದೇ ದಿನದಲ್ಲಿ ಇಪ್ಪತ್ತು ಕೋಟಿಗಳವರೆಗೆ ರೋಗಾಣುಗಳನ್ನು ಉತ್ಪಾದಿಸಬಲ್ಲದು. ಹೀಗೆ ಬೇರೆ ಬೇರೆ ಬಗೆಯ ರೋಗಾಣುಗಳು ಪುನರುತ್ಪಾದನೆಗೊಳ್ಳುತ್ತಿರಬೇಕಾದರೆ ಒಂದರ ವಂಶವಾಹಿಗಳು ಇನ್ನೊಂದಕ್ಕೆ ಬೆಸೆದುಕೊಂಡು ಹೊಸಬಗೆಯ ರೋಗಾಣು ಹುಟ್ಟಿಕೊಂಡದ್ದೂ ಇದೆ.

ಇದ್ಕಕೊಂದು ಉದಾಹರಣೆ: ಮಾಂಸ ರೋಗಾಣುರಹಿತವಾಗಿರಬೇಕೆಂದು ಅಮೆರಿಕದಲ್ಲಿ ಮಾಂಸದ ದನಗಳನ್ನು ಬೆಳೆಸುವವರು ಪಶುಆಹಾರದಲ್ಲಿ ಪ್ರತಿಜೈವಿಕಗಳನ್ನು ಬೆರೆಸಿ ಕೊಡುವುದು ವಾಡಿಕೆ. ಈ ಪ್ರತಿಜೈವಿಕಗಳನ್ನು ತಿಂದುತಿಂದು ಮೈಗೂಡಿಸಿಕೊಂಡಿರುವ ಶಿಗೆಲ್ಲಾ ಬ್ಯಾಕ್ಟೀರಿಯ ಡಾಕ್ಟರರು ಅತಿಸಾರಕ್ಕೆ ಔಷಧಿಕೊಟ್ಟಾಗ ಮಣಿಯುವುದೇ ಇಲ್ಲ. ಯಕೃತ್ತಿನಲ್ಲಿರುವ 'ಈ ಕೋಲಿ' ಬ್ಯಾಕ್ಟೀರಿಯ ಒಳ್ಳೆಯದುದನ್ನೆ ಉಂಟುಮಾಡುವಂಥಾದ್ದಾದರೂ ಶಿಗೆಲ್ಲಾ ಬ್ಯಾಕ್ಟೀರಿಯದ ಗುಣಗಳನ್ನು ಇತ್ತೀಚೆಗೆ ಮೈಗೂಡಿಸಿಕೊಂಡುಬಿಟ್ಟಿದೆ. ಇಂಥ ದನಗಳ ಮಾಂಸದಿಂದ ತಯಾರಿಸಿದ ಖಾದ್ಯಗಳನ್ನು ತಿಂದಾಗ ತಿಂದವರಲ್ಲಿ ಅತಿಸಾರ ಉಂಟಾದದ್ದು ಆಶ್ಚರ್ಯವಲ್ಲ. ಯಾವ ಪ್ರತಿಜೈವಿಕಗಳಿಗೂ ಮಣಿಯದ ಗುಣವನ್ನು ಬ್ಯಾಕ್ಟೀರಿಯ ಮೈಗೂಡಿಸಿಕೊಂಡಿರುವುದರಿಂದ ರೋಗಿಗಳನ್ನು ಗುಣಪಡಿಸುವುದೇ ಕಷ್ಟ. ಹೀಗಾಗಿ ಅನೇಕರು ಪ್ರಾಣಕ್ಕೆರವಾಗಬೇಕಾದದ್ದೂ ಇದೆ. ಈ ಕೋಲಿ ಬ್ಯಾಕ್ಟೀರಿಯ ದೇಹಕ್ಕೆ ಬೇಕೇಬೇಕು. ಆದರೆ ಅದು ಒಳ್ಳೆಯದನ್ನುಂಟುಮಾಡುವುದಕ್ಕಿಂತ ಕೆಟ್ಟದ್ದನ್ನೇ ಮಾಡುವುದು ಈಗ ಡಾಕ್ಟರರಿಗೆ ಒಂದು ಸಮಸ್ಯೆ. ಮಾಂಸಾಹಾರವನ್ನು ವರ್ಜಿಸುವುದೊಂದೇ ಸದ್ಯಕ್ಕಿರುವ ಉಪಾಯ. ಆದರೆ ಬ್ಯಾಕ್ಟೀರಿಯ ಇತರ ಮೂಲಗಳಿಂದಲೂ ದೇಹದಲ್ಲಿ ನುಸುಳಬಹುದಾದ್ದರಿಂದ ಮಾಂಸಾಹಾರ ವರ್ಜನೆಯೂ ಸಮಸ್ಯೆಗೆ ಪೂರ್ಣಪರಿಹಾರವಲ್ಲ. ಇತ್ತೀಚೆಗೆ ವಿಜ್ಞಾನಿಗಳು ವ್ಯಾಂಕೋಮೈಸಿನ್' ಎಂಬ ಹೊಸ ಪ್ರತಿಜೈವಿಕವನ್ನು ಕಂಡುಹಿಡಿದಿರುವರಾದರೂ ಶೇಕಡಾ ನಾಲ್ವತ್ತು ಜನರಿಗೆ ಮಾತ್ರ ಈ ಹೊಸ ಔಷಧಿ ಪ್ರಯೋಜನಕರ.

ಪ್ರತಿಜೈವಿಕಗಳಿಗೆ ಒಗ್ಗಿಹೋಗಿರುವ ರೋಗಾಣುಗಳ ಸಂಖ್ಯೆ ಇತ್ತೀಚೆಗೆ ಹೆಚ್ಚುತ್ತಿದ್ದರೂ ಈ ನಿಟ್ಟಿನಲ್ಲಿ ಹೊಸ ಹೊಸ ಔಷಧಗಳನ್ನು ಕಂಡುಹಿಡಿಯುವುದು ಅಷ್ಟು ಲಾಭಕರವಲ್ಲದ್ದರಿಂದ ಆ ಕುರಿತು ದೊಡ್ಡ ದೊಡ್ಡ ಕಂಪನಿಗಳು ಹೆಚ್ಚಿನ ಆಸ್ಥೆ ವಹಿಸುತ್ತಿಲ್ಲ. ಅವುಗಳ ಗಮನವೆಲ್ಲ ಕ್ಯಾನ್ಸರು, ಹೃದ್ರೋಗಗಳು ಹಾಗೂ ಏಡ್ಸ್ ರೋಗಕ್ಕೆ ಔಷಧಿಯನ್ನು ಕಂಡುಹಿಡಿಯುವುದರಲ್ಲಿ. ಆದರೆ ಹೊಸ ಹೊಸ ಪ್ರತಿಜೈವಿಕಗಳು ಅಷ್ಟು ಲಾಭದಾಯಕವಲ್ಲದಿದ್ದರೂ ಸ್ವಲ್ಪವಾದರೂ ಲಾಭ ತರಬಹುದೆಂಬ ಆಶೆಯಿಂದ ಇತ್ತೀಚೆ ತಾನೆ ಹುಟ್ಟಿದ ಕೆಲವು ಚಿಕ್ಕ ಅಮೇರಿಕನ್ ಕಂಪನಿಗಳು ಸಂಶೋಧನೆಗಾಗಿ ಹಣ ಸುರಿಯುತ್ತಿವೆ.

ತತ್ಪರಿಣಾಮವಾಗಿ ವಿಜ್ಞಾನಿಗಳು ಸ್ವಲ್ಪಮಟ್ಟಿಗೆ ಯಶಸ್ಸನ್ನು ಸಾಧಿಸಿಯೂ ಇದ್ದಾರೆ. ಕಪ್ಪೆ, ಜೇನ್ನೊಣ, ಹಸು ಮುಂತಾದವುಗಳ ಅಂಗಾಂಶದಿಂದ ರೋಗ ನಿರೋಧಕವಸ್ತುಗಳನ್ನವರು ಹೊರದೆಗೆದಿದ್ದಾರೆ. ಇವು ರೋಗಾಣುಗಳ ಬಹಿರಾವರಣವನ್ನೇ ಛೇದಿಸುವುದರಿಂದ ಒಳ

ಗಿನ ಅಂತಃಸತ್ವವೆಲ್ಲ ಸೋರಿ ರೋಗಾಣು ನಿರ್ನಾಮವಾಗುವುದು. ಮ್ಯಾಗೇನಿನ್ ಎಂದು ಕರೆಯಲ್ಪಡುವ ಈ ಔಷಧಿಗಳು ಈಗ ಬಳಕೆಯಲ್ಲಿರುವ ಪ್ರತಿ ಜೈವಿಕಗಳಿಗಿಂತ ಹೆಚ್ಚು ಪರಿಣಾಮಕರ. ಪ್ರಯೋಗಪಶುಗಳ ಮೇಲಿನ ಅಧ್ಯಯನಗಳು ಇಚ್ಛಿತ ಪರಿಣಾಮವನ್ನು ಬೀರಿವೆಯಾದರೂ ಮಾನವರ ಮೇಲೆ ಈ ಔಷಧಿಯನ್ನಿನ್ನೂ ಪ್ರಯೋಗಿಸಲಾಗಿಲ್ಲ. ಕೆಲ ಬಗೆಯ ಕ್ಯಾನ್ಸರುಗಳಿಗೆ ಕೂಡ ಇದು ಪರಿಣಾಮಕರವಾಗಬಲ್ಲದು.

ಕರುಳಿನ ವ್ರಣಕ್ಕೆ ಮುಖ್ಯ ಕಾರಣ ಎಚ್. ಪೈಲೋರಿ ಎಂಬ ರೋಗಾಣು. ಬಹಿರಾವರಣವನ್ನು ಭೇದಿಸುವ ಮೂಲಕ ಈ ರೋಗಾಣುವನ್ನು ಕೊಲ್ಲುವ ಲ್ಯಾಂಬಿಸಿನ್-ಎನ್. ಎಂಬ ಔಷಧಿಯನ್ನು ಹಾಲಿನಲ್ಲಿರುವ ಬ್ಯಾಕ್ಟೀರಿಯದಿಂದ ಪ್ರತ್ಯೇಕಿಸಲಾಗಿದೆ.

ರೋಗಾಣುಗಳು ದೇಹದಲ್ಲಿ ಪ್ರವೇಶಿಸಿದ ಕೂಡಲೆ ಜೀವಾಣುಗಳ ಗ್ರಾಹಕಗಳ ಮೇಲೆ ತಳವೂರಿ ವೃದ್ಧಿಸತೊಡಗುವವು. ಇದನ್ನು ತಡೆಗಟ್ಟಲು ವಿಜ್ಞಾನಿಗಳು ಇತ್ತೀಚೆಗೆ ಶರ್ಕರಪಿಷ್ಟಗಳಿಂದ ನಕಲಿ ಗ್ರಾಹಕಗಳನ್ನು ತಯಾರಿಸಿದ್ದಾರೆ. ಇವು ರಕ್ತದಲ್ಲಿ ತೇಲುವಾಗ ನಿಜವಾದ ಗ್ರಾಹಕಗಳೆಂದೇ ಭಾವಿಸಿದ ರೋಗಾಣುಗಳು ಅವುಗಳನ್ನು ಆಶ್ರಯಿಸುವವು. ಸ್ವಾಭಾವಿಕವಾಗಿಯೆ ದೇಹ ಕಲ್ಮಶಗಳನ್ನು ಹೊರಹಾಕುವಾಗ ಇವುಗಳನ್ನೂ ಹೊರಹಾಕುವುದರಿಂದ ರೋಗ ತಂತಾನೆ ಶಮನಗೊಳ್ಳುವುದು. ಈ ಔಷಧ ರೋಗಾಣುಗಳನ್ನು ಕೊಲ್ಲುವುದಿಲ್ಲವಾದ್ದರಿಂದ ಅವು ರೋಗನಿರೋಧಕ ಶಕ್ತಿಯನ್ನು ಬೆಳೆಸಿಕೊಳ್ಳುವ ಪ್ರಮೇಯವೂ ಇಲ್ಲ. ಅತಿಸಾರಕ್ಕೆ ರಾಮಬಾಣವಾಗಬಹುದಾದ ಈ ಬಗೆಯ ಹೊಸ ಔಷಧಿಯನ್ನು ಈಗಾಗಲೇ ತಯಾರಿಸಲಾಗಿದೆ. ಇದೇ ಉಪಾಯವನ್ನನುಸರಿಸಿ ಬೇರೆ ಬೇರೆ ರೋಗಗಳಿಗೆ ಗುಣಕರವಾಗಬಹುದಾದ ಔಷಧಗಳನ್ನು ಸಂಶೋಧಿಸಲು ಪ್ರಯತ್ನಗಳು ನಡೆಯುತ್ತಿವೆ.

ಪ್ರತಿಜೈವಿಕದ ಸಂಪರ್ಕ ಬಂದಕೂಡಲೆ ರೋಗಾಣುವಿನ ವಂಶವಾಹಿಗಳು ಜಾಗ್ರತವಾಗಿ ರೋಗಾಣುವಿನ ಸುತ್ತ ಪ್ರೋಟೀನಿನ ರಕ್ಷಣಾ ಕವಚವನ್ನು ನಿರ್ಮಿಸಿಕೊಳ್ಳುವವಂತೆ. ವಂಶವಾಹಿಗಳು ಜಾಗ್ರತವಾಗದಿದ್ದಲ್ಲಿ ಕವಚವನ್ನು ನಿರ್ಮಿಸಿಕೊಳ್ಳುವ ಪ್ರಶ್ನೆಯೇ ಇರುವುದಿಲ್ಲ. ರಕ್ಷಣಾ ಕವಚ ಇಲ್ಲದ್ದರಿಂದ ಆಗ ಪ್ರತಿಜೈವಿಕದಿಂದ ರೋಗಾಣುವನ್ನು ಕೊಲ್ಲುವುದು ಸುಲಭ ಎಂದು ಯೋಚಿಸಿದ ಅಮೆರಿಕದ ವಿಜ್ಞಾನಿಗಳು ಅಂತಹ ಔಷಧಗಳನ್ನು ಅಭಿವೃದ್ಧಿಪಡಿಸುತ್ತಿದ್ದಾರೆ. ವಿವಿಧ ರೋಗಾಣುಗಳ ಡಿಎನ್‌ಎ ಸಂಕೇತಗಳನ್ನು ಗ್ರಹಿಸಲೂ ಪ್ರಯತ್ನಗಳು ನಡೆಯುತ್ತಾ ಇವೆ.

ಜೈವಿಕ ತಂತ್ರಜ್ಞಾನವನ್ನು ಆಧರಿಸಿದ ಹೊಸ ಹೊಸ ಲಸಿಕೆಗಳನ್ನು ವಿಜ್ಞಾನಿಗಳು ಕಂಡುಹಿಡಿಯುತ್ತಿದ್ದಾರೆ. ಆದರೆ ಈ ಲಸಿಕೆಗಳನ್ನು ಚುಚ್ಚಿಸಿಕೊಳ್ಳಬೇಕಾಗಿಲ್ಲ. ಉದಾಹರಣೆಗೆ ವಿನ್ಸೆಂಟ್ ಫಿಶೆಟ್ಟಿ ಎಂಬ ವಿಜ್ಞಾನಿ ಇದೇ ವಿಧಾನವನ್ನು ಬಳಸಿ ನಾಸಿಕ ಸಿಂಚನ(**nasal spray**)ವನ್ನು ತಯಾರಿಸಿದ್ದಾರೆ. ಅದನ್ನು ಮೂಗಿಗೆ ಸಿಂಪಡಿಸಿದರೆ ಎಂತಹ ಕೆಮ್ಮಾದರೂ ದೂರವಾಗಬೇಕು. ಅದನ್ನೀಗ ಪ್ರಯೋಗಪಶುಗಳ ಮೇಲೆ ಪರೀಕ್ಷಿಸಲಾಗುತ್ತಿದೆ. ಪ್ರತಿಜೈವಿಕಗಳು ರೋಗಾಣುಗಳನ್ನಷ್ಟೇ ಅಲ್ಲ, ಪಚನಕ್ರಿಯೆಗೆ ಅಗತ್ಯವಾದ ಬ್ಯಾಕ್ಟೀರಿಯಾಗಳನ್ನು ಕೊಲ್ಲುತ್ತವೆ. ಇದನ್ನು ಹೋಗಲಾಡಿಸಲು ವಿಜ್ಞಾನಿಗಳು ಬಾಯಿಯ ಮೂಲಕ ತೆಗೆದುಕೊಳ್ಳಬಹುದಾದ ಲಸಿಕೆಗಳನ್ನು ಸೃಷ್ಟಿಸುವಲ್ಲೀಗ ನಿರತರಾಗಿದ್ದಾರೆ.

ಹೀಗೆ ರೋಗಾಣುಗಳ ವಿರುದ್ಧ ವಿಜ್ಞಾನಿಗಳ ಸಮರ ನಡೆಯುತ್ತಲೇ ಇದೆ. ಈಗ ಲಭ್ಯವಾಗಿರುವ ಔಷಧಿಗಳಿಗೂ ಮಣಿಯದ ರೋಗಾಣುಗಳೂ ಹೊಸ ತಂತ್ರವನ್ನೇ ಬಳಸಿ ತಯಾರಿಸಿದ ಈ ಔಷಧಗಳಿಗೆ ಮಣಿಯುವದರಲ್ಲಿ ಸಂಶಯವಿಲ್ಲ. ಆದರೆ ಈ ಔಷಧಗಳನ್ನೂ ರೋಗಾಣುಗಳು ಮೈಗೂಡಿಸಿಕೊಂಡರೆ?

ನಿಜಕ್ಕೂ ಮೈಯಲ್ಲಿ ನಡುಕ ಹುಟ್ಟಿಸುವ ಸಂದರ್ಭ. ಅಲ್ಲವೆ? ●

# ಅಂಧ ಬಾಕ್ಸಿಂಗ್ ಪಟು




• ಎಚ್. ಆರ್. ಸುರೇಶ್

ಅವನ ಸಮಕಾಲೀನರಿಗೆ ಹೋಲಿಸಿದರೆ ಆತ ಅಷ್ಟೇನೂ ಉತ್ತಮ ಬಾಕ್ಸಿಂಗ್ ಪಟುವಲ್ಲ. ಆದರೆ ಆತ ಎದುರಿಸಿದ ೬೪೦ ಪಂದ್ಯಗಳಲ್ಲಿ ಸೋಲುಂಡದ್ದು ಒಮ್ಮೆ ಮಾತ್ರ. ಹೀಗಾಗಿ ಬೋಸ್ಟನ್‌ನಿಂದ ಪನಾಮಾವರೆಗೂ ಇವನಿಗೆ ಅಭಿಮಾನಿಗಳಿದ್ದರು. ಇಂಥ ಅದ್ಭುತ ಬಾಕ್ಸಿಂಗ್ ಪಟು ತನಗೆ ಬಂದೊದಗಿದ ಅಂಧತ್ವ, ಬಡತನ ಮತ್ತು ತನ್ನ ಜನಾಂಗದವರೇ ತೋರಿದ ಅಸಡ್ಡೆಯಿಂದ ಹಲವಾರು ವರ್ಷ ಅಜ್ಞಾತನಾಗಿ ಯಾರ ಕಣ್ಣಿಗೂ ಬೀಳದಂತೆ ಉಳಿದು ತನಗೆ ಸಿಕ್ಕ ಪರಿಹಾರ ಧನದ ಸಹಾಯದಿಂದಲೇ ಬದುಕು ಸಾಗಿಸಿದ್ದ.

ತನ್ನ ಸ್ಥಿತಿಯನ್ನು ಕಂಡು ಯಾರಾದರೂ ಅನುಕಂಪ ವ್ಯಕ್ತಪಡಿಸಿದರೆಂದರೆ, "ಈ ಮುದಿಯನಿಗಾಗಿ ಯಾರೂ ಚಿಂತಿಸಬೇಕಿಲ್ಲ. ಈ ಮುದಿಯ ತನ್ನ ಹರೆಯದಲ್ಲಿ ಒಳ್ಳೆಯ ಸಮಯವನ್ನೇ ಕಳೆದಿದ್ದಾನೆ. ಬಾಕ್ಸಿಂಗ್‌ನಲ್ಲಿ ಮೋಜನ್ನೂ ಅನುಭವಿಸಿದ್ದಾನೆ. ಈಗ ಒಂದಷ್ಟು ಚಿಲ್ಲರೆ ಕಿಸೆಯಲ್ಲಿದೆ ಎಂದರೆ ಸಾಕು ಈತ ಚೆನ್ನಾಗಿದ್ದಾನೆ ಎಂದೇ ಅರ್ಥ," ಎಂದು ನಿರ್ಲಿಪ್ತನಾಗಿ ಮಾತನಾಡುತ್ತಿದ್ದ.

ಇದು ಈ ಶತಮಾನದ ಮೊದಲ ಕಾಲು ಭಾಗದಲ್ಲಿ ಬಾಕ್ಸಿಂಗ್ ಕ್ಷೇತ್ರ ಮತ್ತು ಕ್ರೀಡಾಲೋಕದಲ್ಲಿ ಸಾಕಷ್ಟು ಹೆಸರು ಗಳಿಸಿ ಜೀವಂತ ಐತಿಹ್ಯವಾಗಿದ್ದ ಸ್ಯಾಮ್ ಲ್ಯಾಂಗ್‌ಫೋರ್ಡ್‌ನ ಕಥೆ.

ಸ್ಯಾಮ್ ಸಣ್ಣವನಿದ್ದಾಗ ಸಂಭವಿಸಿದ ಅಪಘಾತ ಆತನ ದೃಷ್ಟಿಯನ್ನು ಸ್ವಲ್ಪ ಮಂದಗೊಳಿಸಿತ್ತು. ಆದರೂ ಐದಡಿ ಆರಂಗುಲ ಎತ್ತರ, ೧೬೦ ಪೌಂಡ್ ತೂಕದ ಸ್ಯಾಮ್ ವಿರುದ್ಧ ಅವನ ಸಮತೂಕದ ಬಾಕ್ಸರ್‌ಗಳ್ಯಾರೂ ಸೆಣಸಾಟಕ್ಕೆ ಇಳಿಯುತ್ತಿರಲಿಲ್ಲ. ಹೀಗಾಗಿ ಅವನ ಸೆಣಸಾಟವೇನಿದ್ದರೂ ಲೈಟ್ ಹೆವಿವೇಟ್ ಮತ್ತು ಹೆವಿ ವೇಟ್ ತೂಕದ ಬಾಕ್ಸರ್‌ಗಳೊಂದಿಗೆ ಮಾತ್ರ ನಡೆಯುತ್ತಿತ್ತು.

ಸ್ವಲ್ಪ ಉದ್ದವೆನಿಸುವ ಕೈಗಳು, ವಿಶಾಲವಾದ ಎದೆ, ಪಾದರಸದಂತೆ ಚಲಿಸುವ ಕಾಲ್ಗಳು, ಸಹಜ ಚಾಕಚಕ್ಯ. ೪೦ ರಿಂದ ೫೦ ಪೌಂಡ್ ತೂಕದ ಇವನ ಹೊಡೆತಗಳೆಂದರೆ ಎದುರಾಳಿ ಪಡಚು. ಸ್ಯಾಮ್‌ನ ಈ ಪ್ರಹಾರಗಳನ್ನು ಕಂಡ ಕ್ರೀಡಾ ಬರಹಗಾರನೊಬ್ಬ, "ಆತನ ಹೊಡೆತಗಳು ಆ ಕ್ಷಣದ ಉದ್ವೇಗದಲ್ಲಿ ಕೊಟ್ಟಂಥವುಗಳಾಗಿರುತ್ತಿರಲಿಲ್ಲ. ಆದರೂ ಅತ್ಯಂತ ವೇಗದಿಂದ ಕೂಡಿದ ಬಲವಾದ ಪೆಟ್ಟು ಎದುರಾಳಿಗೆ ಬಿದ್ದಿತೆಂದರೆ ಕಥೆ ಮುಗಿದಂತೆಯೇ, ಅವನ ಸಿಡಿಲಿನಂತಹ ಹೊಡೆತಗಳೆದುರು ನಿಲ್ಲುವ ಸಾಮರ್ಥ್ಯವಿದ್ದುದು ಬೆರಳೆಣಿಕೆಯಷ್ಟು ಮಂದಿಗೆ ಮಾತ್ರ," ಎಂದು ಶ್ಲಾಘಿಸಿದ್ದಾನೆ.

ಸ್ಯಾಮ್ ಪ್ರಕಾರ, ಆತ ಜನಿಸಿದ್ದು ನೋವಾ ಸ್ಕಾಟಿಯಾದ ವೇಮೌತ್ ಎಂಬಲ್ಲಿ (೧೮೮೬) ಅವನಿಗೆ ಒಂಬತ್ತು ವರ್ಷ ತುಂಬುವುದರೊಳಗೆ ಅವನ ತಾಯಿ ಸತ್ತಿದ್ದಳಂತೆ. ತಂದೆ ಮಗನನ್ನು ಅನಾದರ, ಅಸಡ್ಡೆಗಳಿಂದ ಹೀನಾಯವಾಗಿ ನಡೆಸಿ

ಕೊಳ್ಳುತ್ತಿದ್ದನಂತೆ. ಹೀಗಿರುವಾಗ ಬೇಸಿಗೆಯನ್ನು ಕಳೆಯಲೆಂದು ವೇಮೌತ್‌ಗೆ ಬಂದ ದಯಾಮಯಿಯೊಬ್ಬ ಇವನನ್ನು ಬೋಸ್ಟನ್‌ಗೆ ಕರೆದೊಯ್ದನಂತೆ.

ಬೋಸ್ಟನ್ ಸೇರಿದಾಗ ಸ್ಯಾಮ್‌ಗೆ ಇನ್ನೂ ೧೫ ವರ್ಷ ತುಂಬಿರಲಿಲ್ಲ. ಆದರೂ ಹೊಟ್ಟೆಪಾಡಿಗೆ ದುಡಿಮೆಯೊಂದು ಬೇಕಲ್ಲ. ಮದ್ಯದ ಅಂಗಡಿಯೊಂದರಲ್ಲಿ ಸಣ್ಣಪುಟ್ಟ ಕೆಲಸಗಳನ್ನು ಮಾಡತೊಡಗಿದ. ಅದೊಂದು ದಿನ ಟೊಣಪನೊಬ್ಬ ಬಂದ. ಮೂರು ಬಿಯರ್‌ಗಳನ್ನು ಕೊಂಡ. ಕೊಂಡದ್ದಷ್ಟೇ. ಹಣ ಕೊಡದೇ ಬಿರಬಿರನೆ ಹೊರನಡೆದ. ಆತ ಕೊಡಬೇಕಿದ್ದ ೧೫ ಸೆಂಟ್ಸ್‌ಗಳಿಗಾಗಿ ಸ್ಯಾಮ್ ಗೋಗರೆದು ಸಾಕಾಗಿ ಕೊನೆಗೆ ಅರಚುತ್ತಿದ್ದ ಸಮಯದಲ್ಲೇ ಹೊರಗೆಲ್ಲೋ ಹೋಗಿದ್ದ ಅಂಗಡಿ ಮಾಲೀಕ ಬಂದ. ವಿಷಯ ತಿಳಿದು, "ಹಣವನ್ನು

---

ಇನ್ನೊಬ್ಬರ ಮೇಲೆ ಅಧಿಕಾರ ಚಲಾಯಿಸುವುದು ಪ್ರಾಮಾಣಿಕ ಮನುಷ್ಯನಿಗೆ ಖುಷಿಕೊಡುವುದೇ ಇಲ್ಲ.

• ಥಾಮಸ್ ಜೆಫ್‌ರ್‌ಸನ್

---

ವಸೂಲು ಮಾಡಿಕೊಂಡೇ ಬಾ ಹೋಗು," ಎಂದು ಅಟ್ಟಿದ.

ಟೊಣಪನನ್ನು ಬೆನ್ನಟ್ಟಿದ ಸ್ಯಾಮ್ ಆತನೊಂದಿಗೆ ಜಗಳಕ್ಕೆ ಇಳಿದ. ಈತನೋ ಕೇವಲ ೧೨೦ ಪೌಂಡ್ ತೂಕದ ಹುಡುಗ. ಅವನೋ ಧಡಿಯ. ಆದರೂ ಸ್ಯಾಮ್ ಕೊಟ್ಟ ಹೊಡೆತಕ್ಕೆ ಟೊಣಪ ನೆಲಕ್ಕುರುಳಿದ! ಸ್ಯಾಮ್‌ನ ಈ ಸಾಮರ್ಥ್ಯವನ್ನು ಕಂಡು ಚಕಿತನಾದ ಮಾಲೀಕ, "ಎಂಥಾ ಮುಷ್ಟಿ ಪ್ರಹಾರವಯ್ಯಾ ನಿನ್ನದು! ನೋಡು, ಪ್ರಯತ್ನಿಸಿದರೆ ನೀನು ಬಾಕ್ಸರ್ ಆಗಬಹುದು," ಎಂದು ಬೆನ್ನುತಟ್ಟಿದ.

ಕೇವಲ ಐದು-ಹತ್ತು ಡಾಲರ್‌ಗಳಿಗೆ ದುಡಿಯುತ್ತಿದ್ದ ಸ್ಯಾಮ್‌ಗೆ ಮಾಲೀಕನ ಮಾತು ಹೌದೆನಿಸಿತು. ವೃತ್ತಿಪರ ಬಾಕ್ಸಿಂಗ್‌ಗೆ ಇಳಿದಲ್ಲಿ ಮಾಂಸದ ತುಂಡುಗಳನ್ನಾದರೂ ಮೆಲ್ಲುವಷ್ಟು ಹಣವನ್ನು ಗಳಿಸಬಹುದಲ್ಲ ಎಂಬ ಆಸೆಯೂ ಉಂಟಾಯಿತು.

ಆಗ ಸ್ಯಾಮ್‌ಗೆ ಕೇವಲ ೧೭ ವರ್ಷ. ತನ್ನ ಮೊದಲ ವೃತ್ತಿಪರ ಬಾಕ್ಸಿಂಗ್‌ನಲ್ಲಿ ಲೈಟ್ ವೇಟ್ ವಿಭಾಗದಲ್ಲಿ ಹೆಸರಾಂತನಾಗಿದ್ದ ಜೋಗ್ಯಾನ್ಸ್ ಎಂಬುವನನ್ನು ಹಣಿದ. ನಂತರ ತನ್ನ ೨೦ನೇ ವಯಸ್ಸಿನಲ್ಲಿ, ಬಾಕ್ಸಿಂಗ್ ಜೀವನದ ತುತ್ತ ತುದಿಯಲ್ಲಿದ್ದ ಜಾನ್‌ಸನ್‌ನೊಡನೆ ಹೋರಾಡಲು ಸಿದ್ಧನಾದ. ಆಗ ಸ್ಯಾಮ್‌ನ ತೂಕ ೧೪೦ ಪೌಂಡ್. ಜಾನ್‌ಸನ್‌ನದು ೧೯೪ ಪೌಂಡು. ಕೆಲವೇ ದಿನಗಳಲ್ಲಿ ವಿಶ್ವ ಚಾಂಪಿಯನ್‌ಶಿಪ್‌ನಲ್ಲಿ ಸೆಣಸಲಿದ್ದ ಜಾನ್‌ಸನ್ ಆರನೇ ಸುತ್ತಿನಲ್ಲಿ ಸ್ಯಾಮ್‌ನನ್ನು ಹೊಡೆದುರುಳಿಸಿದ. ಆದರೆ, ಒಂಬತ್ತನೇ ಸುತ್ತಿನ ವೇಳೆಗೆ ಸ್ಯಾಮ್‌ನ ಹೊಡೆತಗಳೆದುರು ಜಾನ್‌ಸನ್ ನಡುಗತೊಡಗಿದ. ೧೫ನೇ ಸುತ್ತಿನ ಅಂತ್ಯಕ್ಕೆ ಸೆಣಸಾಡುವ ತೀವ್ರ ಆಸಕ್ತಿಯಿದ್ದರೂ ಜಾನ್‌ಸನ್ ಸಂತಸದಿಂದ ಅಂಕಣವನ್ನು ಬಿಟ್ಟು ಹೊರನಡೆದ.

ಹಾಗೆ ನೋಡಿದರೆ ಸ್ಯಾಮ್ ಅದುವರೆಗೆ ಬಾಕ್ಸಿಂಗ್ ತರಬೇತಿಯನ್ನೇನೂ ಪಡೆದುಕೊಂಡಿರಲಿಲ್ಲ. ಆತ ಜಾನ್‌ಸನ್‌ನನ್ನು ಚಚ್ಚಿದ ರೀತಿಯನ್ನು ಕಂಡ ಆಗಿನ ಹೆಸರಾಂತ ತರಬೇತುದಾರನೊಬ್ಬ ಸ್ಯಾಮ್‌ಗೆ ತರಬೇತಿ ಕೊಡಲು ಮುಂದೆ ಬಂದ. ಬಾಕ್ಸಿಂಗ್ ವಿದ್ಯೆಯ ಅತ್ಯುತ್ತಮ ಹೊಡೆತ ಮತ್ತು ವರಸೆಗಳನ್ನು ಸ್ಯಾಮ್‌ಗೆ ಹೇಳಿಕೊಟ್ಟ.

ತರಬೇತಿ ದೊರೆತನಂತರ ಸ್ಯಾಮ್ ನಿಶ್ಚಿಂತನಾಗಿ ಬಾಕ್ಸಿಂಗ್ ಅಂಕಣಕ್ಕೆ ಇಳಿಯತೊಡಗಿದ. ಎದುರಾಳಿಯ ದೇಹದ ತೂಕ ಅಥವಾ ಎದುರಾಗಬಹುದಾದ ಪರಿಸ್ಥಿತಿಗಳಾವುದನ್ನೂ ಲೆಕ್ಕಿಸದೇ ಹೊಡೆದಾಡತೊಡಗಿದ. ಹೀಗೆಯೇ ೨೩ ವರ್ಷಗಳ ಕಾಲ ಬಾಕ್ಸಿಂಗ್ ಪಟುವಾಗಿ ಜೀವನ ಸಾಗಿಸಿದ ಸ್ಯಾಮ್ ೬೪೦ ಬಾರಿ ಸೆಣಸಾಡಿದ.

೧೯೧೭ರಲ್ಲಿ ಹೆವಿ ವೇಟ್ ವಿಭಾಗದಲ್ಲಿ ಸಾಮಾನ್ಯ ಬಾಕ್ಸರ್ ಆಗಿದ್ದ ಫ್ರೆಡ್‌ಫಲ್ಟನ್ ಎಂಬುವವನೊಂದಿಗೆ ಹೊಡೆದಾಡುವಾಗ ಸ್ಯಾಮ್‌ನ ಘಾಸಿಗೊಳಗಾಗಿದ್ದ ಎಡಗಣ್ಣಿನ ನರಕ್ಕೆ ಪೆಟ್ಟು ಬಿತ್ತು. ಆ ಕಣ್ಣಿನ ದೃಷ್ಟಿ ಮತ್ತಷ್ಟು ಕ್ಷೀಣಗೊಂಡಿತು. ಆದರೆ, ತನಗೆ ಚಿಕಿತ್ಸೆ ನೀಡಿದ ವೈದ್ಯನನ್ನು ವಿಶ್ವಾಸಕ್ಕೆ ತೆಗೆದುಕೊಂಡ ಸ್ಯಾಮ್ ಮತ್ತೆ ಬಾಕ್ಸಿಂಗ್ ಆರಂಭಿಸಿದ.

ಇಂತಹ ಸಮಯದಲ್ಲಿಯೂ ಸ್ಯಾಮ್ ಮೆಕ್ಸಿಕೋದಲ್ಲಿ ಅತ್ಯಂತ ನಾಟಕೀಯ ಸನ್ನಿವೇಶದ ನಡುವೆ ಹೊಸ ಅಧ್ಯಾಯವನ್ನು ಬರೆದ. ೧೯೧೧ರಲ್ಲಿ ನಡೆದ ಈ ಪಂದ್ಯ ಅತ್ಯಂತ ರೋಚಕವಾದದ್ದು. ರಾತ್ರಿಯ ವೇಳೆ ಸ್ಯಾಮ್‌ನ ದೃಷ್ಟಿ ಸ್ಪಷ್ಟವಾಗಿರುತ್ತಿತ್ತು. ಆದರೆ ಹಗಲಿನಲ್ಲಿ ಬರುತ್ತಿತ್ತು ಪೀಕಲಾಟ. ಸೂರ್ಯನ ಬೆಳಕಿನಲ್ಲಿ ಒಂದಡಿ ದೂರದಲ್ಲಿದ್ದರೂ ಏನೂ ಕಾಣುತ್ತಿರಲಿಲ್ಲ. ಹೀಗಿದ್ದಾಗ ಬ್ಯಾಟ್ಲಿಂಗ್ ಸ್ಯಾವೇಜ್ ಎನ್ನುವವನೊಂದಿಗೆ ರಾತ್ರಿ ಬಾಕ್ಸಿಂಗ್‌ಗೆ ಆತ ಸಹಿ ಹಾಕಿದ. ಆದರೆ ಸ್ಯಾಮ್‌ನ ಗುಟ್ಟು ಬಯಲಾದುದರಿಂದ ಸ್ಯಾವೇಜ್‌ನ ಬೆಂಬಲಿಗರು ಈ ಪಂದ್ಯವನ್ನು ಮಧ್ಯಾಹ್ನ ನಡೆಸುವಂತೆ ವ್ಯವಸ್ಥಾಪಕರ ಮನವೊಲಿಸಿದರು.

ಆದರೆ ಸ್ಯಾಮ್ ಆತ್ಮಸ್ಥೈರ್ಯದಿಂದಲೇ ಅಂಕಣಕ್ಕಿಳಿದ. ಆಗವನಿಗೆ ೩೨ ವರ್ಷ. ತೀರ್ಪುಗಾರ ಬಾಕ್ಸಿಂಗ್ ಪಟುಗಳಿಬ್ಬರಿಗೂ ತಮ್ಮ ತಮ್ಮ ಸ್ಥಾನಗಳಿಗೆ ಹೋಗುವಂತೆ ಸೂಚಿಸಿದ. ಆದರೂ ಬೋಸ್ಟನ್‌ನ ಕೀಲಣ್ಣೆಯಂತಹ ಸ್ಯಾಮ್ ಅಂಕಣದ ಮಧ್ಯಭಾಗದಲ್ಲಿ ನಿಂತು, "ನನ್ನ ಸ್ಥಾನ ನನಗೆ ಕಾಣುತ್ತಲಿಲ್ಲ," ಎಂದು ಹೇಳುತ್ತಿದ್ದ.

ಆರಂಭದ ಗಂಟೆ ಬಾರಿಸಿತು. ಸ್ಯಾಮ್‌ನನ್ನು ಕೊಲ್ಲಬೇಕೆಂಬ ಹವಣಿಕೆಯನ್ನು ಮಾಡಿಕೊಂಡಿದ್ದ ಸ್ಯಾವೇಜ್ ನುಗ್ಗಿಬಂದ. ಆಗ ಸ್ಯಾಮ್ ನಯವಾಗಿ ಪಕ್ಕಕ್ಕೆ ಸರಿದು ಎದುರಾಳಿಯನ್ನು ದೃಷ್ಟಿಸಲು ಪ್ರಯತ್ನಿಸಿದ. ಇದನ್ನು ಕಂಡ ಸ್ಯಾವೇಜ್ ಅಂಕಣದಲ್ಲಿ ನರ್ತಿಸುತ್ತ ಬಂದು ಎಡಗೈಯಿಂದ ಎರಡು ಬಾರಿ ತಿವಿದ. ಎರಡನೇ ತಿವಿತದ ಸಮಯದಲ್ಲೇ ಸ್ಯಾಮ್ ತನ್ನ ಬಲಗೈಯಿಂದ ಸ್ಯಾವೇಜ್‌ನನ್ನು ಹಿಡಿದುಕೊಂಡ. ಮಿಂಚಿನ ವೇಗದಲ್ಲಿ ಒಂದಾದ ಮೇಲೊಂದರಂತೆ ಹೊಡೆತಗಳನ್ನು ಕೊಟ್ಟು ಸ್ಯಾವೇಜ್‌ನನ್ನು ಮಣ್ಣು ಮುಕ್ಕಿಸಿದ.

ಈ ಹೋರಾಟದ ನಂತರ ಸ್ಯಾಮ್ "ಅವನಿಗೆ ಹ್ಯಾಗೆ ಹೊಡೆದನೆಂದು ನನಗೇ ಗೊತ್ತಾಗಲಿಲ್ಲ. ಅವನು ಎರಡು ಬಾರಿ ತಿವಿದರೂ ನಾನೇ ಮೆಕ್ಸಿಕೋದ ಚಾಂಪಿಯನ್ ಆದೆನಲ್ಲ" ಎಂದು ಹೆಮ್ಮೆಯಿಂದ ಹೇಳಿಕೊಂಡ. ಹೀಗಿದ್ದೂ ಬಾಕ್ಸಿಂಗನ್ನು ಸ್ಯಾಮ್ ಎಂದೂ ವ್ಯಾಪಾರವಾಗಿ ಮಾಡಿಕೊಳ್ಳಲಿಲ್ಲ. ಅವನಿಗೆ ಬಾಕ್ಸಿಂಗ್ ಎಂದರೆ ಒಂದು ಉಲ್ಲಾಸಭರಿತ ಕ್ರೀಡೆ, ಮೋಜು ಅಷ್ಟೆ. ಒಳ್ಳೆಯ ಆಹಾರ, ಉತ್ತಮ ಪಂದ್ಯ ಮತ್ತು ಹೊಟ್ಟೆ ತುಂಬ ನಗು ಅವನಿಗೆ ಇಷ್ಟ. ಹಾಗಾಗಿ ಸ್ಯಾಮ್ 'ಹಹ್ಹಾ....' ಎಂದು ಗಹಗಹಿಸಿ ನಗುತ್ತಿದ್ದ ರೀತಿ ಅವನಿಗೆ 'ಹೋ ಹೋ' ಎಂಬ ಪ್ರೀತಿಯ ಅಡ್ಡ ಹೆಸರನ್ನೆ ತಂದುಕೊಟ್ಟಿತು.

ಬಾಕ್ಸಿಂಗ್ ಎಂದೂ ಸ್ಯಾಮ್‌ಗೆ ವ್ಯಾಪಾರವಾಗಿರಲಿಲ್ಲ ಎಂಬುದಕ್ಕೆ ಅವನಾಡಿದ ಒಂದು ಪಂದ್ಯವೇ ಉದಾಹರಣೆ.

ಹೆವಿ ವೇಟ್ ಬಾಕ್ಸರ್ ಒಬ್ಬನೊಡನೆ ಈತ ಸೆಣಸಬೇಕಿತ್ತು. ಆದರೆ ಈ ಪಂದ್ಯ ಲಿಖಿತ ಒಪ್ಪಂದದಲ್ಲಿ ಇರಲಿಲ್ಲ. ಇದನ್ನು ಕಂಡ ಪ್ರೋತ್ಸಾಹಕ ಸ್ಯಾಮ್ ಬಳಿ ಬಂದು "ನಿನ್ನ ಎದುರಾಳಿ ಲಿಖಿತ ಒಪ್ಪಂದ ಪತ್ರ ಹೊಂದಿದ್ದಾನೆ. ಆದ್ದರಿಂದ ನಿನಗೆ ೩೦೦ ಡಾಲರ್‌ಗಳು ಮಾತ್ರವೇ ದೊರೆಯುವುದು," ಎಂದು ಹೇಳಿದ.

ಈ ಮಾತನ್ನು ಕೇಳಿದ ಸ್ಯಾಮ್, "ಚೀಫ್, ನೀನಿಲ್ಲಿಯವರೆಗೆ ನೋಡಿರುವ ಹೋರಾಟಗಳಲ್ಲೆಲ್ಲ ಈ ದಿನದ ಹೋರಾಟ ಅತ್ಯಂತ ಕಡಿಮೆ ಅವಧಿಯದಾಗಿರುತ್ತದೆ. ನೋಡುವಿಯಂತೆ," ಎಂದುಬಿಟ್ಟ ದೃಢ ಸ್ವರದಲ್ಲಿ.

ಆರಂಭದ ಗಂಟೆ ಬಾರಿಸುತ್ತಿದ್ದಂತೆಯೇ ಹಸಿದ ಚಿರತೆಯಂತೆ ಎದುರಾಳಿಯ ಕಡೆ ನುಗ್ಗಿದ ಸ್ಯಾಮ್ ಒಂದೇ ಒಂದು ಹೊಡೆತ ಹಾಕಿದ. ಎದುರಾಳಿ ಮಣ್ಣು ಮುಕ್ಕಿದ. ಇದು ಸ್ಯಾಮ್ ಸಾಧಿಸಿದ ಅದ್ಭುತಗಳಲ್ಲೊಂದು.

ಹೀಗೆ ಒಂದರ ಮೇಲೊಂದರಂತೆ ಗೆಲುವು ಸಾಧಿಸಿದ ಸ್ಯಾಮ್ ಸೋತದ್ದು ೧೯೨೪ರಲ್ಲಿ ಮಾತ್ರ. ಆ ವರ್ಷ ವೆನಿಸ್ಸ್‌ನಲ್ಲಿ ಎಡಿ ಟ್ರಿಂಬ್ಲಿ ಎನ್ನುವವನೊಂದಿಗೆ ಹೋರಾಡಬೇಕಿತ್ತು. ಈ ಹೊತ್ತಿಗೆ ಸ್ಯಾಮ್‌ನ ದೃಷ್ಟಿ ಸಂಪೂರ್ಣ ಇಂಗಿ ಹೋಗಿತ್ತು. ರಿಂಗ್‌ಗೆ ಇಳಿದ ಸ್ಯಾಮ್ ಎದುರಾಳಿಗಾಗಿ ಹುಡುಕಾಡತೊಡಗಿದ. ಇದೇ ಸಮಯವನ್ನು ಸಾಧಿಸಿದ ಟ್ರಿಂಬ್ಲಿ ಸ್ಯಾಮ್‌ನನ್ನು ಹೊಡೆದು ಕೆಡವಿದ. ಸ್ಯಾಮ್ ಸಂಪೂರ್ಣ ಕುರುಡಾಗಿದ್ದಾನೆ ಎಂದು ಆತನ ವೈದ್ಯ ಸಾರಿದ. ಆದಾಗಲೇ ಜೀವಂತ ಐತಿಹ್ಯವಾಗಿದ್ದ ಸ್ಯಾಮ್‌ನ ಬಾಕ್ಸಿಂಗ್ ಜೀವನ ದುರಂತದಲ್ಲಿ ಅಂತ್ಯಗೊಂಡಿತು. ●

# ಡೈನೋಸಾರ್‌ಗಳ ಪಳಿಯುಳಿಕೆಗಳು

• ಅರುಣ

(ಕೃಪೆ: ಸ್ಪೆಕ್ಟ್ರಮ್)

ತೀರಾ ಈಚೆಗೆ ಸ್ಕಾಟ್ಲೆಂಡಿನ ಸಮುದ್ರ ತೀರದಲ್ಲಿ ಬ್ರಿಟನ್ನಿನ ಭೂವಿಜ್ಞಾನಿಗಳ ತಂಡವೊಂದು ಅಪರೂಪದ ಶಿಲೆಯೊಂದನ್ನು ಪತ್ತೆ ಹಚ್ಚಿತು. ವಾಸ್ತವವಾಗಿ ಅದು ಶಿಲೆಯಾಗಿರಲಿಲ್ಲ. ೧೭೫ ಮಿಲಿಯ ವರ್ಷಗಳ ಹಿಂದೆ ಈ ಭೂಮಂಡಲದಲ್ಲಿ ಬದುಕಿದ್ದವೆನ್ನಲಾದ ಮಹಾಪೆಡಂಭೂತಗಳು ಅಥವಾ ಡೈನೊಸಾರಸ್‌ನ ಮೂಳೆಯಾಗಿತ್ತು.

ಬ್ರಿಟನ್ನಿನ ಭೂ ವಿಜ್ಞಾನಿ ಡೋಗ್ ಬಾಯ್ಡ್ ಮತ್ತು ಅವರ ಸಹೋದ್ಯೋಗಿಗಳ ತಂಡ ಸ್ಕಾಟ್ಲೆಂಡಿನ ಉತ್ತರ ಸ್ಕೈಯೆಯಲ್ಲಿ ಕ್ಷೇತ್ರ ಸಮೀಕ್ಷೆ ಕೈಗೊಂಡಿದ್ದಿತು. ಅಲ್ಲಿರುವ ಶಿಲೆಗಳನ್ನು ಅಟ್ಲಾಂಟಿಕ್ ಗಡಿ ಪ್ರದೇಶದ ಭೂ ವಿಜ್ಞಾನ ಪರಿಸ್ಥಿತಿಯೊಂದಿಗೆ ಹೋಲಿಸುವುದು ಅವರ ಉದ್ದೇಶವಾಗಿದ್ದಿತು.

ತಮ್ಮ ಸಹೋದ್ಯೋಗಿಗಳು ಸಮುದ್ರ ತೀರದಲ್ಲಿ ಮರಳುಗಲ್ಲುಗಳ ದಿಬ್ಬಗಳಲ್ಲಿ



ಅನ್ವೇಷಣೆ ನಡೆಸುತ್ತಿದ್ದಾಗ ಸಮೀಪದ ಸಮುದ್ರ ತೀರದಲ್ಲಿ ತೀರಾ ಅಸ್ವಾಭಾವಿಕವೆಂದು ಕಂಡು ಬರುವ ಕಗ್ಗಿನ ಬಂಡೆಯೊಂದು ಡೋಗ್ ಬಾಯ್ಡ್‌ರ ಗಮನ ಸೆಳೆಯಿತು. ಒಂದು ಮೀಟರ್ ಉದ್ದದ ಈ ಕಗ್ಗಿನ ಶಿಲೆ ಯಾವುದೋ ಪ್ರಾಣಿಯ ಎಲುಬಿನ ಪಳೆಯುಳಿಕೆಯಾಗಿತ್ತು. ಆ ಕ್ಷಣದಲ್ಲಿ ಅವರಿಗೆ ಈ ಶೋಧದ ಸಂಪೂರ್ಣ ಮಹತ್ವ ಅರಿವಾಗಲಿಲ್ಲ.

ಅನಂತರ ಡೋಗ್ ಬಾಯ್ಡ್ ಮತ್ತವರ ಸಹೋದ್ಯೋಗಿಗಳು ಸ್ಕೈಯಲ್ಲಿರುವ ಸ್ಟಾಫಿನ್ ಮ್ಯೂಸಿಯಂನ ಕ್ಯೂರೇಟರ್ ಅವರನ್ನು ಸಂಪರ್ಕಿಸಿದರು. ಅವರು ಈ ಶಿಲೆಯ ಕೆಲವು ತುಣುಕುಗಳನ್ನು ಸಂಗ್ರಹಿಸಿ ಪರಿಶೀಲಿಸಿದರು. ಕಗ್ಗಿನ ಶಿಲೆಯ ಇನ್ನೂ ಕೆಲವು ತುಣುಕುಗಳನ್ನು ಗ್ಲಾಸ್‌ಗೊ ವಿಶ್ವವಿದ್ಯಾಲಯದ ಹಂಟೇರಿಯನ್ ಮ್ಯೂಸಿಯಂನ ಪಳೆಯುಳಿಕೆ ಶಾಸ್ತ್ರಜ್ಞ ನೀಲ್ ಕ್ಲಾರ್ಕ್ ಅವರು ಪರಿಶೀಲಿಸಿದರು. ಸುದೀರ್ಘ ವೈಜ್ಞಾನಿಕ ವಿಶ್ಲೇಷಣೆಯ ಬಳಿಕ ಜುರಾಸಿಕ್ ಯುಗದಲ್ಲಿ ಬದುಕಿದ್ದ ಡೈನೊಸಾರ್ ಕುಟುಂಬದ ಸೆಟಿಯೊಸಾರಸ್‌ನ ಎಲುಬಿನ ಒಂದು ಭಾಗವದು ಎಂಬುದು ದೃಢಪಟ್ಟಿತು. ಈ ಪ್ರಾಣಿ ೧೫ ರಿಂದು ೧೮ ಮೀಟರ್ ಉದ್ದವಿದ್ದಿರಬೇಕು ಎಂದು ವಿಜ್ಞಾನಿಗಳು ನಂಬಿದ್ದಾರೆ.

ಈ ಶೋಧ ನಡೆದು ಕೆಲವು ದಿನಗಳ ಬಳಿಕ ಈ "ಕಗ್ಗಿನ ಶಿಲೆ"ಯನ್ನೇ ಹೋಲುವ ಇನ್ನೊಂದು ಎಲುಬು ಸ್ಕೈಯ ತೀರ ಪ್ರದೇಶದಲ್ಲಿ ಅನತಿ ದೂರದಲ್ಲಿ ಪತ್ತೆಯಾಯಿತು. ಅದು-ಕೂಡಾ ಮೊದಲಿನ ಮೂಳೆಯ ಒಂದು ಭಾಗ ಎಂಬುದು ಖಚಿತವಾಯಿತು.

ಇತಿಹಾಸ ಪೂರ್ವಕಾಲದ ಪೆಡಂಭೂತಗಳು (ಡೈನೊಸಾರಸ್) ಮಿಲಿಯಗಟ್ಟಳೆ ವರ್ಷಗಳ ಹಿಂದೆ ಸ್ಕಾಟ್ಲೆಂಡಿನಲ್ಲಿ ಬದುಕಿದ್ದುವು ಎಂಬುದನ್ನು ಈ ಅಪೂರ್ವ ಶೋಧ ನಿಸ್ಸಂದೇಹವಾಗಿ ಸಾಬೀತು ಪಡಿಸುತ್ತದೆ ಎಂದು ಡೋಗ್ ಬಾಯ್ಡ್ ಅಭಿಪ್ರಾಯ ಪಡುತ್ತಾರೆ.

### ಅವಶೇಷಗಳು

ಜೀವ ಜಗತ್ತಿನ ಬಹುದೊಡ್ಡ ವಿಸ್ಮಯಗಳಲ್ಲಿ ಒಂದೆನಿಸಿರುವ ಈ

## ಕ್ಯಾನ್ಸರ್ ನಿರೋಧಕ ಫಂಗಸ್

**ಮ**ಲೇಶ್ಯಾದ ಸಮುದ್ರದಲ್ಲಿ ನೆಲಸಿರುವ ಕೆಲವು ಬಗೆಯ ಫಂಗಸ್ (ಶಿಲೀಂಧ್ರ)ಗಳಲ್ಲಿ ಕ್ಯಾನ್ಸರ್ ನಿರೋಧಕ ರಾಸಾಯನಿಕಗಳು ಒಳ ಗೊಂಡಿವೆ ಎಂದು ಬ್ರಿಟಿಷ್ ವಿಜ್ಞಾನಿಗಳು ಭಾವಿಸಿದ್ದಾರೆ.

ದಕ್ಷಿಣ ಇಂಗ್ಲೆಂಡಿನ ಪೋರ್ಟ್ಸ್‌ಮೌತ್ ವಿಶ್ವ ವಿದ್ಯಾಲಯದ ಸಂಶೋಧಕರ ತಂಡವೊಂದು ಮಲೇಶ್ಯಾದ ಸಮುದ್ರ ಪ್ರದೇಶದಲ್ಲಿ ಅನ್ವೇಷಣೆ ನಡೆಸಿದಾಗ ದೊರೆತ ಫಂಗಸ್‌ಗಳನ್ನು ಪ್ರಯೋಗಾಲಯದಲ್ಲಿ ಸೂಕ್ಷ್ಮವಾಗಿ ವಿಶ್ಲೇಷಿಸಿದರು. ಈ ವಿಶ್ಲೇಷಣೆ ಭರವಸೆ ಮೂಡಿಸುವ ಫಲಿತಾಂಶ ನೀಡಿದೆ. ಆದರೆ ಪರಿಶೀಲನೆಯ ಸಂಪೂರ್ಣ ವಿವರಗಳನ್ನು ಸದ್ಯ ಗೌಪ್ಯವಾಗಿಡಲಾಗಿದೆ. ಫಂಗಸ್‌ಗಳಲ್ಲಿರುವ ರಾಸಾಯನಿಕ ಮೂಲ ವಸ್ತು ರಕ್ತ ಕ್ಯಾನ್ಸರ್‌ಗೆ ಕಾರಣವಾಗುವ ಲೂಕೇಮಿಯಾ ಜೀವಕೋಶಗಳನ್ನು ಕೊಲ್ಲುವ ಸಾಮರ್ಥ್ಯ ಹೊಂದಿದೆ ಎಂದು ಪೋರ್ಟ್ಸ್‌ಮೌತ್ ವಿಶ್ವವಿದ್ಯಾಲಯದ ಜೀವವಿಜ್ಞಾನ ವಿಭಾಗದ ಪ್ರೊಫೆಸರ್ ಗಾರೆತ್ ಜೋನ್ಸ್ ಹೇಳುತ್ತಾರೆ.

ಕೀಟನಾಶಕಗಳು ಹಾಗೂ ಇತರ ಪ್ರಬಲ ಶಕ್ತಿ ಶಾಲಿ ಔಷಧಗಳನ್ನು ತಯಾರಿಸುವ ಉದ್ದೇಶದಿಂದ ಬ್ರಿಟಿಷ್ ವೈದ್ಯಕೀಯ ತಜ್ಞರು ಜಗತ್ತಿನಾದ್ಯಂತ ೧.೫ ಮಿಲಿಯ ತಳಿಗಳ ಫಂಗಸ್‌ಗಳನ್ನು ಸಂಗ್ರಹಿಸಿ ಅವುಗಳ ವೈಜ್ಞಾನಿಕ ವಿಶ್ಲೇಷಣೆಯಲ್ಲಿ ತೊಡಗಿದಾಗ ಮೇಲಿನ ಅಂಶ ಬೆಳಕಿಗೆ ಬಂದಿತು.

(ಕೃಪೆ: ಸ್ಪೆಕ್ಟ್ರಮ್)

ಡೈನೊಸಾರ್‌ಗಳ ವಂಶಾವಳಿ ಅತ್ಯಂತ ಕುತೂಹಲಕರ. ಅವುಗಳಲ್ಲಿ ಹಲವು ವಿಧಗಳಿವೆ. ಬ್ರಾಂಟೊಸಾರಸ್, ಟೈರನೊ ಸಾರಸ್, ಡಿಪ್ಲೊಡೋಕಸ್, ಅಲ್ಲೋಸಾರಸ್, ಸ್ಟಿಗೊಸಾರಸ್, ಟ್ರೆಸಿರಾಟಾಪ್ಸ್ ಇಗ್‌ವನೋಡಾನ್, ಡೈಮೊಟ್ರೊಡಾನ್, ಸ್ಟೆರೆಕೋಸಾರಸ್, ಪ್ಲಿಸಿಯೋಸಾರಸ್, ಟ್ರಾಕೋಡಾನ್, ಟರೋಡಾನ್ ಎಂದು ಪ್ರಮುಖ ಹನ್ನೆರಡು ವಿಧಗಳಿವೆ.

ಡೈನೊಸಾರ್‌ಗಳ ಅವಶೇಷಗಳು ಈ ವರೆಗೆ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಉತ್ತರ ಅಮೆರಿಕೆಯ ಮಾಂಟಾನಾದಲ್ಲಿ ದೊರಕಿದೆ. ಮಾಂಟಾನಾದ ಪರ್ವತ ಪ್ರದೇಶದಲ್ಲಿ ವಿವಿಧ ಸ್ಥಳಗಳಲ್ಲಿ ಮುನ್ನೂರು ಪೆಡಂಭೂತಗಳ ಅಸ್ತಿಪಂಜರಗಳನ್ನು ಅಗೆದು ತೆಗೆದು ವಿಜ್ಞಾನಿಗಳು ಪರಿಶೀಲಿಸಿದ್ದಾರೆ. ಭಾರತದಲ್ಲಿಯೂ ಪೆಡಂಭೂತಗಳ ಜೀವ್ಯವಶೇಷಗಳು ಪತ್ತೆಯಾಗಿವೆ. ಕೆಲವು ವರ್ಷಗಳ ಹಿಂದೆ ಭಾರತೀಯ ಭೂವಿಜ್ಞಾನ ಸರ್ವೇಕ್ಷಣಾ ಸಂಸ್ಥೆಯ ಭೂ ವಿಜ್ಞಾನಿಗಳು ಗುಜರಾತಿನ ಅಹಮದಾಬಾದಿನ ಸುತ್ತ ಮುತ್ತ ಪರಿಶೋಧನೆಗೆ ತೊಡಗಿದಾಗ ಅಹಮಬಾದಿನಿಂದ ನೂರು ಕಿ.ಮೀ ದೂರದಲ್ಲಿರುವ ಮನಸಿನೂರ್ ತಾಲೂಕಿನ ರಾಹಿಯೋಲಿ ಎಂಬ ಹಳ್ಳಿಯ ಬಳಿ ಏಳು ಕೋಟಿ ವರ್ಷಗಳ ಹಿಂದೆ ಇದ್ದ ಪೆಡಂಭೂತಗಳು ಮೊಟ್ಟೆ ಇಟ್ಟ ಜಾಗ ಕಂಡು ಬಂದಿತು. ಪೆಡಂಭೂತಗಳು ಸಾಲಾಗಿ ಮೊಟ್ಟೆ ಇಡುತ್ತಿದ್ದವು. ಮೊಟ್ಟೆ ಮಾತ್ರ ಕೋಟಿ ವರ್ಷಗಳ ತರುವಾಯ ಕಲ್ಲಾಗಿ ಪರಿಣಮಿಸಿತ್ತು. ಆಂಧ್ರ ಪ್ರದೇಶದ ಪುನ್‌ಹಿತ ಕಣಿವೆ (ಅದಿಲಾಬಾದ್ ಜಿಲ್ಲೆ)ಯಲ್ಲಿಯೂ ಪೆಡಂಭೂತಗಳ ಅಸ್ತಿಪಂಜರಗಳು ದೊರೆತಿವೆ. ಅದನ್ನು ಹೈದರಾಬಾದ್‌ನ ವಸ್ತು ಸಂಗ್ರಹಾಲಯದಲ್ಲಿರಿಸಲಾಗಿದೆ. ಮಧ್ಯ ಪ್ರದೇಶದ ಜಬ್ಬಲ್‌ಪುರದ ಬಳಿ ಪರೋರಾ ಪಟ್ಟಣಕ್ಕೆ ಸಮೀಪದಲ್ಲಿರುವ ಪಿಸ್‌ದರ ಎಂಬಲ್ಲಿಯೂ ಪೆಡಂಭೂತಗಳ ಅಸ್ತಿಪಂಜರ ಪತ್ತೆಯಾಗಿದೆ. ಈ ಅಸ್ಥಿಪಂಜರಗಳು ಮಡಗಾಸ್ಕರ್, ಬ್ರೆಜಿಲ್, ಪಟಗೋನಿಯಾಗಳಲ್ಲಿ ದೊರೆತಿರುವ ಪೆಡಂಭೂತಗಳ ಅಸ್ಥಿ ಪಂಜರಗಳೊಂದಿಗೆ ನಿಕಟ ಸಾಮ್ಯ ಹೊಂದಿವೆ.

ಪೆಡಂಭೂತಗಳು ಅಥವಾ ಡೈನೊಸಾರ್‌ಗಳು ನಮ್ಮ ಭೂಮಿಯ ಮೇಲೆ ೧೫೦ ದಶಲಕ್ಷ ವರ್ಷಗಳ ಕಾಲ ಬದುಕಿದ್ದುವೆಂದು ವಿಜ್ಞಾನಿಗಳು ಹೇಳುತ್ತಾರೆ. ಉತ್ತರ ಅಮೆರಿಕಾ, ಕೆನಡಾ ದೇಶಗಳ ಅರಣ್ಯ ಪ್ರದೇಶಗಳಲ್ಲಿ ಅವುಗಳು ಅಡ್ಡಾಡಿದ್ದವು ಎಂಬುದಕ್ಕೆ ಪುರಾವೆಗಳಿವೆ. ಪ್ರಾಕೃತಿಕ ವೈಪರೀತ್ಯಗಳ ಪರಿಣಾಮವಾಗಿ ಈ ಮಹಾ ಸರೀಸೃಪಗಳು ಅಸ್ತಿತ್ವದಿಂದ ಕಣ್ಮರೆಯಾಗಿರಬೇಕು ಎಂಬುದು ಒಂದು ವಾದ. ಆರೂವರೆ ಕೋಟಿ ವರ್ಷಗಳ ಹಿಂದೆ ಸಾಗರ ಉಕ್ಕಿ ಡೈನೊಸಾರ್‌ಗಳ ಸಾಮ್ರಾಜ್ಯಕ್ಕೆ ಲಗ್ಗೆ ಹಾಕಿರಬೇಕು ಎಂದು ಅದರ ಪರಿಣಾಮವಾಗಿ ಅವು ನಾಮಾವಶೇಷವಾಗಿರಬೇಕು. ವಿಜ್ಞಾನಿಗಳು ಭಾವಿಸಿದ್ದಾರೆ.

ಆರೂವರೆ ಕೋಟಿ ವರ್ಷಗಳ ಹಿಂದೆ ಮಾನವ ಜೀವಿ ಈ ಪೃಥ್ವಿಯ ಮೇಲೆ ಹುಟ್ಟಿರದ ಕಾಲದಲ್ಲಿ ಈ ಮಹಾ ಸರೀಸೃಪಗಳು ಅಸ್ತಿತ್ವದಿಂದ ಕಣ್ಮರೆಯಾಗಿರಬೇಕು. ಧೂಮಕೇತು ಅಪ್ಪಳಿಸುವಿಕೆ, ಜ್ವಾಲಾಮುಖಿ ಸ್ಫೋಟ ಮುಂತಾದ ಪ್ರಾಕೃತಿಕ ವೈಪರೀತ್ಯಗಳು ಪೆಡಂಭೂತಗಳನ್ನು ಬಲಿತೆಗೆದುಕೊಂಡಿರಬೇಕು ಎಂಬುದೂ ವಿಜ್ಞಾನಿಗಳ ಇನ್ನೊಂದು ಊಹೆ.

---

ಶ್ರಮದ ಮಹತ್ತನ್ನು ಏನೆಂದು ಕೊಂಡಾಡುವುದು! ಅದು ಶ್ರಮಿಕನಿಗೆ ಗೌರವವನ್ನು ಒದಗಿಸಿಕೊಡುತ್ತದೆ.

• ತಾಲ್ಮದ್

---



# ಆರೋಗ್ಯಕ್ಕಾಗಿ ಅಡಿಗೆ ಎಣ್ಣೆ

• ಡಾ. ಡಿ.ಕೆ. ಮಹಾಬಲರಾಜು

**ನಾ**ವು ಪ್ರತಿನಿತ್ಯ ಸೇವಿಸುವ ಆಹಾರ ಪದಾರ್ಥಗಳ ತಯಾರಿಕೆಗೆ ಒಂದಲ್ಲ ಒಂದು ರೀತಿಯ ಎಣ್ಣೆ ಅಥವಾ ತೈಲವನ್ನು ಉಪಯೋಗಿಸುತ್ತೇವೆ. ಪ್ರತಿನಿತ್ಯದ ಅಡಿಗೆಯಲ್ಲಿ ಸಸ್ಯಜನ್ಯ ಕೊಬ್ಬು (ಎಣ್ಣೆ) ಬಳಸುತ್ತೇವೆ. ವಿಶೇಷ ಸಂದರ್ಭಗಳಲ್ಲಿ ತಯಾರಿಸುವ ಖಾದ್ಯಗಳಿಗೆ ಪ್ರಾಣಿಜನ್ಯ ಕೊಬ್ಬು (ಬೆಣ್ಣೆ-ತುಪ್ಪ)ಗಳನ್ನು ಬಳಸುತ್ತೇವೆ. ಆಯಾ ಪ್ರದೇಶದಲ್ಲಿನ ರೂಢಿಯಂತೆ ಶೇಂಗಾ, ಕುಸುಬೆ, ಸಾಸಿವೆ, ಸೂರ್ಯಕಾಂತಿ, ಕೊಬ್ಬರಿ ಇತ್ಯಾದಿ ಎಣ್ಣೆಗಳನ್ನು ಬಳಸಲಾಗುತ್ತದೆ. ಇತ್ತೀಚೆಗೆ ಸೋಯಾ, ಮುಸುಕಿನ ಜೋಳದ ಎಣ್ಣೆಗಳೂ ಮಾರುಕಟ್ಟೆಯನ್ನು ಪ್ರವೇಶಿಸಿವೆ. ನಾಗರಿಕತೆ ಬೆಳೆದಂತೆ ಎಣ್ಣೆ ಅಥವಾ ಕೊಬ್ಬುಗಳ ಬಳಕೆಯೂ ಹೆಚ್ಚಾಗುತ್ತಿದೆ.

ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಸಂಭವಿಸುತ್ತಿರುವ ಹೃದಯಾಘಾತಗಳಿಗೆ, ನಾವು ಸೇವಿಸುತ್ತಿರುವ ಕೊಬ್ಬಿನ ಪದಾರ್ಥಗಳು ಮುಖ್ಯ ಕಾರಣವೆಂದು ವೈದ್ಯಕೀಯ ಸಂಶೋಧನೆಗಳು ತಿಳಿಸಿವೆ. ನಾವು ನಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಲು ಎಷ್ಟು ಎಣ್ಣೆಯನ್ನು ಉಪಯೋಗಿಸಬೇಕು? ಯಾವ ಎಣ್ಣೆ ಆರೋಗ್ಯಕ್ಕೆ ಒಳ್ಳೆಯದು? ಯಾವುದು ಕೆಟ್ಟದೆಂಬುದನ್ನು ಅರಿತುಕೊಂಡು ಅನುಸರಿಸಿ ಹೃದಯಾಘಾತಗಳಿಂದ ಮುಕ್ತರಾಗಿ ಆರೋಗ್ಯಕರ ಜೀವನವನ್ನು ನಡೆಸಬಹುದು.

## ನಮಗೆ ಕೊಬ್ಬಿನ ಅವಶ್ಯಕತೆ ಇದೆಯೆ?

ಹೌದು. ಸಮತೂಕ ಆಹಾರದಲ್ಲಿ ಜಿಡ್ಡು ಒಂದು ಅವಶ್ಯಕ ಪದಾರ್ಥ. ಕೊಬ್ಬಿನಿಂದ ನಮಗೆ ಅನೇಕ ಪ್ರಯೋಜನಗಳಿವೆ. ಅವುಗಳೆಂದರೆ:

೧. ಕೊಬ್ಬು ದೇಹಕ್ಕೆ ಅತ್ಯಧಿಕ ಶಕ್ತಿಯನ್ನೊದಗಿಸುತ್ತದೆ. ನಾವು ಸೇವಿಸುವ ಪ್ರತಿ ಗ್ರಾಮ್ ಕೊಬ್ಬು ೯ ಕಿಲೋ ಕ್ಯಾಲರಿಗಳಷ್ಟು ಶಕ್ತಿಯನ್ನು ಕೊಡುತ್ತದೆ. ಅದೇ ಪ್ರಮಾಣದ ಕಾರ್ಬೋಹೈಡ್ರೇಟ್ ಅಥವಾ ಪ್ರೋಟೀನ್ ಕೇವಲ ೪ ಕಿಲೋ ಕ್ಯಾಲರಿಗಳಷ್ಟು ಮಾತ್ರ ಶಕ್ತಿಯನ್ನೊದಗಿಸಬಲ್ಲದು.

೨. ಕೊಬ್ಬಿನಲ್ಲಿ ಮಾತ್ರ ಕರಗುವ 'ಎ', 'ಡಿ', 'ಇ' ಮತ್ತು 'ಕೆ' ಜೀವಸತ್ವಗಳು ದೇಹದ ಬಳಕೆಗೆ ಪೂರೈಕೆಯಾಗಲು ಕೊಬ್ಬು ಸಹಕಾರಿ. ಜೊತೆಗೆ

ಸಸ್ಯಜನ್ಯ ಎಣ್ಣೆಯಲ್ಲಿ 'ಇ' ಜೀವಸತ್ವ ಇದ್ದರೆ, ಪ್ರಾಣಿಜನ್ಯ ಕೊಬ್ಬಿನಲ್ಲಿ 'ಎ', 'ಡಿ' ಜೀವಸತ್ವಗಳಿವೆ.

೩. ಹೃದಯ, ಮೂತ್ರಪಿಂಡ ಮುಂತಾದ ಮುಖ್ಯ ಅವಯವಗಳ ಸುತ್ತ ಶೇಖರಗೊಂಡ ಕೊಬ್ಬು ಈ ಅಂಗಾಂಗಗಳನ್ನು ಹೊಡೆತ, ಕುಲುಕುವಿಕೆ ಮುಂತಾದ ಅಪಾಯಗಳಿಂದ ರಕ್ಷಿಸುತ್ತದೆ. ದೇಹದಲ್ಲಿ ಸಂಗ್ರಹವಾಗಿರುವ ಕೊಬ್ಬು, ನಾವು ಉಪವಾಸವಿರುವ ಸಮಯದಲ್ಲಿ ಕರಗಿ ದೇಹಕ್ಕೆ ಅಗತ್ಯವಾದ ಶಕ್ತಿಯನ್ನು ಒದಗಿಸುತ್ತದೆ.

೪. ಚರ್ಮದ ಆರೋಗ್ಯ ಮತ್ತು ಮೃದುತ್ವವನ್ನು ಕಾಪಾಡುವುದು ಕೊಬ್ಬು.

೫. ಚರ್ಮದಡಿಯಲ್ಲಿರುವ ಕೊಬ್ಬು ನಮ್ಮನ್ನು ಚಳಿಯಿಂದ ರಕ್ಷಿಸುತ್ತದೆ.

೬. ಕೊಬ್ಬು ಆಹಾರದ ರುಚಿಯನ್ನು ಹೆಚ್ಚಿಸುತ್ತದೆ. ಹಸಿವನ್ನು ಇಂಗಿಸುತ್ತದೆ. ಹೊಟ್ಟೆ ತುಂಬಿದ ತೃಪ್ತಿಯನ್ನು ನೀಡುತ್ತದೆ.

೭. ಮಲಬದ್ಧತೆಯನ್ನು ನಿವಾರಿಸುವಲ್ಲಿ ಕೊಬ್ಬಿನ ಪಾತ್ರವಿದೆ.

೮. ಇತ್ತೀಚಿನ ಸಂಶೋಧನೆಗಳು ತಿಳಿಸಿರುವಂತೆ ಕೊಬ್ಬಿನಲ್ಲಿರುವ ಆಮ್ಲಗಳು ದೇಹದ ಬೆಳವಣಿಗೆಗೆ ಅವಶ್ಯ. ಜೊತೆಗೆ ಇದು ದೇಹದ ಪ್ರತಿ ಜೀವಕಣಗಳ ಆಕಾರ, ಕಾರ್ಯ, ಗಾತ್ರಗಳಿಗೆ ನಿರ್ದೇಶನ ನೀಡುತ್ತದೆ.

೯. ಕೆಲ ಕೊಬ್ಬಿನಲ್ಲಿರುವ ಅವಶ್ಯ ಕೊಬ್ಬಿನ ಆಮ್ಲಗಳು ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣವನ್ನು ತಗ್ಗಿಸಿ ಹೃದಯಾಘಾತದ ಸಾಧ್ಯತೆಗಳನ್ನು ಕಡಿಮೆ ಮಾಡುತ್ತವೆ.

೧೦. ಕೊಬ್ಬಿನಲ್ಲಿನ ಬಹು ಅಸಂತೃಪ್ತ ಕೊಬ್ಬಿನ ಆಮ್ಲಗಳು ದೇಹದಲ್ಲಿ ಪ್ರೋಸ್ಟಾಗ್ಲಾಂಡಿನ್ ತಯಾರಾಗಲು ಅಗತ್ಯ. ಮಾಂಸಗಳ ಕುಗ್ಗುವಿಕೆ, ಹಿಗ್ಗುವಿಕೆ, ನೋವಿನ ಶಮನ, ಸಂತಾನಶಕ್ತಿ, ರಕ್ತಕಣಗಳ ಒಗ್ಗೂಡುವಿಕೆ, ಕರುಳಿನ ಚಲನೆ, ಜಠರದ ಆಮ್ಲ ಉತ್ಪತ್ತಿ, ಮೂತ್ರಪಿಂಡ, ಶ್ವಾಸಕೋಶ ಇವೆಲ್ಲವುಗಳ ಸಮರ್ಪಕ ಕಾರ್ಯಗಳಿಗೆ ಪ್ರೋಸ್ಟಾಗ್ಲಾಂಡಿನ್‌ಗಳು ಅತ್ಯಗತ್ಯ ಪದಾರ್ಥ.

## ಎಷ್ಟು ಅವಶ್ಯ?

ಇತ್ತೀಚಿಗೆ ಹೆಚ್ಚುತ್ತಿರುವ ಹೃದಯಾಘಾತಗಳ ಅಂಕಿ-ಅಂಶಗಳನ್ನು ಗಮನಿಸಿ, ವಿಶ್ವಸಂಸ್ಥೆಯ ಹೃದಯರೋಗ ನಿವಾರಣ ತಜ್ಞರು ಹೇಳುವಂತೆ ಆರೋಗ್ಯಕರ ಜೀವನಕ್ಕಾಗಿ ಪ್ರತಿಯೊಬ್ಬರಿಗೆ ದೇಹಕ್ಕೆ ಬೇಕಾದ ಶಕ್ತಿಯ ಶೇಕಡಾ ೨೦ರಷ್ಟು ಮಾತ್ರ ಕೊಬ್ಬಿನಿಂದ ದೊರೆಯತಕ್ಕದ್ದು ಎನ್ನುತ್ತಾರೆ. ಆರೋಗ್ಯವಂತ ವಯಸ್ಕರಿಗೆ ನಿತ್ಯ ೨೪೦೦ ಕಿಲೋ ಕ್ಯಾಲರಿ ಶಕ್ತಿ ಅಗತ್ಯ. ಇದರ ಶೇಕಡಾ ೨೦ ಅಂದರೆ ೪೮೦ ಕಿಲೋ ಕ್ಯಾಲರಿಗಳಷ್ಟು ಶಕ್ತಿ ಕೊಬ್ಬಿನಿಂದ ದೊರೆಯತಕ್ಕದ್ದು. ಪ್ರತಿ ಗ್ರಾಮ್ ಕೊಬ್ಬು ಒಂಬತ್ತು ಕಿಲೋ ಕ್ಯಾಲರಿ ಶಕ್ತಿಯನ್ನು ನೀಡುತ್ತದೆ. ನಮಗೆ ಕೊಬ್ಬಿನಿಂದ ಬೇಕಾದ ೪೮೦ ಕಿಲೋ ಕ್ಯಾಲರಿ ಶಕ್ತಿ ಪಡೆಯಲು ೫೪ ಗ್ರಾಮ್‌ಗಳಷ್ಟು ಮಾತ್ರ ಕೊಬ್ಬನ್ನು ಸೇವಿಸಬಹುದು. ಇದು ಆರೋಗ್ಯದಿಂದಿರಲು ಬೇಕಾದ ಗರಿಷ್ಠ ಪ್ರಮಾಣ. ಇದಕ್ಕಿಂತ ಹೆಚ್ಚಾಗಿ ಸೇವಿಸುವ ಕೊಬ್ಬು ಹಲವಾರು ಮಾರಕ ಕಾಯಿಲೆಗಳಿಗೆ ಕಾರಣವಾಗಬಹುದು. ಆರೋಗ್ಯದ ಬಗ್ಗೆ ಇನ್ನೂ ಹೆಚ್ಚು ಕಾಳಜಿ ವಹಿಸುವವರು ತಮ್ಮ ನಿತ್ಯ ಸೇವನೆಯ ಕೊಬ್ಬಿನ ಪ್ರಮಾಣವನ್ನು ಮೂವತ್ತು ಗ್ರಾಮ್‌ಗಳಿಗೆ ಮಿತಿಗೊಳಿಸುವುದು ಜಾಣತನ.

## ಅದೃಶ್ಯ ಕೊಬ್ಬು

ನಾವು ನಿತ್ಯ ಸೇವಿಸುವ ಆಹಾರಗಳಾದ ಅಕ್ಕಿ, ರಾಗಿ, ಜೋಳ, ಬೇಳೆಕಾಳು, ಸೊಪ್ಪು ತರಕಾರಿ, ಹಣ್ಣು, ಹಾಲು, ಮೊಟ್ಟೆ, ಮಸಾಲೆ ಪದಾರ್ಥವೆಲ್ಲವುಗಳಲ್ಲೂ ಕೊಬ್ಬು ಇದೆ. ಈ ಕೊಬ್ಬಿನ ಪ್ರಮಾಣ ಬಹಳ ಕಡಿಮೆ. ಉದಾಹರಣೆಗೆ ಧಾನ್ಯ, ಬೇಳೆಕಾಳುಗಳಲ್ಲಿ ಶೇಕಡಾ ೧-೩, ಸೊಪ್ಪು ತರಕಾರಿಯಲ್ಲಿ ಶೇಕಡಾ ೦.೧-೨, ಹಣ್ಣುಗಳಲ್ಲಿ ಶೇಕಡಾ ೧-೩, ಹಾಲಿನಲ್ಲಿ ಶೇಕಡಾ ೪, ಏಲಕ್ಕಿ ಜೀರಿಗೆ ಗಸಗಸೆಯಲ್ಲಿ ಶೇಕಡಾ ೧೫-೨೦ ಕೊಬ್ಬು ಇದೆ. ಈ ಕೊಬ್ಬು ನಮ್ಮ ಕಣ್ಣಿಗೆ ಕಾಣಿಸದೆ ಇರುವುದರಿಂದ ಇದನ್ನು ಅಗೋಚರ ಕೊಬ್ಬು ಎನ್ನಬಹುದು. ನಾವು ಪ್ರತಿನಿತ್ಯ ಈ ಎಲ್ಲ ಪದಾರ್ಥಗಳನ್ನು ಬಳಸುವುದರಿಂದ ಈ ಆಹಾರಗಳು ನಮ್ಮ ಅವಶ್ಯಕತೆಯ ಶೇಕಡಾ ೫೦ ಕೊಬ್ಬನ್ನು ಪೂರೈಸುತ್ತವೆ. ಆದುದರಿಂದ ನಮಗೆ ಉಳಿದ ಶೇಕಡಾ ೫೦ ಅವಶ್ಯಕತೆಯ ಕೊಬ್ಬನ್ನು ಮಾತ್ರ ಸೇವಿಸು

ವದು ಆರೋಗ್ಯಕರ. ಕಣ್ಣಿಗೆ ಕಾಣುವ ಕೊಬ್ಬಾದ- ಎಣ್ಣೆ ಬೆಣ್ಣೆ ವನಸ್ಪತಿ ತುಪ್ಪ ಇತ್ಯಾದಿಯನ್ನು ಪ್ರತಿನಿತ್ಯ ೧೫ ಗ್ರಾಮ್‌ಗಿಂತ ಹೆಚ್ಚಾಗಿ ಸೇವಿಸಬಾರದು.

## ಯಾವ ಎಣ್ಣೆ ಒಳ್ಳೆಯದು?

ಸಸ್ಯಜನ್ಯ ಕೊಬ್ಬುಗಳಲ್ಲಿ ಎಲ್ಲ ರೀತಿಯ ಅವಶ್ಯಕ ಕೊಬ್ಬಿನ ಆಮ್ಲಗಳಿವೆ. ಇವು ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣವನ್ನು ತಗ್ಗಿಸಿ ಹೃದಯಾಘಾತದ ಸಾಧ್ಯತೆಯನ್ನು ಕಡಿಮೆ ಮಾಡುತ್ತವೆ. ಆರೋಗ್ಯದ ದೃಷ್ಟಿಯಿಂದ ಎಲ್ಲ ಅವಶ್ಯ ಕೊಬ್ಬಿನ ಆಮ್ಲವುಳ್ಳ ಸಸ್ಯಜನ್ಯ ಕೊಬ್ಬುಗಳು ಶ್ರೇಷ್ಠ. ಇದಕ್ಕೆ ಅಪವಾದವಾಗಿ ಕೊಬ್ಬರಿ ಎಣ್ಣೆಯಲ್ಲಿ ಅತಿ ಕಡಿಮೆ ಕೊಬ್ಬಿನ ಆಮ್ಲವಿದ್ದು, ಇದು ಹೃದಯಕ್ಕೆ ಅಪಾಯಕಾರಿಯಾಗಿದೆ. ಸಸ್ಯಜನ್ಯ ಕೊಬ್ಬಿನಲ್ಲಿ ಅತಿ ಹೆಚ್ಚು ಅವಶ್ಯ ಕೊಬ್ಬಿನ ಆಮ್ಲವನ್ನೊಳಗೊಂಡ ಕೊಬ್ಬನ್ನು ಅಡಿಗೆಗೆ ಆಯ್ಕೆಮಾಡಿಕೊಳ್ಳುವುದು ಜಾಣತನ. ಈ ದೃಷ್ಟಿಯಿಂದ ನೋಡಿದಾಗ (ಪಟ್ಟಿ ೧) ಕುಸುಬೆ, ಮೆಕ್ಕೆಜೋಳ, ಸೂರ್ಯಕಾಂತಿ ಎಣ್ಣೆಗಳು ಹೆಚ್ಚು ಆರೋಗ್ಯಕರ.

ಪ್ರಾಣಿಜನ್ಯ ಕೊಬ್ಬು (ಬೆಣ್ಣೆ, ತುಪ್ಪ, ಪ್ರಾಣಿಗಳ ಕೊಬ್ಬು)ಗಳಲ್ಲಿರುವ ಅವಶ್ಯ ಕೊಬ್ಬಿನ ಆಮ್ಲಗಳ ಪ್ರಮಾಣ ತುಂಬ ಕಡಿಮೆಯಾಗಿದ್ದು ಆರೋಗ್ಯಕ್ಕೆ ಹಾನಿಕರವಾಗಿದೆ. ಇದಕ್ಕೆ 'ಅಪವಾದ' ವಾದದ್ದು ಮೀನುಎಣ್ಣೆ. ಮೀನುಗಳಲ್ಲಿ ಒಮೇಗಾ-೩ ಎಂಬ ಕೊಬ್ಬಿನ ಆಮ್ಲವಿದ್ದು, ಇದು ಹೃದಯಕ್ಕೆ ಗುರಾಣಿಯಾಗಬಲ್ಲದು. ಹೃದಯರೋಗದಿಂದ ರಕ್ಷಣೆ ಪಡೆಯಲು ಪ್ರತಿ ನಿತ್ಯದ ಆಹಾರದಲ್ಲಿ ಸಮುದ್ರದ ಮೀನಿನ ಬಳಕೆ ಮಾಡುವುದು ಅಗತ್ಯ.

ಪಟ್ಟಿ ೧

ಅವಶ್ಯ ಕೊಬ್ಬಿನ ಆಮ್ಲಗಳು

| ಕೊಬ್ಬು | ಅಮೈನೋ ಆಮ್ಲದ ಪ್ರಮಾಣ | |
|---|---|---|
| ಕುಸುಬೆ ಎಣ್ಣೆ | ಶೇಕಡಾ | ೭೩ |
| ಮೆಕ್ಕೆ ಜೋಳದ ಎಣ್ಣೆ | ,, | ೫೭ |
| ಸೂರ್ಯಕಾಂತಿ ಎಣ್ಣೆ | ,, | ೫೬ |
| ಸೋಯಾ ಎಣ್ಣೆ | ,, | ೫೧ |
| ಎಳ್ಳೆಣ್ಣೆ | ,, | ೪೦ |
| ಶೇಂಗಾ ಎಣ್ಣೆ | ,, | ೩೯ |
| ಕೊಬ್ಬರಿ ಎಣ್ಣೆ | ,, | ೨ |
| ಪಾಮ್ ಎಣ್ಣೆ | ,, | ೯ |
| ಬೆಣ್ಣೆ | ,, | ೦ |
| ವನಸ್ಪತಿ ತುಪ್ಪ | ,, | ೬ |

ನಮ್ಮ ದೇಹಕ್ಕೆ ಕೊಬ್ಬಿನಿಂದೊದಗುವ ಶಕ್ತಿಯ ಮೂರು ಶೇಕಡಾ ಶಕ್ತಿಯಾದರೂ ಅವಶ್ಯ ಕೊಬ್ಬಿನ ಆಮ್ಲಗಳಿಂದ ದೊರೆಯುವುದು ಹೃದಯಕ್ಕೆ ಕ್ಷೇಮ. ಆದುದರಿಂದ ಅವಶ್ಯ ಕೊಬ್ಬಿನ ಆಮ್ಲಗಳು ಇರುವ ಸಸ್ಯಜನ್ಯ ಕೊಬ್ಬು ಪ್ರಾಣಿಜನ್ಯ ಕೊಬ್ಬಿಗಿಂತ ಶ್ರೇಷ್ಠ.

## ವನಸ್ಪತಿ ತುಪ್ಪ

ಸಸ್ಯಜನ್ಯ ಎಣ್ಣೆಗಳನ್ನು ಶುದ್ಧೀಕರಿಸಿ ಅದಕ್ಕೆ ಒಂದು ಪ್ರಮಾಣದ ಒತ್ತಡ ಮತ್ತು ಉಷ್ಣತೆಯಲ್ಲಿ ಜಲಜನಕವನ್ನು ಹಾಯಿಸಿದಾಗ (ನಿಕ್ಕಲ್ ವೇಗವರ್ಧಕ) ದ್ರವರೂಪದ ಎಣ್ಣೆ ಘನ (ಅರೆಘನ) ರೂಪದ ವನಸ್ಪತಿಯಾಗುತ್ತದೆ. ಇದರ ರುಚಿ, ವಾಸನೆ, ಬಹುಕಾಲ ಕೆಡದ ಗುಣಗಳು ಹಲವರನ್ನು ಬಹಳವಾಗಿ ಆಕರ್ಷಿಸಿವೆ. ಎಣ್ಣೆಯಲ್ಲಿನ ಅವಶ್ಯ ಕೊಬ್ಬಿನ ಆಮ್ಲಗಳಾವೂ ವನಸ್ಪತಿ ತುಪ್ಪದಲ್ಲಿ ಉಳಿದಿರುವುದಿಲ್ಲ. ಅಷ್ಟೇ ಅಲ್ಲ, ಎಣ್ಣೆಯಲ್ಲಿನ ಅಸಂತೃಪ್ತ ಆಮ್ಲಗಳೆಲ್ಲ ವನಸ್ಪತಿ ತುಪ್ಪದಲ್ಲಿ ಹಾನಿಕಾರಕ ಸಂತೃಪ್ತ ಆಮ್ಲಗಳಾಗಿ ಮಾರ್ಪಟ್ಟಿರುತ್ತವೆ. ಇದು ಪ್ರಾಣಿಜನ್ಯ ಕೊಬ್ಬಿನಂತೆ ವರ್ತಿಸುತ್ತದೆ. ವನಸ್ಪತಿ ತುಪ್ಪದಲ್ಲಿ ಯಾವುದೇ ಜೀವಸತ್ವಗಳೂ ಉಳಿದಿರುವುದಿಲ್ಲ. ನಿಕ್ಕಲ್ ಅಂಶವೂ ಇದೆ. ಈ ನಿಕ್ಕಲ್ ಪ್ರಮಾಣ ದೇಹಕ್ಕೆ ಹಾನಿಕಾರಕವೆ ಎಂಬುದನ್ನಿನ್ನೂ ತಿಳಿಯಬೇಕಾಗಿದೆ.

## ರಿಫೈನ್ಡ್ ಎಣ್ಣೆ

ಎಣ್ಣೆಯಲ್ಲಿನ ವಾಸನೆ, ಬಣ್ಣಗಳನ್ನು ಉಗಿಯ ಸಹಾಯದಿಂದ ತೆಗೆದಾಗ ಉತ್ತಮ ಗುಣಮಟ್ಟದ ರಿಫೈನ್ಡ್ ಎಣ್ಣೆ ಸಿಗುತ್ತದೆ. ಇದರಲ್ಲಿ ಎಣ್ಣೆಯಲ್ಲಿನ ಎಲ್ಲ ಉತ್ತಮ ಅಂಶಗಳೂ ಹಾಗೆಯೇ ರಕ್ಷಿಸಲ್ಪಟ್ಟಿರುತ್ತವೆ.

## ಅಸಂತೃಪ್ತ ಮತ್ತು ಸಂತೃಪ್ತ ಕೊಬ್ಬು

ಸಂತೃಪ್ತ ಕೊಬ್ಬಿನ ಆಮ್ಲ: ಸಾಧಾರಣ ೨೦

ಡಿಗ್ರಿ ಸೆಂಟಿಗ್ರೇಡ್ ಉಷ್ಣತೆಯಲ್ಲಿ ಘನರೂಪತಾಳುವ ಬೆಣ್ಣೆ, ತುಪ್ಪ, ವನಸ್ಪತಿ, ಕೊಬ್ಬರಿ ಎಣ್ಣೆ ಪ್ರಾಣಿದೇಹದ ಕೊಬ್ಬು ಇವುಗಳಲ್ಲಿ ಸಂತೃಪ್ತ ಕೊಬ್ಬಿನ ಆಮ್ಲವಿದ್ದು, ಇದು ರಕ್ತದಲ್ಲಿನ ಕೊಲೆಸ್ಟರಾಲ್ ಅನ್ನು ಹೆಚ್ಚಿಸಿ, ಹೃದಯಾಘಾತಕ್ಕೆ ಆಹ್ವಾನವನ್ನು ನೀಡುತ್ತದೆ.

ಅಸಂತೃಪ್ತ ಕೊಬ್ಬು: ಇವು ಸಹಜ ಉಷ್ಣತೆಯಲ್ಲಿ ದ್ರವರೂಪಿಯಾಗಿರುತ್ತವೆ. ಸಸ್ಯಜನ್ಯ ಎಣ್ಣೆ (ಕೊಬ್ಬರಿ ಎಣ್ಣೆಯನ್ನು ಬಿಟ್ಟು)ಗಳೆಲ್ಲ ಈ ಗುಂಪಿಗೆ ಸೇರಿವೆ. ಇವು ಹೃದಯಕ್ಕೆ ರಕ್ಷಣೆ ನೀಡುತ್ತವೆ. ರಕ್ತದ ಕೊಲೆಸ್ಟರಾಲ್ ಪ್ರಮಾಣವನ್ನೂ ನಿಯಂತ್ರಣದಲ್ಲಿಡುತ್ತವೆ.

### ಪಿ.ಯು.ಎಫ್.ಎ. ಎಂದರೇನು?

ಅಸಂತೃಪ್ತ ಕೊಬ್ಬಿನಲ್ಲಿ ಎರಡು ವಿಧ:

೧. ಮಾನೋ ಅಸಂತೃಪ್ತ ಕೊಬ್ಬು.

೨. ಪಾಲಿ ಅಸಂತೃಪ್ತ ಕೊಬ್ಬು.

ಪಾಲಿ ಅಸಂತೃಪ್ತ ಕೊಬ್ಬನ್ನೇ P.U.F.A.(Poly Unsaturated Fatty Acid) ಎನ್ನುತ್ತಾರೆ. ಇದೇ ರಕ್ತದಲ್ಲಿನ ಕೊಲೆಸ್ಟರಾಲ್ ಅನ್ನು ಹತೋಟಿಯಲ್ಲಿಟ್ಟು ಹೃದಯಾಘಾತವಾಗದಂತೆ ನೋಡಿಕೊಳ್ಳುವಲ್ಲಿ ಅತ್ಯಂತ ಮುಖ್ಯಪಾತ್ರವನ್ನು ವಹಿಸುತ್ತದೆ. ಆದುದರಿಂದ ಇದು ಹೆಚ್ಚಾಗಿರುವ ತೈಲದ ಆಯ್ಕೆ ಮಾಡಿಕೊಂಡು ಹೃದಯ ಮತ್ತು ರಕ್ತನಾಳಗಳ ಕಾಯಿಲೆಯಿಂದ ಮುಕ್ತರಾಗಬಹುದು.

ಪಟ್ಟಿ ೨

ತೈಲಗಳಲ್ಲಿರುವ ಪಿ.ಯು.ಎಫ್.ಎ.ಪ್ರಮಾಣ

| | | |
|---|---|---|
| ಕುಸುಬೆ ಎಣ್ಣೆ | ಶೇಕಡಾ | ೭೫ |
| ಸೂರ್ಯಕಾಂತಿ ಎಣ್ಣೆ | ,, | ೬೫ |
| ಮೆಕ್ಕೆಜೋಳದ ಎಣ್ಣೆ | ,, | ೬೫ |
| ಸೋಯಾ ಎಣ್ಣೆ | ,, | ೬೨ |
| ಹತ್ತಿಬೀಜದ ಎಣ್ಣೆ | ,, | ೫೦ |
| ಶೇಂಗಾಎಣ್ಣೆ | ,, | ೩೧ |
| ಪಾಮ್ ಎಣ್ಣೆ | ,, | ೧೦ |
| ಬೆಣ್ಣೆ ತುಪ್ಪ | ,, | ೩ |
| ಕೊಬ್ಬರಿ ಎಣ್ಣೆ | ,, | ೨ |

## ಕೊಬ್ಬು ಮತ್ತು ಕಾಯಿಲೆಗಳು

೧. ಬೊಜ್ಜು: ದೇಹದ ಅವಶ್ಯಕತೆಯನ್ನು ಮೀರಿ ಹೆಚ್ಚು ಕೊಬ್ಬನ್ನು ಸೇವಿಸಿದರೆ ಅದು ದೇಹದಲ್ಲಿ ಮುಖ್ಯವಾಗಿ ಹೊಟ್ಟೆ, ತೊಡೆಗಳಲ್ಲಿ ಶೇಖರವಾಗಿ ಬೊಜ್ಜಿಗೆ ಕಾರಣವಾಗುತ್ತದೆ. ಬೊಜ್ಜಿನವರಿಗೆ ರಕ್ತದೊತ್ತಡ, ಹೃದಯಾಘಾತ, ಸಕ್ಕರೆ ಕಾಯಿಲೆ, ಪಾರ್ಶ್ವವಾಯು ಮುಂತಾದ ಕಾಯಿಲೆಗಳು ಅತಿಥಿಗಳಾಗುತ್ತವೆ. ಆತಿಥೇಯನ ಆಯುಷ್ಯವನ್ನು ಕಡಿಮೆ ಮಾಡುತ್ತವೆ. ಬಂಜೆತನ, ಕ್ಯಾನ್ಸರ್, ಕೀಲುನೋವು ಇವಕ್ಕೂ ಬೊಜ್ಜು ಕಾರಣವಾಗಬಲ್ಲದು.

೨. ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಾಗುವುದು ಮತ್ತು ಹೃದಯಾಘಾತ: ನಾವು ಅವಶ್ಯಕತೆಗಿಂತ ಹೆಚ್ಚಾಗಿ ಕೊಬ್ಬನ್ನು, ಅದರಲ್ಲೂ ಅವಶ್ಯ ಕೊಬ್ಬಿನ ಆಮ್ಲಗಳಿಲ್ಲದ ಕೊಬ್ಬನ್ನು (ಬೆಣ್ಣೆ ತುಪ್ಪ, ವನಸ್ಪತಿ ತುಪ್ಪ, ಕೊಬ್ಬರಿ ಎಣ್ಣೆ, ಪ್ರಾಣಿ ಕೊಬ್ಬು) ಸೇವಿಸಿದರೆ ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣ ಹೆಚ್ಚಿ ಹೃದಯಾಘಾತದ ಸಾಧ್ಯತೆ ಅಧಿಕವಾಗುತ್ತದೆ.

೩. ಕೊಬ್ಬಿನ ಹೆಚ್ಚು ಸೇವನೆಯಿಂದ ಕರುಳಿನ ಮತ್ತು ಸ್ತನದ ಕ್ಯಾನ್ಸರ್ ಬರಬಹುದು.

೪. ಅವಶ್ಯ ಕೊಬ್ಬಿನ ಆಮ್ಲಗಳ ಕೊರತೆಯಾದಲ್ಲಿ ಚರ್ಮದಲ್ಲಿ (ಮೊಣಕೈ, ಕಾಲು ಮುಂತಾದ ಭಾಗಗಳಲ್ಲಿ) ಒರಟಾದ ಗುಳ್ಳೆಗಳು ಏಳುತ್ತವೆ. ಇದು ಚರ್ಮಕ್ಕೆ ಸಂಬಂಧವಾದ ಕಾಯಿಲೆ (Phrenoderma).

### ಕೊಲೆಸ್ಟರಾಲ್ ಎಂದರೇನು?

ಕೊಲೆಸ್ಟರಾಲ್ ದೇಹಕ್ಕೆ ಉಪಯುಕ್ತವಾದ ಪದಾರ್ಥ. ನಮ್ಮ ದೇಹದ ಎಲ್ಲ ಜೀವಕಣಗಳ ಆರೋಗ್ಯ ಮತ್ತು ಚಟುವಟಿಕೆಗಳಿಗೆ, ದೇಹದಲ್ಲಿ ನಡೆಯುವ ಅನೇಕ ಭೌತಿಕ ಮತ್ತು ರಾಸಾಯನಿಕ ಕ್ರಿಯೆಗಳಿಗೆ ಕೊಲೆಸ್ಟರಾಲ್ ಅಗತ್ಯ. ದೇಹದಲ್ಲಿ ಅನೇಕ ಎಂಜೈಮ್, ಹಾರ್ಮೋನ್, ಮುಖ್ಯವಾಗಿ ಲೈಂಗಿಕ ಹಾರ್ಮೋನ್ ತಯಾರಾಗಲು ಕೂಡ ಕೊಲೆಸ್ಟರಾಲ್ ಬೇಕು. ಮಿದುಳು, ಮಿದುಳುಬಳ್ಳಿ ಹಾಗೂ ನರಮಂಡಲದ ಸಮರ್ಪಕ ಕಾರ್ಯಗಳಿಗೂ ನರಮಂಡಲದಲ್ಲಿ ಹರಿವ ತರಂಗಗಳಿಗೆ

ಕೊಲೆಸ್ಟರಾಲ್ ಬೇಕು. ನರವ್ಯೂಹದ ವಿಷಯಗ್ರಹಣ ಕೆಲಸಕ್ಕೂ ಕೊಲೆಸ್ಟರಾಲ್ ಅಗತ್ಯ.

ನಮ್ಮ ದೇಹಕ್ಕೆ ಬೇಕಾದ ಕೊಲೆಸ್ಟರಾಲ್ ನಾವು ಸೇವಿಸುವ ಸಾಮಾನ್ಯ ಆಹಾರದಿಂದಲೇ ಒದಗುತ್ತದೆ. ನಾವು ಸೇವಿಸುವ ಕೊಬ್ಬಿನ ಕೆಲಭಾಗ ಕೊಲೆಸ್ಟರಾಲ್ ಆಗಿ ಪರಿವರ್ತನೆ ಹೊಂದುತ್ತದೆ. ಮಾಂಸಾಹಾರಗಳಲ್ಲಿ ಅಧಿಕ ಕೊಲೆಸ್ಟರಾಲ್ ಇದೆ ನಮ್ಮ ದೇಶದ ಜನತೆಗೆ ಅತ್ಯಧಿಕ ಕೊಲೆಸ್ಟರಾಲ್ ಕೊಡುವ ಆಹಾರ ಮೊಟ್ಟೆ.

ಪಟ್ಟಿ ೩

ಆಹಾರ ಪದಾರ್ಥಗಳಲ್ಲಿ

ಕೊಲೆಸ್ಟರಾಲ್ ಪ್ರಮಾಣ

| ಆಹಾರ | | ಕೊಲೆಸ್ಟರಾಲ್ |
|---|---|---|
| ೧೦೦ಗ್ರಾಂ | | ಮಿ.ಗ್ರಾಂ |
| ಯಕೃತ್ತು | ,, | ೪೪೦ |
| ಮೂತ್ರಪಿಂಡ | ,, | ೮೦೦ |
| ಮಿದುಳು | ,, | ೨೦೦೦ |
| ಮೊಟ್ಟೆ | ,, | ೫೦೦ |
| ಹಾಲು | ,, | ೧೪ |
| ಮಾಂಸ | ,, | ೨೫೦ |
| ಮೀನು | ,, | ೫೦೦ |

ಆರೋಗ್ಯವಂತರಾಗಿರಲು ೧೦೦ ಮಿ.ಲೀ. ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣ ೨೦೦ ಮಿಲಿಗ್ರಾಂಗಳಿಗಿಂತ ಅಧಿಕವಾಗಿರಬಾರದು. ರಕ್ತದಲ್ಲಿ ಕೊಲೆಸ್ಟರಾಲ್‌ನ ಪ್ರಮಾಣ ೨೪೦ ಮಿಲಿಗ್ರಾಂಗಳಿಗಿಂತ ಅಧಿಕವಾದಂತೆ ಹೃದಯಾಘಾತದ ಸಾಧ್ಯತೆಗಳು ಹೆಚ್ಚಾಗುತ್ತವೆ. ಹೃದಯಾಘಾತದ ಪ್ರಮಾಣ ಕಡಿಮೆ ಇರುವ ಜಪಾನಿಯರಲ್ಲಿ ಕೊಲೆಸ್ಟರಾಲ್ ಪ್ರಮಾಣ ೧೫೦ ಮಿಲಿಗ್ರಾಂಗಳಿಗಿಂತ ಕಡಿಮೆ ಇದ್ದರೆ, ಹೃದಯಾಘಾತ ಹೆಚ್ಚಾಗಿ ಕಂಡುಬರುವ ಅಮೆರಿಕನ್ನರಲ್ಲಿ ಇದು ೩೦೦ ಮಿಲಿಗ್ರಾಂಗಳಿಗಿಂತ ಅಧಿಕವಾಗಿರುತ್ತದೆ.



ರಕ್ತದಲ್ಲಿ ಅಧಿಕವಾದ ಕೊಲೆಸ್ಟರಾಲ್ ಎಚ್.ಡಿ.ಎಲ್. ಜೊತೆ ಸಂಯೋಜನೆ ಹೊಂದಿ ಪಿತ್ತಜನಕಾಂಗಕ್ಕೆ ಸಾಗಿ ಅಲ್ಲಿಂದ ದೇಹದ ಹೊರಗೆ ವಿಸರ್ಜಿತವಾಗುತ್ತದೆ. ಆದುದರಿಂದ ರಕ್ತದಲ್ಲಿನ ಕೊಲೆಸ್ಟರಾಲ್ ಅನ್ನು ಹತೋಟಿ ಇಡುವಲ್ಲಿ ಎಚ್.ಡಿ.ಎಲ್. ಪಾತ್ರ ಅತಿ ಮುಖ್ಯ.

## ಒಳ್ಳೆಯ ಮತ್ತು ಕೆಟ್ಟ ಕೊಲೆಸ್ಟರಾಲ್

ಕೊಲೆಸ್ಟರಾಲ್ ರಕ್ತದಲ್ಲಿ ಲೈಪೋಪ್ರೋಟಿನ್ (Lipoprotein)ಗಳೊಡನೆ ಸಂಯೋಜನೆ ಹೊಂದಿರುತ್ತದೆ. ಅಲ್ಪಸಾಂದ್ರತೆಯ ಲೈಪೋಪ್ರೋಟೀನ್‌ನೊಡನೆ ಸಂಯೋಜನೆ ಹೊಂದಿದ ಕೊಲೆಸ್ಟರಾಲ್‌ಗೆ ಎಲ್.ಡಿ.ಎಲ್. ಎನ್ನುತ್ತಾರೆ. ಅಧಿಕ ಸಾಂದ್ರತೆಯ ಲೈಪೋಪ್ರೋಟಿನ್‌ನೊಡನೆ ಬೆಸಗೊಂಡದ್ದು ಎಚ್.ಡಿ.ಎಲ್. ಅತ್ಯಧಿಕ ಸಾಂದ್ರತೆಯ ಲೈಪೋಪ್ರೋಟನ್ ಸಂಗಡ ಸೇರಿರುವುದು ವಿ.ಎಚ್.ಡಿ.ಎಲ್. ಇವುಗಳಲ್ಲಿ ಎಲ್.ಡಿ.ಎಲ್. ಅಪಾಯಕಾರಿ. ಇದು ಹೃದಯಾಘಾತಕ್ಕೆ ಕಾರಣ. ಸಂತೃಪ್ತ ಕೊಬ್ಬುಗಳಾದ ವನಸ್ಪತಿ ತುಪ್ಪ, ತುಪ್ಪ, ಬೆಣ್ಣೆ, ಕೊಬ್ಬರಿ ಎಣ್ಣೆ ಪ್ರಾಣಿ ಕೊಬ್ಬು ಇವುಗಳು ಎಲ್.ಡಿ.ಎಲ್.ಗಳ ಪ್ರಮಾಣವನ್ನು ಏರಿಸುತ್ತವೆ. ಇದಕ್ಕೆ ವಿರುದ್ಧವಾಗಿ ಅಸಂತೃಪ್ತ ಕೊಬ್ಬುಗಳಾದ ಸಸ್ಯಜನ್ಯ ಕೊಬ್ಬುಗಳು ಹೃದಯಾಘಾತದ ವಿರುದ್ಧ ರಕ್ಷಣೆ ನೀಡುವ ಎಚ್.ಡಿ.ಎಲ್. ಪ್ರಮಾಣವನ್ನು ಏರಿಸುತ್ತದೆ. ಹೀಗೆ ಮಾಡುವಲ್ಲಿ ಮುಖ್ಯ ಪಾತ್ರ ವಹಿಸುವುದು ಸಸ್ಯಜನ್ಯ ಕೊಬ್ಬಿನಲ್ಲಿರುವ ಪಿ.ಯು.ಎಫ್.ಎ. ಅದಕ್ಕೋಸ್ಕರ ಪಿ.ಯು.ಎಫ್.ಎ. ಅಧಿಕವಾಗಿರುವ ಕೊಬ್ಬು ಹೃದಯವನ್ನು ರಕ್ಷಿಸಬಲ್ಲದು. ರಕ್ತದಲ್ಲಿ ಎಲ್.ಡಿ.ಎಲ್. ೧೩೦ ಮಿಲಿಗ್ರಾಂ, ಎಚ್.ಡಿ.ಎಲ್. ೩೫ ಮಿಲಿಗ್ರಾಂ ಮೀರಬಾರದು.

ಕೊಲೆಸ್ಟರಾಲ್ ಪ್ರಮಾಣ ಮುಖ್ಯವಾಗಿ ಎಲ್.ಡಿ.ಎಲ್. ರಕ್ತದಲ್ಲಿ ಅಧಿಕವಾದರೆ, ಅದು ರಕ್ತನಾಳಗಳ ಒಳಪದರಿನಲ್ಲಿ ಕಲೆಯುತ್ತ ಹೋಗಿ ರಕ್ತಸಂಚಾರಕ್ಕೆ ಅಡ್ಡಿಯನ್ನುಂಟುಮಾಡುತ್ತದೆ. ಹೃದಯಕ್ಕೆ ರಕ್ತ ಒದಗಿಸುವ ರಕ್ತನಾಳಗಳಲ್ಲಿ ಹೀಗಾದರೆ ಹೃದಯಾಘಾತ ಉಂಟಾಗುತ್ತದೆ. ಅಧಿಕವಾದ ಕೊಲೆಸ್ಟರಾಲ್ ಪಿತ್ತಜನಕಾಂಗದಲ್ಲಿ ಹರಳಾಗಿ (ಕಲ್ಲಾಗಿ) ಕೂರಬಹುದು.

ಹೃದಯದ ಆರೋಗ್ಯವನ್ನು ಕಾಪಾಡಿಕೊಳ್ಳಲು ನಾವು ಪಾಲಿಸಬೇಕಾದ ಮುಖ್ಯ ಅಂಶಗಳೆಂದರೆ:

೧. ಮಿತವಾಗಿ ಕೊಬ್ಬನ್ನು ಬಳಸಬೇಕು.

೨. ಕೊಲೆಸ್ಟರಾಲ್ ಅಧಿಕವಾದ ಪದಾರ್ಥಗಳ ಸೇವನೆ ನಿಲ್ಲಿಸಬೇಕು.

೩. ಎಲ್.ಡಿ.ಎಲ್. ಹೆಚ್ಚಿಸುವ ಕೊಬ್ಬು (ಪ್ರಾಣಿಜನ್ಯ ಮತ್ತು ಕೊಬ್ಬರಿ ಎಣ್ಣೆ)ಗಳನ್ನು ಕಡಿಮೆ ಮಾಡಿ ಎಚ್.ಡಿ.ಎಲ್. ಪ್ರಮಾಣವನ್ನು ಹೆಚ್ಚಿಸುವ ಸಸ್ಯಜನ್ಯ ಕೊಬ್ಬು ಉಪಯೋಗಿಸಬೇಕು (ಮಿತವಾಗಿ).

೪. ಪಿ.ಯು.ಎಫ್.ಎ. ಹೆಚ್ಚಾಗಿರುವ ತೈಲವನ್ನು ಆಯ್ದುಕೊಳ್ಳಬೇಕು.

ಕಡಲ ಮೀನಿನಲ್ಲಿರುವ ಪಿ.ಯು.ಎಫ್.ಎ.-೩ ರಕ್ತದಲ್ಲಿನ ಕೆಟ್ಟ ಕೊಲೆಸ್ಟರಾಲ್ ಪ್ರಮಾಣವನ್ನು ತಗ್ಗಿಸುತ್ತದೆ. ಅಧಿಕ ಮೀನು ತಿನ್ನುವ ಎಸ್ಕಿಮೋ ಜನರಲ್ಲಿ ಹೃದಯಾಘಾತ ಕಡಿಮೆ. ಬೆಳ್ಳುಳ್ಳಿ, ಈರುಳ್ಳಿ, ಧಾನ್ಯಗಳ ಹೊಟ್ಟು, ನಾರಿನಂಶ, ಬಾರ್ಲಿ, ಕ್ಯಾರೆಟ್, ಮೂಲಂಗಿ, ಸೇಬು, ಕಡಲೆಬೇಳೆ, ಹೆಸರುಬೇಳೆ ಇವು ರಕ್ತದಲ್ಲಿನ ಕೊಲೆಸ್ಟರಾಲ್ ಅನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಬಲ್ಲವೆಂದು ಇತ್ತೀಚಿನ ಸಂಶೋಧನೆಗಳು ತಿಳಿಸಿವೆ.

ಕೊಬ್ಬರಿ ಎಣ್ಣೆ ರಕ್ತದ ಕೊಲೆಸ್ಟರಾಲ್ ಹೆಚ್ಚಿಸುತ್ತದೆ. ಆದುದರಿಂದ ಕೊಬ್ಬರಿ ಎಣ್ಣೆಯನ್ನು ಹೆಚ್ಚಾಗಿ ಸೇವಿಸುವ ಕೇರಳದ ಜನರಲ್ಲಿ ಹೃದಯಾಘಾತಗಳು ಅಧಿಕವಾಗಿವೆ. ತಂಬಾಕಿನ ಸೇವನೆ (ಬೀಡಿ, ಸಿಗರೇಟು ಸೇವನೆ, ಜರ್ದಾ, ಪಾನ್ ಮಸಾಲಾ) ರಕ್ತದ ಕೊಲೆಸ್ಟರಾಲ್ ಹೆಚ್ಚಿಸುತ್ತದೆ.

ಹೃದಯದ ಆರೋಗ್ಯದ ರಕ್ಷಣೆಗೆ ಸೂಕ್ತವಾದ ಎಣ್ಣೆಯನ್ನು ಆಯ್ಕೆಮಾಡಿಕೊಳ್ಳುವ ಜೊತೆಗೆ ಹಿತಮಿತ ಸಮತೂಕ ಆಹಾರ ಸೇವನೆ, ಚಟುವಟಿಕೆಯ ಜೀವನ, ವ್ಯಾಯಾಮ, ವಿಶ್ರಾಂತಿ, ತಂಬಾಕು ಸೇವನೆ ಮಾಡದಿರುವುದು ಮಾನಸಿಕ ಶಾಂತಿ ಎಲ್ಲವೂ ಅತ್ಯಗತ್ಯ. ●

('ರಾಜ್ಯಮಟ್ಟದ ಪ್ರೌಢಶಾಲೆಗಳ ವಿಜ್ಞಾನ ವಸ್ತು ಪ್ರದರ್ಶನ ದಾವಣಗೆರೆ-೧೯೯೪' ಸ್ಮರಣ ಸಂಚಿಕೆ "ಚೈತನ್ಯ"ದಿಂದ ಸಾಭಾರ)

ಜ್ಞಾನಿ ಜ್ಞಾನ

## ವಿದ್ಯಾರ್ಥಿ ಅಂಕಣ

# ಮಗ್ಗಿ: ಎಷ್ಟೊಂದು ಸುಲಭ!

• ಡಿ. ಮಿಥುನ್ ಚಕ್ರವರ್ತಿ

"ನೀರಿಳಿಯದ ಗಂಟಲಲ್ಲಿ ಕಡುಬ ತುರುಕಿದಂತೆ" ಎಂಬ ಉಕ್ತಿಯಿದೆ. ಹಾಗೆಯೇ ಆಟ-ಪಾಠಗಳಲ್ಲಿ ತೊಡಗಿರುವ ಮಕ್ಕಳಿಗೆ ಮಗ್ಗಿಯನ್ನು ಕಲಿಸುವಾಗ ಅದೇ ಸಾಹಸ ಮಾಡಬೇಕಾಗುತ್ತದೆ. ಆದರೆ ಮಗ್ಗಿಯನ್ನು ಸುಲಭ ವಿಧಾನದಲ್ಲಿ ಕಲಿಸಿಕೊಟ್ಟರೆ ಈ ರೀತಿಯ ತೊಂದರೆಯೇ ಇಲ್ಲ.

೨ ರಿಂದ ೧೧ ರವರೆಗಿನ ಮಗ್ಗಿಯನ್ನು ಸುಲಭವಾಗಿ ಬಾಯಿಪಾಠಮಾಡಬಹುದು. ಆದರೆ ಆದರ ಮುಂದಿನ ಮಗ್ಗಿಗಳು ಮಕ್ಕಳಿಗೆ ಬಹಳ ತೊಂದರೆ ನೀಡುತ್ತವೆ. ೧೨ ರಿಂದ ೧೯ ರವರೆಗಿನ ಮಗ್ಗಿಗಳನ್ನು ಸುಲಭವಾಗಿ ಬರೆಯಬಲ್ಲ ಉಪಾಯವನ್ನು ಇಲ್ಲಿ ಹೇಳುತ್ತೇನೆ.

೧೨ ರಿಂದ ೧೯ ರವರೆಗಿನ ಮಗ್ಗಿಯನ್ನು ಬರೆಯಲು ಬಿಡಿ ಸ್ಥಾನದ ಅಂಕಿಯ ಮಗ್ಗಿಯನ್ನು ಬರೆದುಕೊಳ್ಳಬೇಕು.

ಉದಾ: ೧೨ ರ ಮಗ್ಗಿ
ಇಲ್ಲಿ ಬಿಡಿ ಅಂಕಿ ೧,೨
೨ ರ ಮಗ್ಗಿ:

| | | | | | |
|---|---|---|---|---|---|
| ೧ | + | ೦ | ೨ | = | ೧೨ |
| ೨ | + | ೦ | ೪ | = | ೨೪ |
| ೩ | + | ೦ | ೬ | = | ೩೬ |
| ೪ | + | ೦ | ೮ | = | ೪೮ |
| ೫ | + | ೧ | ೦ | = | ೬೦ |
| ೬ | + | ೧ | ೨ | = | ೭೨ |
| ೭ | + | ೧ | ೪ | = | ೮೪ |
| ೮ | + | ೧ | ೬ | = | ೯೬ |
| ೯ | + | ೧ | ೮ | = | ೧೦೮ |
| ೧೦ | + | ೨ | ೦ | = | ೧೨೦ |

ಮೇಲಿನ ಮಗ್ಗಿಯ ಹತ್ತರ ಸ್ಥಾನದ ಅಂಕಿಗಳಿಗೆ ಕ್ರಮವಾಗಿ ೧, ೨, ೩, ೪, ೫,

# ಜ್ಞಾನನಿಧಿ

೬, ೭, ೮, ೯, ೧೦ ನ್ನು ಕೂಡಿಸಿ.

ಹಾಗೆಯೇ:

೧೫ ರ ಮಗ್ಗಿ ಬರೆಯಲು ಬಿಡಿಸ್ಥಾನದ ಅಂಕಿ ೫ ರ ಮಗ್ಗಿಯನ್ನು ಬರೆದುಕೊಂಡು, ಆ ಮಗ್ಗಿಯ ಹತ್ತರ ಸ್ಥಾನದ ಅಂಕಿಗಳಿಗೆ ಕ್ರಮವಾಗಿ ೧, ೨, ೩, ೪, ೫, ೬, ೭, ೮, ೯, ೧೦ ನ್ನು ಕೂಡಿಸಿ.

ಉದಾ: ೧೫.

| | | | | | |
|---|---|---|---|---|---|
| ೧ | + | ೦ | ೫ | = | ೧೫ |
| ೨ | + | ೧ | ೦ | = | ೩೦ |
| ೩ | + | ೧ | ೫ | = | ೪೫ |
| ೪ | + | ೨ | ೦ | = | ೬೦ |
| ೫ | + | ೨ | ೫ | = | ೭೫ |
| ೬ | + | ೩ | ೦ | = | ೯೦ |
| ೭ | + | ೩ | ೫ | = | ೧೦೫ |
| ೮ | + | ೪ | ೦ | = | ೧೨೦ |
| ೯ | + | ೪ | ೫ | = | ೧೩೫ |
| ೧೦ | + | ೫ | ೦ | = | ೧೫೦ |

೧೯ರ ಮಗ್ಗಿಯು ಒಂದು ಸೋಜಿಗದ ವ್ಯವಸ್ಥೆ ಹೊಂದಿದೆ. ಈ ಮಗ್ಗಿಯನ್ನು ಮೇಲೆ ತಿಳಿಸಿದ ರೀತಿಯಲ್ಲಲ್ಲದೇ ಮತ್ತೊಂದು ಸುಲಭ ವಿಧಾನದಲ್ಲೂ ಬರೆಯಬಹುದು. ಅದು ಹೀಗೆ:

ಬಿಡಿ ಅಂಕಿಗಳನ್ನು ೯, ೮, ೭, ೬ ಇತ್ಯಾದಿಯಾಗಿ ೦ ಯ ವರೆಗೆ ಇಳಿಕೆ ಕ್ರಮದಲ್ಲಿ ಬರೆಯಬೇಕು. ನಂತರ ೧, ೩, ೫, ೭ ಇತ್ಯಾದಿ ಬೆಸಸಂಖ್ಯೆಗಳನ್ನು ಕ್ರಮವಾಗಿ ೧೯ ರವರೆಗೆ ಬರೆದರೆ ದೊರೆಯುವುದೇ ೧೯ ರ ಮಗ್ಗಿ.

೧೯ ರ ಮಗ್ಗಿ:

೧೯
೩೮
೫೭
೭೬
೯೫
೧೧೪
೧೩೩
೧೫೨
೧೭೧
೧೯೦

"ಇಲಿಮರಿಗಿಂತಲೂ ಚಿಕ್ಕದಾದ ಪುಟಾಣಿ ಇಲಿ ಪೂರ್ವ ಆಫ್ರಿಕದ ಉಷ್ಣಪ್ರದೇಶಗಳಲ್ಲಿ ವಾಸಿಸುತ್ತದೆ. ಅದೆಷ್ಟು ಚಿಕ್ಕದು ಗೊತ್ತೆ? ನಿಮ್ಮ ಚಹದ ಚಮಚೆಯಲ್ಲಿ ಅದು ಸಲೀಸಾಗಿ ಕುಳಿತುಕೊಳ್ಳಬಲ್ಲದು. ಕಲ್ಲುಗಳ ಅಡಿಯಲ್ಲಿನ ಬಿಲದಲ್ಲೇ ಅದರ ವಾಸ. ಅದು ಕುಡಿಯುವಷ್ಟು ಸ್ವಚ್ಛವಾದ ನೀರನ್ನು ಕ್ವಚಿತ್ತಾಗಿಯೆ ಉಳಿದ ಪ್ರಾಣಿಗಳು ಕುಡಿದಾವು. ಪೂರ್ವ ಆಫ್ರಿಕದಲ್ಲಿ ಹಗಲಿನಲ್ಲಿ ಎಷ್ಟು ಸೆಕೆಯೋ ರಾತ್ರಿಯಲ್ಲಿ ಅಷ್ಟೇ ಚಳಿ. ಬಿಲದ ಮೇಲಿರುವ ಕಲ್ಲುಗಳ ಮೇಲೆ ರೂಪುಗೊಂಡ ಇಬ್ಬನಿಯ ಹನಿಗಳನ್ನು ಕುಡಿದೇ ಆ ಪುಟಾಣಿ ಇಲಿ ತೃಷೆಯನ್ನು ನೀಗಿಸಿಕೊಳ್ಳುತ್ತದೆ.

## ವಿಶ್ವದ ಅತಿದೊಡ್ಡ ಹೂವು

೧೯೯೪ ಎಪ್ರಿಲ್ ೨ರ ವರದಿಯಂತೆ ವಿಶ್ವದ ಅತಿದೊಡ್ಡದಾದ ಹೂವು- "ಟೈಟೇನಿಯಂ ಬೆಕ್" ಅನ್ನು ಸುಮಾತ್ರಾದ ಅರಣ್ಯಗಳಲ್ಲಿ ಪತ್ತೆಹಚ್ಚಲಾಯಿತು. ಪೂರ್ತಿ ಅರಳಿದಾಗ ಇದರ ಎತ್ತರ ೬ ಅಡಿ, ಅಗಲ ೫ ೩/೪ ಅಡಿ. ನಮ್ಮ ದೇಶದ ದಾಸವಾಳವನ್ನು ಹೋಲುವ ಈ ಹೂವನ್ನು ಸದ್ಯ ಇಂಡೋನೇಷ್ಯಾದ ಬೊಗೊರ್ ಸಸ್ಯೋದ್ಯಾನದಲ್ಲಿ ಬೆಳೆಸಲಾಗುತ್ತಿದೆ.

• ನಾರಾಯಣ ರೈ ಕುಕ್ಕುವಳ್ಳಿ

# ಮಹಿಳಾ ಪ್ರಧಾನ ಥಾರೂ ಜನಾಂಗ

• ಸಂಗ್ರಹ: **ಟಿ.ಎಸ್. ಲಲಿತ**

ವಿಚಿತ್ರ ಜನರಿವರು. ಇವರ ಪದ್ಧತಿಗಳು ಕುತೂಹಲಕರ. ಪ್ರಪಂಚದಲ್ಲಿ ಇಂದು ಸ್ತ್ರೀಯರು ನಿರಂಕುಶ ಆಡಳಿತ ನಡೆಸುವ ಕೆಲವೇ ಪಂಗಡಗಳಲ್ಲಿ ಸೇರುವವರಿವರು.

ಈ ಸಮಾಜ ಗಂಡುಮಕ್ಕಳಿಗೆ ಪ್ರಾಧಾನ್ಯ ಇರುವಂಥ ಸಂಸಾರಗಳನ್ನು ಕೀಳಾಗಿ ಕಾಣುತ್ತದೆ. 'ಥಾರು' ಎನ್ನುವ ಈ ವಿಚಿತ್ರ ಜನಾಂಗದ ಹುಟ್ಟು ಹಾಗೂ ಥಾರು ಸ್ತ್ರೀಯರಿಗೆ ಆ ಜನಾಂಗ ತೋರಿಸುವ ಗೌರವ ಕುತೂಹಲ ಮೂಡಿಸುವಂತಿದೆ.

ಮೊಘಲರು ರಾಜಾಸ್ಥಾನದ 'ಚಿತ್ತೂರ ಘಡ'ಕ್ಕೆ ಮುತ್ತಿಗೆ ಹಾಕಿದಾಗ ರಜಪೂತ ಸೇನಾನಿಗಳು, ತಮ್ಮ ಸ್ತ್ರೀಯರನ್ನು ಹಿಮಾಲಯದ ಕಣಿವೆಗಳ ಕಾಡುಪ್ರದೇಶದ ಮಾರ್ಗವಾಗಿ ನೇಪಾಳಕ್ಕೆ ಕಳಿಸಿದರು. ಪ್ರಯಾಣಕ್ಕೆ ಮುಂದಾಳುಗಳಾಗಿ ಪುರುಷ ಆಳುಗಳು, ಅಡಿಗೆಯವರು, ಗುಡಿಸುವವರು, ದೋಭಿಗಳು ಮುಂತಾದವರು ಹೊರಟರು.

ಮುತ್ತಿಗೆಯಿಂದ ಚಿತ್ತೂರನ್ನು ರಕ್ಷಿಸುತ್ತಿದ್ದ ಸೈನಿಕರು ಯುದ್ಧದಲ್ಲಿ ಮೃತರಾದರು. ಉಳಿದ ಕೆಲ ಮಂದಿಗೆ ಮುಂದೆ ಕಳಿಸಿದ ಸ್ತ್ರೀಯರನ್ನು ಹಿಂಬಾಲಿಸಲಾಗಲಿಲ್ಲ. ತಮ್ಮ ಪುರುಷರಿಗಾಗಿ ಸಾಕಷ್ಟು ಕಾದು ತರಾಯಿ ಕೊಳ್ಳಪ್ರದೇಶದಲ್ಲುಳಿದ ಸ್ತ್ರೀಯರು ತಮ್ಮೊಂದಿಗಿದ್ದ ಆಳುಗಳು ಹಾಗೂ ಇತರ ಕೆಲಸಗಾರರನ್ನೇ ಮದುವೆಯಾದರು. ಈ ಮದುವೆಯಿಂದ ಹುಟ್ಟಿದ ಮಕ್ಕಳೇ 'ಥಾರೂ' ಜನಾಂಗದವರು.

ಈ ಸ್ತ್ರೀಯರು ಒಮ್ಮೆ ತಾವಿದ್ದ ಅಂತಸ್ತು, ಮರ್ಯಾದೆಗಳನ್ನು ಹೇಗೆ ಮರೆಯಲಿಲ್ಲವೋ ಹಾಗೆಯೇ ಆ ಪುರುಷರು ತಾವೊಮ್ಮೆ ಅವೇ ಸ್ತ್ರೀಯರ ಆಳುಗಳಾಗಿದ್ದೆವೆಂಬುದನ್ನೂ ಮರೆಯಲಿಲ್ಲ. ಭಯಭಕ್ತಿಯಿಂದ ಒಡತಿಯ ಆದೇಶವನ್ನು ಪಾಲಿಸುವ ಸ್ವಭಾವವನ್ನು ಬಿಟ್ಟುಬಿಡುವುದು ಅವರಿಗೆ ಆಗಲಿಲ್ಲ. ಇಂದಿಗೂ 'ಥಾರೂ' ಸ್ತ್ರೀಯರು, ತಾವು ಪುರುಷರಿಗಿಂತಲೂ ಶ್ರೇಷ್ಠರೆಂದೂ ಮುಖ್ಯರೆಂದೂ ತಿಳಿಯುತ್ತಾರೆ.

ಈ ಸ್ತ್ರೀಯರು ಮನೆಗೆಲಸ ಮಾಡುತ್ತ ನೆಲದ ಮೇಲೆ ಕುಳಿತುಕೊಳ್ಳುವುದಿಲ್ಲ. ಪುರುಷರು ಬಿಟ್ಟ ಆಹಾರವನ್ನಿವರು ತಿನ್ನುವುದಿಲ್ಲ. ಪುರುಷರು ಅಡಿಗೆಮನೆಗೆ ಪ್ರವೇಶಿಸುವಂತಿಲ್ಲ. ಕುಡಿಯುವ ನೀರನ್ನು ಮುಟ್ಟುವಂತಿಲ್ಲ. ಥಾರೂ ಸ್ತ್ರೀಯರು ನಿಜಕ್ಕೂ ಪುರುಷರಿಗಿಂತ ಹೆಚ್ಚು ಧೈರ್ಯಶಾಲಿಗಳು, ಕಷ್ಟಜೀವಿಗಳು ಹಾಗೂ ಕುಶಾಗ್ರಮತಿಗಳು. ನೇಯ್ಗೆ, ಕಟ್ಟಿಗೆ ಕೂಡಿಸುವ ಕೆಲಸಗಳಿಂದ ಹಿಡಿದು ಮನೆಗಳನ್ನು ಕಟ್ಟುವ ಕೆಲಸವನ್ನು ತ್ರಾಸದಾಯಕವೆಂದು ತಿಳಿಯದೆ ಅದು ತಮ್ಮ ವಿಶೇಷ ಹಕ್ಕೆಂದು ತಿಳಿಯುತ್ತಾರೆ. ಈ ಜನಾಂಗದ ಒಂದು ವಿಶೇಷವೆಂದರೆ ಕಾಲ ಹೆಬ್ಬೆರಳನ್ನು ಸ್ವಲ್ಪ ಸೀಳಿ ರಕ್ತವನ್ನು ಹಣೆಗಿಡುತ್ತಾರೆ. ಇದು ಅವರು ರಜಪೂತ ಕುಲಕ್ಕೆ ಸೇರಿದವರೆನ್ನುವುದರ ಕುರುಹಂತೆ. ನೇಪಾಳದ ೮೦೦ ಚದರ ಮೈಲಿಗಳ ವಿಸ್ತೀರ್ಣದಲ್ಲಿ ನೆಲೆಸಿರುವ ೨ ಲಕ್ಷ ಥಾರುಗಳ ನಾಡನ್ನು ಥಾರು ಹತ ಎನ್ನುತ್ತಾರೆ. ಜಿಗಣೆ, ವಿಷಯುಕ್ತ ಹಾವಿನಿಂದ ಕೂಡಿದ ಈ ಪ್ರದೇಶದಲ್ಲಿ ಮಲೇರಿಯಾ ವ್ಯಾಧಿ ಹೆಚ್ಚು. ಭಾಷೆಯ ತೊಡಕು, ಸರಿಯಾದ

## ಜ್ಞಾನನಿಧಿ

ಸಂಪರ್ಕ ವ್ಯವಸ್ಥೆ ಇಲ್ಲದಿರುವುದು, ಹೊರಗಿನ ಅತಿಕ್ರಮಣಕಾರರಿಂದ ಈ ಪ್ರದೇಶವನ್ನು ಸಹಜವಾಗಿ ರಕ್ಷಿಸಿದೆ. ಆದ್ದರಿಂದ ಮೊಘಲರ ಕಾಲದಿಂದಲೂ ಇದ್ದಂತೆ ತಮ್ಮ ಸಾಮಾಜಿಕ ಪದ್ಧತಿಗಳನ್ನಿವರು ಉಳಿಸಿಕೊಂಡಿದ್ದಾರೆ.

ಸ್ವಾರಸ್ಯಕರ ವಿಷಯವೆಂದರೆ, ಭಾರತದ ಬೇರೆಡೆ ಪಿಡುಗಾಗಿರುವ ವರದಕ್ಷಿಣೆಯ ಸೊಲ್ಲು ಈ ಜನಾಂಗದಲ್ಲಿಲ್ಲ. ವರದಕ್ಷಿಣೆ ಎಂದರೆ ಒಂದು ರೂಪಾಯಿ ಹಾಗೂ ಒಂದು ಸೀರೆ ಅಷ್ಟೆ. ಮಗುವಾಗಿದ್ದಾಗಲೆ ಮದುವೆಯನ್ನು ನಿಶ್ಚಯಿಸಿದರೂ ಮದುವೆಯನ್ನು ಬೇಗ ಮಾಡುವುದಿಲ್ಲ. ವಯಸ್ಕಳಾಗುವವರೆಗೂ ಹುಡುಗಿ ತನ್ನ ತಾಯಿಯೊಂದಿಗೇ ಇರುತ್ತಾಳೆ. ಶೈಶವಾವಸ್ಥೆಯಲ್ಲಿ ವಿವಾಹ ನಿಶ್ಚಿತವಾಗಿದ್ದರೂ, ವಿವಾಹವಾಗಲೇಬೇಕೆಂಬ ಬಂಧನವಿಲ್ಲ. ಹುಡುಗಿ ಅಥವಾ ಮನೆಯವರಿಗೆ ಹುಡುಗನ ಬಗ್ಗೆ ಅತೃಪ್ತಿಯಿದ್ದರೆ ಮದುವೆಯನ್ನು ನಿಲ್ಲಿಸಿಬಿಡಬಹುದು ಅಥವಾ ಮುಂದೂಡಬಹುದು. ಇದು ಥಾರೂ ಹುಡುಗಿಯರ ವಿಶೇಷ ಹಕ್ಕು.

ಬಣ್ಣದ ಬೆಡಗಿನ ಥಾರೂ ನೃತ್ಯ ಭಾರತದಲ್ಲೇ ಅತಿ ಸುಂದರ. ಡ್ರಂ, ಹಾರ್ಮೋನಿಯಂ ಇವರ ಪ್ರಿಯ ವಾದ್ಯಗಳು. ಒಡವೆಗಳ ಬಗ್ಗೆ ವಿಶೇಷ ಪ್ರೀತಿಯುಳ್ಳ ಈ ಸ್ತ್ರೀಯರು ಆಭರಣಗಳ ಹೊರೆಯೊಂದಿಗೆ ಕೆಂಪು ದುಪಟ್ಟಾದ ಮುಸುಕು ಹಾಕಿ, ಸಾಂಪ್ರದಾಯಿಕ ಬಣ್ಣದ ತುಂಡು ರವಿಕೆ ತೊಟ್ಟು ನರ್ತಿಸುತ್ತಾರೆ. ಹಸಿರು ವಾತಾವರಣದಲ್ಲಿ ಸ್ತ್ರೀ ಪುರುಷರಿಬ್ಬರೂ ಭಾಗವಹಿಸುವ ವಸಂತ ಹಬ್ಬದ ನೃತ್ಯಗಳು, ವಿನೋದಪ್ರಿಯರಾದ ಸಾವಿರಾರು ಥಾರುಗಳನ್ನಾಕರ್ಷಿಸುತ್ತವೆ.

ಜೀವನದ ಬಗ್ಗೆ ಉತ್ಸಾಹ ಹೊಂದಿರುವ ಥಾರುಗಳಲ್ಲಿ ಹೆಚ್ಚಿನವರು ಬಡವರು. ಶೇಕಡಾ ೨೦ ರಷ್ಟು ಜನ ಭೂಮಿ ಹೊಂದಿದವರಾದರೆ ಉಳಿದ ೮೦ ರಷ್ಟು ಕೆಲಸಗಾರರು. ಆದರೂ ಅಭಿಮಾನಿಗಳು, ಎಲ್ಲಿಯೂ ಭಿಕ್ಷೆ ಬೇಡುವ ಸುಳಿವಿಲ್ಲ. ಬೇಡುವುದನ್ನು ಅತ್ಯಂತ ಹೀನ ಕೃತ್ಯವೆಂದವರು ತಿಳಿಯುತ್ತಾರೆ. ವಿದ್ಯಾಭ್ಯಾಸ ಸಾಕಷ್ಟಿಲ್ಲವಾದರೂ ಈ ಜನಾಂಗದವರು ವಿನೀತರೂ ಮೆಲುಮಾತನ್ನಾಡುವವರೂ ವ್ಯಾವಹಾರಿಕ ಜಾಣತನವುಳ್ಳವರೂ ಆಗಿದ್ದಾರೆ. ●

## ಸೂರ್ಯನಲ್ಲಿ ನೀರು!

**ನಂ**ಬಲು ಅಸಾಧ್ಯ ಅಲ್ಲವೆ? ಆದರೆ ಮೊನ್ನೆ ಮೇ ತಿಂಗಳ 'ಸೈನ್ಸ್' ಪತ್ರಿಕೆಯಲ್ಲಿ' ಪ್ರಕಟವಾದ ಸಂಶೋಧನಾ ಲೇಖನದ ಪ್ರಕಾರ ದ್ರವರೂಪದಲ್ಲಿಲ್ಲವಾದರೂ ಸರಿ, ಸೂರ್ಯನಲ್ಲಿ ನೀರಿರುವುದು ಖಂಡಿತ ಸಾಧ್ಯ.

ಸೂರ್ಯಗೋಳದ ಉಷ್ಣತೆ ಏಕ ಪ್ರಕಾರವಾಗಿಲ್ಲ. ಮಧ್ಯಭಾಗದಲ್ಲೆ ಅಲ್ಲಿ ೫,೭೦೦ ಡಿಗ್ರಿ ಸೆಂಟಿಗ್ರೇಡ್‌ಗಳಷ್ಟು ಅತ್ಯಧಿಕ ಉಷ್ಣತೆ. ಆದರೆ ಸೂರ್ಯನ ಕಲೆಗಳಲ್ಲಿನ ಉಷ್ಣತೆ ಇದಕ್ಕಿಂತ ಕಡಿಮೆ- ಸುಮಾರು ೨,೯೦೦ ಡಿಗ್ರಿ ಸೆಂಟಿಗ್ರೇಡ್‌ಗಳಷ್ಟು ಎಂದು ವಿಜ್ಞಾನಿಗಳ ಅಂದಾಜು. ಸೂರ್ಯನಲ್ಲಿ ನೀರಿನ ಅಸ್ತಿತ್ವಕ್ಕೆ ಆಧಾರವಾದ ಪ್ರಾಣವಾಯು, ಜಲಜನಕಗಳೆರಡೂ ಇವೆ. ಸೂರ್ಯನ ಕಲೆಗಳಲ್ಲಿ ಇವೆರಡೂ ಸಮ್ಮಿಲನಗೊಂಡದ್ದರಿಂದ ಅಲ್ಲಿ ನೀರಿನ ಅಸ್ತಿತ್ವವಿದೆಯೆಂದು ನಂಬಲು ಬಲವಾದ ಕಾರಣ ಇದೆ ಎನ್ನುತ್ತಾರೆ, ಆ ಕುರಿತು ಸಂಶೋಧನೆ ನಡೆಸಿದ ತಂಡದಲ್ಲೊಬ್ಬರಾದ ಪೀಟರ್ ಬರ್ನಾಥ್ ಎಂಬ ವಿಜ್ಞಾನಿ. ●

# ಬುಧ ಗ್ರಹ

**ಸೂ**ರ್ಯನ ಸುತ್ತ ತಿರುಗುವ ಗ್ರಹಗಳಲ್ಲಿ ಬುಧವೂ ಒಂದು. ನವಗ್ರಹಗಳಲ್ಲಿ ಇದು ಅತ್ಯಂತ ಚಿಕ್ಕದಾದದ್ದು. ಸೂರ್ಯನಿಗೆ ಅತಿ ಸಮೀಪದಲ್ಲಿರುವ ಗ್ರಹವೂ ಹೌದು. ಬುಧ ಮತ್ತು ಸೂರ್ಯ ಇವುಗಳ ನಡುವಿನ ಅಂತರ ಸುಮಾರು ಮೂರೂವರೆ ಕೋಟಿ ಮೈಲಿಗಳು.

ಗಾತ್ರದಲ್ಲಿ ಇದು ಭೂಗ್ರಹದ ಅರ್ಧದಷ್ಟು. ಆದರೆ ಭೂಮಿಯ ತೂಕ ಬುಧನಿಗಿಂತ ಇಪ್ಪತ್ತೈದು ಪಟ್ಟು ಹೆಚ್ಚು. ಹೀಗಾಗಿ ಬುಧನ ಗುರುತ್ವಾಕರ್ಷಣ ಶಕ್ತಿ ಭೂಮಿಗಿಂತ ಬಹಳ ಕಡಿಮೆ. ಭೂಮಿಯ ಮೇಲೆ ನೂರು ಕಿಲೋಗ್ರಾಂ ತೂಕವಿರುವ ಮನುಷ್ಯ ಬುಧನ ಮೇಲೆ ಕೇವಲ ಇಪ್ಪತ್ತಾರು ಕಿಲೋಗ್ರಾಂ ತೂಗುತ್ತಾನೆ.

ಭೂಮಿಯು ಸೂರ್ಯನಿಗೆ ಪ್ರದಕ್ಷಿಣೆ ಹಾಕಲು ಮುನ್ನೂರ ಅರವತ್ತೈದು ದಿನಗಳನ್ನು ತೆಗೆದುಕೊಂಡರೆ, ಬುಧ ಸೂರ್ಯನನ್ನು ಸುತ್ತಿ ಬರಲು ೮೮ ದಿನಗಳನ್ನು ಸಾಕು. ಆದರೆ ಇತ್ತೀಚಿನ ವರದಿಯೊಂದರ ಪ್ರಕಾರ ಬುಧ, ಸೂರ್ಯನನ್ನು ಸುತ್ತಲು ೫೮.೬ ದಿನಗಳನ್ನು ತೆಗೆದುಕೊಳ್ಳುತ್ತಾನೆ. ಬಾಹ್ಯಾಕಾಶದಲ್ಲಿ ಬುಧನು ಸೆಕೆಂಡಿಗೆ ಮೂವತ್ತು ಮೈಲಿಯಂತೆ ಚಲಿಸುತ್ತಾನೆಂದು ಹಿಂದೆ ನಿರ್ಧರಿಸಲಾಗಿತ್ತು. ಆದರೆ ಈಗಿನ ಲೆಕ್ಕಾಚಾರದ ಪ್ರಕಾರ ಬುಧನ ಚಲನೆ ಸೆಕೆಂಡಿಗೆ ೨೩ ಮೈಲುಗಳಷ್ಟು. ಬುಧನು ಕೆಲವೊಮ್ಮೆ ಸೂರ್ಯನಿಗೆ ಹತ್ತಿರವಾಗಿ ಚಲಿಸಿದರೆ ಮತ್ತೊಮ್ಮೆ ದೂರದಲ್ಲಿ ಚಲಿಸುತ್ತಾನೆ. ಹೀಗಾಗಿ ಬುಧನ ವೇಗವೂ ಹೆಚ್ಚು ಕಡಿಮೆಯಾಗುತ್ತಿರುತ್ತದೆ. ಸೂರ್ಯನಿಗೆ ಅತಿ ಸಮೀಪದಲ್ಲಿದ್ದಾಗ ಅದರ ಚಲಿಸುವ ವೇಗ ಸೆಕೆಂಡಿಗೆ ಮೂವತ್ತೈದು ಮೈಲಿಗಳಷ್ಟು. ಹಾಗೆಯೆ ಬುಧನು, ತನ್ನ ಅಕ್ಷದ ಸುತ್ತ ಪೂರ್ತಿಯಾಗಿ ತಿರುಗಲು ೮೮ ದಿನಗಳು ಬೇಕು. ಬುಧನ ಒಂದು ಮೇಲ್‌ಮೈಯು ಯಾವಾಗಲೂ ಬೆಳಕಿನಿಂದ ಕೂಡಿದ್ದರೆ ಮತ್ತೊಂದು ಮೇಲ್‌ಮೈ ಮೇಲೆ ಸದಾ ಕತ್ತಲೆ. ಬೆಳಕಿನಿಂದ ಕೂಡಿದ ಮೇಲ್‌ಮೈಯ ಉಷ್ಣತೆ ೭೭೦ **F** ಇದ್ದರೆ, ಕತ್ತಲು ಮೇಲ್‌ಮೈಯ ಉಷ್ಣತೆ -೩೦೦ **F.**

ಬುಧ ಮತ್ತು ಚಂದ್ರನ ಗಾತ್ರಗಳು ಒಂದೇ ಇದ್ದು ದೂರದರ್ಶಕದಿಂದ ವೀಕ್ಷಿಸಿದಾಗ ಎರಡು ಗ್ರಹಗಳು ಒಂದೇ ರೀತಿಯಾಗಿ ಕಾಣುತ್ತವೆ.

ಬುಧನ ಮೇಲ್‌ಮೈ ಮೇಲೆ ಗಾಳಿ ಇಲ್ಲದ್ದರಿಂದ ಜೀವರಾಶಿ ಇರುವುದು ಸಾಧ್ಯವಿಲ್ಲ. ಬೆಳಗಿನ ಹೊತ್ತು ಮತ್ತು ಸಾಯಂಕಾಲದ ವೇಳೆ ಗೋಚರಿಸುವ ಇದನ್ನು ಪ್ರತಿ ಎರಡು ತಿಂಗಳಿಗೊಮ್ಮೆ ಬಾಹ್ಯಾಕಾಶದಲ್ಲಿ ವೀಕ್ಷಿಸಬಹುದು.

ಎರಡು ತಿಂಗಳ ಅವಧಿಯಲ್ಲಿ ಎರಡು ವಾರ ಬೆಳಗಿನ ಹೊತ್ತು ಮತ್ತು ಸಾಯಂಕಾಲ ಕೇವಲ ಒಂದು ಗಂಟೆ ಮಾತ್ರ ಗೋಚರಿಸುತ್ತದೆ. ಬುಧ ಗ್ರಹದ ವ್ಯಾಸ ೩,೦೦೦ ಮೈಲುಗಳಷ್ಟು.

ದೂರದರ್ಶಕದಿಂದ ಬುಧನನ್ನು ವೀಕ್ಷಿಸಿದಾಗ, ಬಿದಿಗೆ ಚಂದ್ರ ಮತ್ತು ಹುಣ್ಣಿಮೆ ಚಂದ್ರನಂತೆ ಬುಧನೂ ಸಹ ವಿವಿಧ ಬೆಳ

## ಜ್ಞಾನನಿಧಿ

ವಣಗೆಯ ಸ್ಥಿತಿಯಲ್ಲಿ ಗೋಚರಿಸುವುದು ಕಂಡುಬಂದಿದೆ. ಭೂಮಿ ಮತ್ತೆ ಸೂರ್ಯನ ನಡುವೆ ನೇರಸ್ಥಿತಿಯಲ್ಲಿದ್ದಾಗ ಬುಧ ಗೋಚರಿಸುವುದಿಲ್ಲ. ಇಂತಹ ಒಂದು ಸ್ಥಿತಿ ಕ್ರಮವಾಗಿ ಬರುವುದಿಲ್ಲವಾದರೂ ಸಾಮಾನ್ಯವಾಗಿ ಮೇ ಮತ್ತು ನವಂಬರ್ ತಿಂಗಳುಗಳಲ್ಲಿ (ಎಲ್ಲ ವರ್ಷಗಳಲ್ಲೂ ಅಲ್ಲ) ಈ ಮೂರು ಗ್ರಹಗಳು (ಸೂರ್ಯ, ಬುಧ ಮತ್ತು ಭೂಮಿ) ಒಂದೇ ರೇಖೆಯಲ್ಲಿರುವುದು ವ್ಯಕ್ತವಾಗಿದೆ. ಇದನ್ನು ಬುಧನಿಂದ ಉಂಟಾಗುವ ಸೂರ್ಯಗ್ರಹಣವೆಂದು ಹೇಳುತ್ತಾರೆ. ಆದರೆ ಗ್ರಹಣ ಉಂಟಾಗುವ ಪ್ರದೇಶದ ವಿಸ್ತೀರ್ಣ ತೀರ ಕಡಿಮೆಯಾಗಿರುವುದರಿಂದ ನಮ್ಮ ಗಮನ ಅದರ ಕಡೆ ಹೋಗುವುದು ಅಪರೂಪ. ೧೯೯೩ನೇ ನವಂಬರ್ ಐದರಂದು ಈ ಮೂರು ಗ್ರಹಗಳು ಒಂದೇ ರೇಖೆಯಲ್ಲಿದ್ದು ಬುಧನಿಂದ ಭೂಮಿಯ ಮೇಲೆ ಸೂರ್ಯಗ್ರಹಣ ಉಂಟಾಗಿತ್ತು. ಮುಂದೆ ೧೯೯೯ ನೇ ನವಂಬರ್ ೧೫ ರಂದು ಮತ್ತು ೨೦೦೩ ನೇ ಮೇ ಆರರಂದು ಈ ರೀತಿಯ ಗ್ರಹಣ ಉಂಟಾಗುವುದೆಂದು ಖಗೋಳವಿಜ್ಞಾನಿಗಳು ಲೆಕ್ಕಾಚಾರ ಹಾಕಿದ್ದಾರೆ.

**ಅನಂತನಾರಾಯಣಸ್ವಾಮಿ**



### ಹೀಗೊಂದು ಮರ್ಕಟ ವಿಚಾರ

ಇಂಗ್ಲೀಷಿನಲ್ಲಿ 'ಮಂಕಿ' ಎಂದರೆ ಕನ್ನಡದಲ್ಲಿ ಮಂಗ. ಆದರೆ ಈ ಮಂಕಿ ಶಬ್ದ ಹೇಗೆ ಬಂತು? ಮಧ್ಯಯುಗೀನ ಜರ್ಮನ್ನಿನ ಮೊನೇಕೆಯಿಂದಲೂ ಹಳೆ ಫ್ರೆಂಚಿನ 'ಮೊನ್ನೆ'ಯಿಂದಲೂ ಇಂಗ್ಲೀಷಿಗೆ ಈ ಶಬ್ದ ಬಂತೆಂದು ಕೋಶಗಳು ಹೇಳುತ್ತವೆ. ರೇನಾರ್ಡ್‌ನ ಕತೆಯಲ್ಲಿ ಬರುವ ಮಾರ್ಟಿನ್ ಎಂಬ ಮಂಗದ ಮಗನ ಹೆಸರು ಮೊನೇಕೆ ಎಂದೂ ಅದರಿಂದಲೇ ಈ ಶಬ್ದ ಇಂಗ್ಲೀಷಿಗೆ ಇಳಿದುಕೊಂಡು ಬಂದಿದೆಯೆಂದೂ ವಾದ ಇದೆಯಾದರೂ ಬಹುಕಾಲ ಬ್ರಿಟಿಶ್ ರಾಜಸತ್ತೆಯಲ್ಲಿ ಫ್ರೆಂಚೇ ಅಧಿಕೃತ ಭಾಷೆಯೆಂದು ಪರಿಗಣಿಸಲ್ಪಟ್ಟಿದ್ದರಿಂದಲೂ ಹದಿನಾರು ಹದಿನೇಳನೆಯ ಶತಮಾನದವರೆಗೂ ಫ್ರೆಂಚು ಆಢ್ಯ ಮನೆತನದವರು ಆಡುವ ಭಾಷೆಯೆಂಬ ವಿಚಾರ ಇಂಗ್ಲೆಂಡಿನಲ್ಲಿ ಸಾರ್ವತ್ರಿಕವಾಗಿದ್ದರಿಂದಲೂ ಈ ಶಬ್ದ ಫ್ರೆಂಚಿನ 'ಮೊನ್ನೆ'ಯಿಂದ ಬಂದಿರುವ ಸಾಧ್ಯತೆಯೇ ಹೆಚ್ಚು. ಆದರೆ ಫ್ರೆಂಚಿಗೆ ಈ ಶಬ್ದ ತೂರಿಕೊಂಡು ಬಂದದ್ದು ಸ್ಪಾನಿಷ್ ಮೂಲಕ. ಸ್ಪಾನಿಷ್‌ಗೆ ಈ ಶಬ್ದವನ್ನು ಪರಿಚಯಿಸಿದವರು ಪೋರ್ಚುಗೀಜ್ ನಾವಿಕರು. ಅವರಿಗೆ ಈ ಶಬ್ದ ದೊರೆತದ್ದು ಅವರು ಇಲ್ಲಿಗೆ ಬಂದು ವ್ಯಾಪಾರೀ ಸಂಬಂಧವನ್ನು ಸ್ಥಾಪಿಸಿದಾಗ. ಮಲೆಯಾಳಂನಲ್ಲಿ 'ಮೊಣ್ಣೆ' ಎಂದರೆ ಮಂಗ. ಈ ಮಲೆಯಾಳಿ ಮಂಗ ಫ್ರಾನ್ಸ್, ಸ್ಪೇನ್ ಹಾಗೂ ಪೋರ್ಚುಗಲ್‌ಗಳಿಗೂ ಹಾರಿ, ಅನಂತರ ಇಂಗ್ಲೆಂಡಿಗೆ ಬಂದಿಳಿದು ಇಂಗ್ಲೀಷಿನಲ್ಲಿ ನುಸುಳಿಕೊಂಡಿತೆಂದರೆ ಯಾರಾದರೂ ಸುಲಭವಾಗಿ ನಂಬುತ್ತಾರೆಯೆ?

● 'ಶ್ರೀಕಾಂತರಾವ್'

ಪ್ರೈಮರಿ ಶಾಲೆಯಲ್ಲಿ ಕೂಡುವುದು, ಕಳೆಯುವುದನ್ನು ಕಲಿಯಬೇಕಾದ ವಯಸ್ಸಿನ ಹುಡುಗಿಯೊಬ್ಬಳು, ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರೂ ಅಧ್ಯಾಪಕರೂ ವಿದ್ಯಾರ್ಥಿಗಳೂ ತುಂಬಿದ ಸಭೆಯಲ್ಲಿ ಗಣಿತದ ತೊಡಕಾದ ಸಮಸ್ಯೆಗಳಿಗೆ ಉತ್ತರವನ್ನು ಕ್ಷಣ ಮಾತ್ರದಲ್ಲಿ ಹೇಳುತ್ತಿದ್ದಳು. ಪೇಪರು-ಪೆನ್ನಿನ ಸಹಾಯವಿಲ್ಲದೆ ದೊಡ್ಡ

ಶಕುಂತಲಾದೇವಿ:

# ಮಾನವ ಗಣಕ ಯಂತ್ರ



ದೊಡ್ಡ ಸಂಖ್ಯೆಗಳನ್ನು ಗುಣಿಸಿ ಕ್ಷಣಾರ್ಧದಲ್ಲಿ ಗುಣಲಬ್ಧವನ್ನು ಹೇಳುತ್ತಿದ್ದಳು. ಭಾರಿ ಸಂಖ್ಯೆಯ ವರ್ಗಮೂಲವನ್ನು ರೆಪ್ಪೆ ಮಿಟುಕಿಸುವಷ್ಟರಲ್ಲಿ ಹೇಳುವುದೂ ಈ ಬಾಲಿಕೆಗೆ ಕಷ್ಟವಲ್ಲ. ಈ ಪುಟ್ಟ ಬಾಲಿಕೆಗೆ ೪೨ ಅಂಕಿಗಳುಳ್ಳ ಸಂಖ್ಯೆಗೆ ೨೦ ನೇ ಘಾತಮೂಲವನ್ನು ಹೇಳುವ ಪಾಂಡಿತ್ಯವಿತ್ತು! ಸಂಖ್ಯಾಪ್ರಿಯಳಾದ ಆರು ವರ್ಷದ ಈ ಪುಟ್ಟ ಬಾಲೆಗೆ ಕಠಿಣವಾದ ಗಣಿತದ ಸಮಸ್ಯೆಗಳೆಂದರೆ ಅಂಗೈ ನೆಲ್ಲಿಕಾಯಿ ಇದ್ದಹಾಗೆ. ಈ ಹಾಲುಗೆನ್ನೆಯ ಚಿಕ್ಕ ಹುಡುಗಿ ಸಂಖ್ಯೆಗಳ ೫ ಮತ್ತು ೬ ನೇ ಘಾತಮೂಲವನ್ನು ಹೇಳುವುದನ್ನು ನೋಡಿ ಅಲ್ಲಿ ನೆರೆದಿದ್ದ ಗಣಿತ ಶಾಸ್ತ್ರ ಪಂಡಿತರಿಗೆ ಆಶ್ಚರ್ಯವೋ ಆಶ್ಚರ್ಯ. ೩೦-೪೦ ವರ್ಷದ ಹಿಂದಿನ ಯಾವುದಾದರೂ ತಾರೀಖು ಹೇಳಿದರೆ ವಾರ ಯಾವುದೆಂಬುದನ್ನು ಹೇಳುವಳು. ಅಥವಾ ಇನ್ನು ೫೦ ವರ್ಷಗಳ ನಂತರ ಯಾವುದಾದರೂ ಒಂದು ತಾರೀಖು ಹೇಳಿದರೆ ಆ ದಿನ ಯಾವ ವಾರವಾಗುತ್ತೆಂಬುದನ್ನು ತಿಳಿಸುವಳು. ವಿಶ್ವವಿದ್ಯಾನಿಲಯದ ಘಟಾನುಘಟಿಗಳ ಮುಂದೆ ಎರಡು ಗಂಟೆಗಳಿಗೂ ಮೀರಿ ಸಭಿಕರು ಕೇಳಿದ ಪ್ರಶ್ನೆಗಳಿಗೆ

# ಜ್ಞಾನನಿಧಿ

ಸಮರ್ಪಕವಾಗಿ ಉತ್ತರವನ್ನು ಕೊಟ್ಟಳು. ಈ ಹುಡುಗಿಯೇ ಮುಂದೆ ಮಾನವ ಗಣಕಯಂತ್ರವೆಂದು ಪ್ರಸಿದ್ಧರಾದ ಶಕುಂತಲಾದೇವಿ.

ಇವರು ಶಾಲೆಗೆ ಹೋಗಿ ನಮ್ಮ ಹಾಗೆ ಸಾಂಪ್ರದಾಯಕ ಶಿಕ್ಷಣವನ್ನು ಪಡೆದವರಲ್ಲ. ಭಾರತಲ್ಲೆಲ್ಲಾ ಪ್ರವಾಸ ಮಾಡಿ ಸಾರ್ವಜನಿಕ ಪ್ರದರ್ಶನಗಳನ್ನು ನೀಡಿದ್ದಾರೆ. ರೇಡಿಯೋ ಟಿ.ವಿ.ಗಳಿಗೆ ಸಂದರ್ಶನವನ್ನು ಕೊಟ್ಟಿದ್ದಾರೆ.

೧೯೫೦ನೇ ಇಸವಿಯಲ್ಲಿ ಇವರು ವಿದೇಶ ಪ್ರವಾಸ ಮಾಡಿದರು. ಪಶ್ಚಿಮ ಜರ್ಮನಿಗೆ ಹೋದಾಗ, ಮರ್ಸಿಡಿಸ್-ಬೆಂಜ್ ಎಂಬ ಪ್ರಖ್ಯಾತ ಕಾರು ತಯಾರಿಕಾ ಸಂಸ್ಥೆಗೆ ಭೇಟಿ ಕೊಟ್ಟಿದ್ದರು. ಅಲ್ಲಿದ್ದ ಕಂಪ್ಯೂಟರುಗಳನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದಾಗ, ಆ ಕಂಪನಿಯ ಮ್ಯಾನೇಜರು, ಯಂತ್ರದೊಡನೆ ಸ್ಪರ್ಧಿಸಿ ಗೆದ್ದರೆ ಮರ್ಸಿಡಿಸ್ ಕಾರನ್ನು ಬಹುಮಾನವಾಗಿ ಕೊಡುತ್ತೇನೆಂದು ಹೇಳಿದಾಗ ಶಕುಂತಲಾದೇವಿ ತಾವು ಕಂಪ್ಯೂಟರಿಗಿಂತ ವೇಗವಾಗಿ ಉತ್ತರ ಹೇಳುವೆನೆಂದು ಸವಾಲು ಹಾಕಿದರು. ಮೊದಲನೆಯ ಹೆಜ್ಜೆಯಾಗಿ ಕಂಪ್ಯೂಟರಿಗೆ ಕೊಟ್ಟ ಸಮಸ್ಯೆಯಲ್ಲೇ ತಪ್ಪಿರುವುದೆಂದು ತೋರಿಸಿಕೊಟ್ಟರು. ಭಾರತದ ಈ ಅದ್ಭುತ ಪ್ರತಿಭೆಯನ್ನು ನೋಡಿ ಜರ್ಮನ್ನರು ಮೂಕವಿಸ್ಮಿತರಾದರು.

ಇಂಥ ಮಾನವ ಗಣಕಯಂತ್ರ ಜಗತ್ತಿನಲ್ಲಿ ಬೇರೊಂದಿಲ್ಲ. ಆ ಕೀರ್ತಿ ಭಾರತಕ್ಕೆ.

• ಡಿ.ಜೆ. ರಾವ್



ಈಗ ದೊರೆತ ಪ್ರಾಚೀನ ಕಾಲದ ಚದುರಂಗದಾಟದ ಕಾಯಿಗಳು ಎರಡನೆಯ ಶತಮಾನಕ್ಕೆ ಸೇರಿದವು ಎಂದು ಗುರುತಿಸಲಾಗಿದೆ. ಆದರೆ ಐದನೆಯ ಶತಮಾನದಲ್ಲಿ ಹಿಂದುಗಳು ಈ ಆಟವನ್ನು ಸಂಪೂರ್ಣವಾಗಿ ಬಲ್ಲವರಾಗಿದ್ದರು. ಈ ಆಟವು ಭಾರತದಿಂದಲೇ ಪರ್ಶಿಯಾ ಹಾಗೂ ಅರಬ್ ದೇಶಗಳ ಮುಖಾಂತರ ಯುರೋಪ್ ದೇಶಗಳನ್ನೂ ತಲುಪಿತ್ತು.

ಇಲಿಮರಿಗಿಂತಲೂ ಚಿಕ್ಕದಾದ ಪುಟಾಣಿ ಇಲಿ ಪೂರ್ವ ಆಫ್ರಿಕದ ಉಷ್ಣಪ್ರದೇಶಗಳಲ್ಲಿ ವಾಸಿಸುತ್ತದೆ. ಅದೆಷ್ಟು ಚಿಕ್ಕದು ಗೊತ್ತೆ? ನಿಮ್ಮ ಚಹದ ಚಮಚೆಯಲ್ಲಿ ಅದು ಸಲೀಸಾಗಿ ಕುಳಿತುಕೊಳ್ಳಬಲ್ಲದು. ಕಲ್ಲುಗಳ ಅಡಿಯಲ್ಲಿನ ಬಿಲನಲ್ಲೇ ಅದರ ವಾಸ. ಅದು ಕುಡಿಯುವಷ್ಟು ಸ್ವಚ್ಛವಾದ ನೀರನ್ನು ಕ್ವಚಿತ್ತಾಗಿಯೆ ಉಳಿದ ಪ್ರಾಣಿಗಳು ಕುಡಿದಾವು. ಪೂರ್ವ ಆಫ್ರಿಕದಲ್ಲಿ ಹಗಲಿನಲ್ಲಿ ಎಷ್ಟು ಸೆಕೆಯೋ ರಾತ್ರಿಯಲ್ಲಿ ಅಷ್ಟೇ ಚಳಿ. ಬಿಲದ ಮೇಲಿರುವ ಕಲ್ಲುಗಳ ಮೇಲೆ ರೂಪುಗೊಂಡ ಇಬ್ಬನಿಯ ಹನಿಗಳನ್ನು ಕುಡಿದೇ ಆ ಪುಟಾಣಿ ಇಲಿ ತೃಷೆಯನ್ನು ನೀಗಿಸಿಕೊಳ್ಳುತ್ತದೆ.

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಪ್ರತೀಕಾಶ
(ಅ) ಹೋಲಿಕೆ
(ಆ) ಸೇಡು ತೀರಿಸುವಿಕೆ
(ಇ) ಹಗ್ಗ
(ಈ) ಬೆಳಕು

೨. ಪ್ರಮದೆ
(ಅ) ತಪ್ಪು
(ಆ) ಸಂತೋಷ
(ಇ) ಸುಂದರಿ ತರುಣಿ
(ಈ) ಹುಚ್ಚಿ

೩. ಪ್ರಮೋದ
(ಅ) ನಿದ್ದೆ
(ಆ) ಸಂತೋಷ
(ಇ) ಭಾರಿ ಭ್ರಮೆ
(ಈ) ದೊಡ್ಡ ತಪ್ಪು

೪. ಪೌರ
(ಅ) ತುಂಟ ಹುಡುಗ
(ಆ) ಬೆಳಗು
(ಇ) ಪಟ್ಟಣಿಗ
(ಈ) ತುಂಬಿ ತುಳುಕುವ

೫. ಪೇಶಿ
(ಅ) ಬಣ್ಣಗೆಟ್ಟ
(ಆ) ಹಿಟ್ಟು
(ಇ) ಮಾಂಸದ ತುಣುಕು
(ಈ) ಕಳೆಯುಳ್ಳ

೬. ವಿತುಷ್ಟ
(ಅ) ಸಮಾಧಾನಗೊಂಡವ
(ಆ) ಕೊಬ್ಬಿದ
(ಇ) ನೀರಡಿಕೆಯಾದ
(ಈ) ಅಸಮಾಧಾನಗೊಂಡ

೭. ವಿಕಿರಣ
(ಅ) ವಿಕಾರ
(ಆ) ಕೆದರಿ ಬೀಳುವಿಕೆ
(ಇ) ಅಂಗಹೀನ
(ಈ) ಬೆಳೆಯುವಿಕೆ

೮. ವಾಸ್ತು
(ಅ) ಹಾಗೇ ಆಗಲಿ
(ಆ) ಪರಿಮಳ
(ಇ) ಹಾಳು
(ಈ) ಕಟ್ಟಡ

೯. ವಾಚಿಕ
(ಅ) ಬೈಗಳು
(ಆ) ಮಾತಿನ
(ಇ) ಕುದುರೆಯ
(ಈ) ಒಂದು ವರ್ಷದ

೧೦. ನಿರಪೇಕ್ಷ
(ಅ) ಇನ್ನೊಂದರ ಅಗತ್ಯವಿಲ್ಲದ
(ಆ) ಅಸಡ್ಡೆಯಿಲ್ಲದ
(ಇ) ಬಹಳ ಶ್ರಮ ಪಟ್ಟ
(ಈ) ಕಣ್ಣು ಕಾಣದ

೧೧. ನಿಯೋಗ
(ಅ) ಬಿಡುಗಡೆ
(ಆ) ಸಮರ್ಪಣೆ
(ಇ) ಅಗಲಿಕೆ
(ಈ) ನೇಮಕ

೧೨. ನಿಕರ್ತನ
(ಅ) ತುಂಡರಿಸುವಿಕೆ
(ಆ) ಗುದ್ದುವುದು
(ಇ) ಹೂಳುವುದು
(ಈ) ಮನೆ

## ಶಬ್ದ ಭಂಡಾರದ ಸರಿಯಾದ ಅರ್ಥಗಳು

**೧. ಪ್ರತೀಕಾಶ**

(ಅ) ಹೋಲಿಕೆ, ತೋರಿಕೆ; ಪ್ರತಿಬಿಂಬ. ಉದಾ- ಅವನ ಚಂದ್ರಬಿಂಬ ಪ್ರತೀಕಾಶವಾದ ಮುಖ (ಸಂ.)

**೨. ಪ್ರಮದೆ**

(ಇ) ಸುಂದರಿಯಾದ ತರುಣಿ, ಯುವತಿ, ಪ್ರಾಯದ ಹೆಂಗಸು; ಹೆಂಗಸು (ಸಂ. ಪ್ರಮದಾ)

**೩. ಪ್ರಮೋದ**

(ಅ) ಸಂತೋಷ, ಆನಂದ, ಹುಮ್ಮಸ್ಸು, ಉತ್ಸಾಹ; ತೀವ್ರವಾದ ಸುಗಂಧ. (ಸಂ. ಪ್ರ = ಹೆಚ್ಚಾದ, ಮೋದ = ಆನಂದ)

**೪. ಪೌರ**

(ಇ) ಪಟ್ಟಣಿಗ, ನಗರವಾಸಿ, ನಾಗರಿಕ; ಪಟ್ಟಣದಲ್ಲಿ ಸಿದ್ಧವಾದ. ಪೌರ-ಜಾನಪದ ಎಂದರೆ ಪಟ್ಟಣ ಮತ್ತು ಹಳ್ಳಿಗೆ ಸಂಬಂಧಿಸಿದ. (ಸಂ. ಪುರ = ಪಟ್ಟಣದಿಂದ)

**೫. ಪೇಶಿ**

(ಇ) ಮಾಂಸದ ತುಣುಕು; ಮಾಂಸಖಂಡ, ಸ್ನಾಯು (ಸಂ.)

**೬. ವಿತುಷ್ಟ**

(ಈ) ಅಸಮಾಧಾನಗೊಂಡ, ಅಸಂತುಷ್ಟ. ಉದಾ- ವಿತುಷ್ಟವಾದ ಜನತೆಯನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಕಷ್ಟ (ಸಂ.)

**೭. ವಿಕಿರಣ**

(ಅ) ಕೆದರಿ ಬೀಳುವಿಕೆ; ಚದರುವಿಕೆ, ಸುತ್ತಲೂ ಪಸರಿಸುವಿಕೆ; ಪ್ರಕಾಶ, ರೇಡಿಯೋ ಅಲೆಗಳೇ ಮೊದಲಾದವುಗಳ ಹಬ್ಬುವಿಕೆ (ಸಂ. ಕಿರ್ = ಚದರು-ಎಂಬುದರಿಂದ)

**೮. ವಾಸ್ತು**

(ಈ) ಕಟ್ಟಡ, ಮನೆ; ಕಟ್ಟಡಕ್ಕಾಗಿ ಆರಿಸಿದ ಸ್ಥಳ. ವಾಸ್ತು ಶಿಲ್ಪ ಎಂದರೆ ದೇವಾಲಯ, ಕಟ್ಟಡ ಮೊದಲಾದವುಗಳನ್ನು ಕಟ್ಟುವ ಕಲೆ. (ಸಂ. ವಸ್ = ಇರು ಎಂಬುವದರಿಂದ

**೯. ವಾಚಿಕ**

(ಅ) ಮಾತಿನ, ಮಾತಿನ ಮೂಲಕವಾದ; ಬಾಯಿಂದ ಹೇಳಿದ. ಶಾಬ್ದಿಕ. ಉದಾ- ವಾಚಿಕ ಪಾಪ ಎಂದರೆ ಮಾತಿನ ಮೂಲಕ ಮಾಡಿದ ಪಾಪ; ವಾಚಿಕ ಸಂದೇಶ ಎಂದರೆ ಬಾಯಿಂದಲೇ ಹೇಳಿಕಳಿಸಿದ್ದು (ಲಿಖಿತವಲ್ಲ) (ಸಂ. ವಾಚ್= ಮಾತು-ಇಂದ)

**೧೦. ನಿರಪೇಕ್ಷ**

(ಅ) ಇನ್ನೊಂದರ ಸಹಾಯ ಅಗತ್ಯವಿಲ್ಲದ; ಸ್ವತಂತ್ರವಾದ; ಆಸೆಯಿಲ್ಲದ ಉದಾ- ಪ್ರಪಂಚದಲ್ಲಿ ದೇವನೊಬ್ಬನೆ ನಿರಪೇಕ್ಷ ಎಂದರೆ ಅವನೊಬ್ಬನಿಗೇ ಮತ್ತಾರ ಸಹಾಯ ಬೇಕಿಲ್ಲ. ನಿರಪೇಕ್ಷ ಭಾವದಿಂದ ಎಂದರೆ ಯಾವ ಆಸೆಯೂ ಇಲ್ಲದೆಯೆ. (ಸಂ.)

**೧೧. ನಿಯೋಗ**

(ಈ) ನೇಮಕ; ಇನ್ನೊಬ್ಬರ ಬದಲಿಗೆ ಪ್ರತಿನಿಧಿಯಾಗಿ ಕೆಲಸ ಮಾಡುವುದು; ಪ್ರತಿನಿಧಿಗಳ ಗುಂಪು. ಉದಾ- ಮಂತ್ರಿಗಳ ಕಡೆಗೆ ಒಂದು ನಿಯೋಗ ಒಯ್ದರು. (ಸಂ.)

**೧೨. ನಿಕರ್ತನ**

(ಅ) ತುಂಡರಿಸುವಿಕೆ, ಕತ್ತರಿಸುವಿಕೆ; ಹರಿದು ಹಾಕುವಿಕೆ. (ಸಂ.)



### ನಿಮ್ಮ ಶಬ್ದ ಶಕ್ತಿಯ ತರಗತಿ

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | |
|---|---|
| ೬-೮ ಸರಿಯಿದ್ದರೆ... | ಸಾಧಾರಣ |
| ೯-೧೦ ಸರಿಯಿದ್ದರೆ... | ಉತ್ತಮ |
| ೧೧-೧೨ ಸರಿಯಿದ್ದರೆ... | ಅತ್ಯುತ್ತಮ |

# ಭಾರತೀಯ ವ್ಯಕ್ತಿತ್ವ:

## ವಿಜ್ಞಾನಿಗಳು ಕಾಣುವಂತೆ

ಡಾ. ಈ. ಸ್ಪ್ರಾಟ್ ಈ ಶತಮಾನದ ಪೂರ್ವಾರ್ಧದಲ್ಲಿ ಮೈಸೂರಿನಲ್ಲಿದ್ದ ಮನೋವಿಜ್ಞಾನಿ. ಭಾರತೀಯ ಇತಿಹಾಸ, ಪುರಾಣ ಮತ್ತು ಜಾನಪದ ಪರಂ. ಪರೆಯನ್ನು ಆಳವಾಗಿ ಅಭ್ಯಸಿಸಿ ಭಾರತೀಯ ವ್ಯಕ್ತಿತ್ವವನ್ನು ಸೈಕೊ ಅನೆಲಿಸಿಸ್‌ನ ತತ್ವಗಳ ಆಧಾರದಿಂದ ವಿಶ್ಲೇಷಿಸಿ 'ಹಿಂದು ಪರ್ಸನಾಲಿಟಿ' ಎಂಬ ಕೃತಿಯನ್ನು ಬರೆದಿದ್ದಾರೆ. ಡಾ. ನಾರ್ಮನ್ ಕೆಮೆರಾನ್‌ರ (Psychopathology and Personality Development) ಎಂಬುದು ಮನೋವಿಶ್ಲೇಷಣೆಯ ತತ್ವಗಳ ಆಧಾರದ ಮೇಲೆ ಮನೋಶಾಸ್ತ್ರ ಮತ್ತು ವ್ಯಕ್ತಿತ್ವ ವಿಕಾಸ ಪ್ರಕ್ರಿಯೆಯನ್ನು ದಾಖಲಿಸುವ ಗ್ರಂಥ. ಇದು ಮನೋವಿಕಾರ ಶಾಸ್ತ್ರದ ಪ್ರಮಾಣ ಗ್ರಂಥಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಈ ಲೇಖನವನ್ನು ಇವೆರಡೂ ಗ್ರಂಥಗಳ ಆಧಾರದಿಂದ ಸಿದ್ಧಪಡಿಸಲಾಗಿದೆ.

• ಡಾ. ಪ್ರಕಾಶ ಕೊಣ್ಣೂರ

### ಕ್ರಿಸ್ತಪೂರ್ವ ಮೂರನೆಯ ಶತಮಾನ.

ಮೌರ್ಯ ಚಕ್ರವರ್ತಿ ಅಶೋಕ ತನ್ನ ತಾತ ಅಶೋಕ ಮತ್ತು ತಂದೆ ಬಿಂದುಸಾರರು ಕಟ್ಟಿದ ಮೌರ್ಯ ಸಾಮ್ರಾಜ್ಯವನ್ನು ವಿಸ್ತರಿಸುವ ಗುರಿಯಿಟ್ಟುಕೊಂಡು ಭಾರತ ಮತ್ತು ಸುತ್ತಮುತ್ತಲಿನ ಬಹುದೊಡ್ಡ ಪ್ರದೇಶವನ್ನು ಜಯಿಸಿದ. ತನ್ನ ಅಂಕೆಗೆ ಬಾರದಿದ್ದ ಕಳಿಂಗ ರಾಜ್ಯವನ್ನು ಜಯಿಸಲು ನಿರ್ಧರಿಸಿ ರಕ್ತದ ಕಾಲುವೆಯನ್ನೇ ಹರಿಸಿ ಯುದ್ಧ ಮಾಡಿ ಜಯಶಾಲಿಯಾದ. ಯುದ್ಧದ ಭೀಕರತೆಯನ್ನು ಮನಗಂಡು ಪಶ್ಚಾತ್ತಾಪಪಟ್ಟು ಇನ್ನು ಮುಂದೆ ಎಂದಿಗೂ ಕತ್ತಿಯನ್ನೆತ್ತುವುದಿಲ್ಲವೆಂದು ಪ್ರತಿಜ್ಞೆ ಮಾಡಿದ. ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿ ಅಹಿಂಸೆಯನ್ನೇ ಕೇಂದ್ರ ಬಿಂದುವನ್ನಾಗಿ ಮಾಡಿಕೊಂಡು ಸಾಮ್ರಾಜ್ಯವನ್ನಾಳಿದ. ಆದರೆ ಅಹಿಂಸೆಯ ಅವನ ತತ್ವವನ್ನು ಅಕ್ಷರಶಃ ಅನುಸರಿಸಿ ರಾಜ್ಯವಾಳಿದ ಆತನ ಸಂತತಿಗೆ ಆ ಸಾಮ್ರಾಜ್ಯವನ್ನು ಉಳಿಸಿಕೊಳ್ಳುವದಾಗಲಿಲ್ಲ. ಅನತಿ ಕಾಲದಲ್ಲಿಯೇ ಸಾಮಂತರು ಸ್ವತಂತ್ರರಾಗಿ ಏಕಚಕ್ರಾಧಿಪತ್ಯ ನಾಶವಾಗಿ ಹೋಯಿತು.

### ಹನ್ನೆರಡನೆಯ ಶತಮಾನ.

ದಿಲ್ಲಿಯ ದೊರೆ ಪೃಥ್ವೀರಾಜ್ ಚವ್ಹಾಣ ಮಧ್ಯ ಏಶಿಯದಿಂದ ದಾಳಿಯಿಟ್ಟ ಘೋರಿ ಮಹಮ್ಮದನನ್ನು ಸತತವಾಗಿ ಏಳು ಸಲ ಯುದ್ಧದಲ್ಲಿ ಸೋಲಿಸಿದ. ಶರಣುಬಂದ ಅವನನ್ನು ಕ್ಷಮಿಸಿ ಜೀವದಾನ ಮಾಡಿ ಕಳಿಸಿದ. ಎಂಟನೆಯ ಸಲ ಘೋರಿ ಮಹಮ್ಮದನು ಪೃಥ್ವೀರಾಜನ ಸಂಬಂಧಿಯಾದ ಜಯಚಂದನ ಜೊತೆಗೂಡಿ ಮತ್ತೆ ದಾಳಿ ಮಾಡಿದ. ಯುದ್ಧವನ್ನು ಗೆದ್ದು ಉತ್ತರ ಭಾರತದಲ್ಲಿ

ಪರಕೀಯರ ರಾಜ್ಯ ಸ್ಥಾಪನೆಯ ನಾಂದಿಹಾಡಿದ.

## ಹದಿನೆಂಟನೆಯ ಶತಮಾನದ ಕೊನೆಯ ಭಾಗ....

ಮೊಗಲರ ಅವನತಿಯ ಕಾಲ ಆರಂಭವಾಗಿ ಆಗಲೇ ದಶಕಗಳು ಉರುಳಿದ್ದವು. ಭಾರತವನ್ನು ಉತ್ತರದಲ್ಲಿ ಮರಾಠರು, ದಕ್ಷಿಣದಲ್ಲಿ ನಿಜಾಮ ಮತ್ತು ಟಿಪ್ಪುಸುಲ್ತಾನರು ಆಳಲು ಆರಂಭಿಸಿದ್ದ ಕಾಲ ಅದು. ವ್ಯಾಪಾರಿಗಳಾಗಿ ಬಂದ ಬ್ರಿಟಿಶರು ಭಾರತದ ರಾಜಕೀಯ ಕ್ಷಿತಿಜದಲ್ಲಿ ತಮ್ಮ ಇರುವನ್ನು ದಾಖಲಿಸಿ ನಾಲ್ಕನೆಯ ಪ್ರಬಲ ರಾಜಕೀಯ ಶಕ್ತಿಯಾಗಿ ಉದಯಿಸಿದ್ದರು. ಬ್ರಿಟಿಶರಿಂದ ತಮ್ಮ ರಾಜ್ಯಗಳಿಗೆ ಒದಗಬಹುದಾದ ಅನಾಹುತಗಳ ಬಗ್ಗೆ ಪೇಶ್ವೆ, ನಿಜಾಮ ಮತ್ತು ಟಿಪ್ಪುಸುಲ್ತಾನರು ಚಿಂತಾಕ್ರಾಂತರಾಗಿದ್ದರು. ಟಿಪ್ಪು ಈ ಬಗ್ಗೆ ಪೇಶ್ವೆ ಮತ್ತು ನಿಜಾಮರನ್ನು ಸಂಪರ್ಕಿಸಿಯೂ ಇದ್ದ. ಆದರೆ ಒಂದುಗೂಡಿ ಬ್ರಿಟಿಷರನ್ನು ಬಗ್ಗು ಬಡಿಯುವ ಯೋಜನೆ ಪೇಶ್ವೆಯವರ ಉದಾಸೀನತೆಯಿಂದಾಗಿ ಕಾರ್ಯಗತವಾಗದೇ ಹೋಯಿತು. ಈ ಸಂಧಿಯನ್ನು ಉಪಯೋಗಿಸಿದ ಬ್ರಿಟಿಶರು, ಅವರೆಲ್ಲರೂ ಒಟ್ಟುಗೂಡದಂತೆ ನೋಡಿಕೊಂಡು, ಒಬ್ಬೊಬ್ಬರನ್ನಾಗಿ ಮುಗಿಸಿ, ಇಡಿ ಭಾರತದ ಮೇಲೆ ತಮ್ಮ ಪ್ರಭಾವವನ್ನು ವಿಸ್ತರಿಸಿಕೊಂಡರು.

## ೧೯೩೦ರ ದಶಕ

೧೯೩೭ರ ಮೊದಲನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಬಹಳಷ್ಟು ರಾಜ್ಯಗಳಲ್ಲಿ ಕಾಂಗ್ರೆಸ್ಸು ಜಯಶಾಲಿಯಾಗಿ ತನ್ನ ಮಂತ್ರಿಮಂಡಳಗಳನ್ನು ಸ್ಥಾಪಿಸಿಕೊಂಡಿತು. ೧೯೩೯ರಲ್ಲಿ ಕಾಂಗ್ರೆಸ್ಸಿನ ಅಭಿಪ್ರಾಯವನ್ನು ಕೇಳದೇ ವೈಸ್‌ರಾಯರು ಭಾರತವನ್ನು ಜರ್ಮನಿಯ ವಿರುದ್ಧ ಎರಡನೆಯ ಮಹಾಯುದ್ಧದಲ್ಲಿ ನೂಕಿದರು. ಈ ಅವಸರದ ಕ್ರಮವನ್ನು ವಿರೋಧಿಸಿದ ಕಾಂಗ್ರೆಸ್ ಸರಕಾರಗಳು ಅದಕ್ಕಿಂತಲೂ ಅವಸರದಿಂದ ರಾಜೀನಾಮೆ ಸಲ್ಲಿಸಿ ಅಧಿಕಾರದಿಂದ ಹೊರಗೆ ಬಂದವು. ಈ ಸಂಧಿ ಸಮಯದಲ್ಲಿ ರಾಜೀನಾಮೆಯ ಈ ಕ್ರಮದಿಂದ ಭಾರತೀಯರು ಹಾನಿಯಾಯಿತೇ ಹೊರತು ಯಾವ ಲಾಭವೂ ಆಗಲಿಲ್ಲ.

## ೧೯೭೨

ಭಾರತವು ಬಾಂಗ್ಲಾ ದೇಶದ ಯುದ್ಧದಲ್ಲಿ ಪಾಕಿಸ್ತಾನದ ಮೇಲೆ ನಿರ್ಣಾಯಕ ವಿಜಯ ಸಾಧಿಸಿ ತೊಂಭತ್ತು ಸಾವಿರ ಪಾಕಿಸ್ತಾನೀ ಸೈನಿಕರನ್ನು ಸೆರೆಯಾಳುಗಳನ್ನಾಗಿ ಮಾಡಿಕೊಂಡಿತು. ಇದರ ಲಾಭಪಡೆದು ಪಾಕಿಸ್ತಾನದ ಮೇಲೆ ಗಟ್ಟಿಯಾದ ಒತ್ತಡ ತಂದು, ಕಾಶ್ಮೀರದಲ್ಲಿ ಅದು ಅತಿಕ್ರಮಿಸಿದ್ದ ಭಾಗವನ್ನು ತೆರವು ಮಾಡಿಸಲು ಸಾಧ್ಯವಿತ್ತು. ಆದರೆ ಹಾಗಾಗಲಿಲ್ಲ.

ಮೇಲೆ ವಿವರಿಸಿದ ಐದು ಘಟನೆಗಳು ಭಾರತೀಯ ಇತಿಹಾಸದ ಕೆಲವು ಮುಖ್ಯ ತಿರುವುಗಳು. ಈ ಐದೂ ಘಟನೆಗಳು ಏನನ್ನು ಸೂಚಿಸುತ್ತವೆ? ಈ ಕೆಳಗೆ ನಮೂದಿಸಿದಂತೆಯೆ?

೧) ಭಾರತೀಯರು ಅವ್ಯಾವಹಾರಿಕ ಧ್ಯೇಯ ವಾದಿಗಳು.
೨) ಆತ್ಮಕೇಂದ್ರಿತ ಸ್ವಾರ್ಥವಾದಿಗಳು
೩) ವಿಚಾರರಹಿತ ಆಚಾರವಾದಿಗಳು ಹಾಗೂ
೪) ಮೃದು ಮನಸ್ಸಿನ ಕ್ಷಮಾಗುಣಿಗಳು.

ಈಗ ಈ ಕೆಳಗಿನ ವಿವರಣೆಯನ್ನು ನೋಡಿ:

೧) ಪ್ರಾಚೀನ ದೇಶಗಳಾದ ಇಜಿಪ್ತ್, ಗ್ರೀಸ್, ರೋಮ್, ಮೆಸೋಪೊಟೇಮಿಯ ಮುಂತಾದ ದೇಶಗಳ ಪ್ರಾಚೀನ ನಾಗರಿಕತೆಗಳು ಪೂರ್ತಿ ಕುಸಿದುಹೋಗಿ ಅವುಗಳ ಸ್ಥಾನವನ್ನು ಇಡಿಯಾಗಿ ಹೊಸ ಮತ್ತು ಹೊರಗಿನಿಂದ ಬಂದ ಧರ್ಮ ಮತ್ತು ಸಂಸ್ಕೃತಿಗಳು ಆಕ್ರಮಿಸಿಕೊಂಡಿವೆ. ಇಪ್ಪತ್ತನೆಯ ಶತಮಾನದ ವರೆಗೂ ಚೀನ, ಭಾರತಗಳು ಮಾತ್ರ ತಮ್ಮ ಧರ್ಮ ಮತ್ತು ಸಂಸ್ಕೃತಿಯನ್ನು ಉಳಿಸಿಕೊಂಡಿದ್ದವು. ಇಪ್ಪತ್ತನೆಯ ಶತಮಾನದ ಮಧ್ಯದಲ್ಲಿ ಚೀನವು ಯುರೋಪಿನಿಂದ ಬಂದ ಕಮ್ಯೂನಿಸ್ಟ್ ಸಿದ್ಧಾಂತವನ್ನು ಅಂಗೀಕರಿಸಿತು. ಹೀಗೆ ಪ್ರಾಚೀನ ರಾಷ್ಟ್ರಗಳ ಪೈಕಿ ತನ್ನ ಧರ್ಮ ಮತ್ತು ಸಂಸ್ಕೃತಿಯನ್ನು ಅವ್ಯಾಹತವಾಗಿ ಇಂದಿಗೂ ಉಳಿಸಿಕೊಂಡು ಬಂದಿರುವ ದೇಶವೆಂದರೆ ಭಾರತವೊಂದೆ.

೨) ಜಗತ್ತಿನ ಎಲ್ಲಾ ದೇಶಗಳಲ್ಲಿ ಇತಿಹಾಸದ ಉದ್ದಕ್ಕೂ ಧರ್ಮಗಳ ಘರ್ಷಣೆಯಲ್ಲಿ ರಕ್ತದ ಹೊಳೆಯೇ ಹರಿದಿದೆ. ಮುಸ್ಲಿಮರು- ಕ್ರಿಶ್ಚಿಯನ್ನರು, ಕ್ರಿಶ್ಚಿಯನ್ನರು-ಯಹೂದ್ಯರು- ಮತ್ತು ಯಹೂ

ದ್ಯರು-ಮುಸ್ಲಿಮರ ಸಂಬಂಧ ಇತಿಹಾಸದ ಉದ್ದಕ್ಕೂ ಯುದ್ಧ ಮತ್ತು ಕೋಟ್ಯಂತರ ಜನರ ಹತ್ಯೆಯ ಕಥೆಯೇ ಆಗಿದೆ. ಇದಕ್ಕೆ ಪ್ರತಿಯಾಗಿ ಭಾರತದಲ್ಲಿ ಇಲ್ಲಿಯ ಸ್ಥಳೀಯ ಧರ್ಮಗಳಾದ ವೈದಿಕ, ಬೌದ್ಧ ಮತ್ತು ಜೈನ ಧರ್ಮಗಳ ನಡುವಿನ ಸಂಬಂಧ ಕೆಲವು ಸಣ್ಣ ಪುಟ್ಟ ಕಾಲಖಂಡಗಳನ್ನು ಹೊರತುಪಡಿಸಿದರೆ ಸಾಹಾರ್ದಯುತವೂ ಸಹನೆಯಿಂದ ಕೂಡಿದ್ದೂ ಆಗಿದೆ. ಭಾರತದ ಧರ್ಮಗಳಲ್ಲಿಯ ತತ್ವಭೇದ ಏನೇ ಇದ್ದರೂ ಅದು ರಕ್ತದ ಕಾಲುವೆಗಳಲ್ಲಿ ಪರಿವರ್ತಿತವಾಗಲಿಲ್ಲ.

೩) ಜಗತ್ತಿನ ಇತಿಹಾಸದಲ್ಲಿ ಎಲ್ಲಕ್ಕೂ ಹೆಚ್ಚು ಕಾಲ ಅಂದರೆ ಏಳೆಂಟು ನೂರು ವರ್ಷಗಳ ಕಾಲ ಪರಕೀಯರ ಆಳ್ವಿಕೆಗೆ ಒಳಗಾಗಿ ದಾಸ್ಯವನ್ನು ಅನುಭವಿಸಿರುವ ದೇಶವೆಂದರೆ ಭಾರತವೊಂದೆ. ಆದರೂ ಅದು ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳಲಿಲ್ಲ.

ಮೇಲಿನ ಮೂರು ಅಂಶಗಳು ಭಾರತದ ಅಂತಃಶಕ್ತಿಯ, ಅದರ ಒಳ್ಳೆಯ ಗುಣಗಳ ನಿದರ್ಶನ ಎನ್ನಬಹುದೆ?

ಆಧುನಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಮೇಲಿನ ಉದಾಹರಣೆಗಳನ್ನು ಅವಲೋಕಿಸಿದಾಗ ನಮ್ಮ ಎಲ್ಲ ದೌರ್ಬಲ್ಯ ಮತ್ತು ಶಕ್ತಿಗಳಿಗೆ ಸಾಮಾನ್ಯವಾಗಿರುವ ಗುಣವೊಂದು ಎದ್ದುಕಾಣುತ್ತದೆ. ಅದೆಂದರೆ ಭಾರತೀಯರ ಆತ್ಮರತಿ ವ್ಯಕ್ತಿತ್ವ.

ಆತ್ಮರತಿಯೆಂದರೆ ಬಳಕೆಯ ಭಾಷೆಯಲ್ಲಿ ತನ್ನನ್ನೇ ತಾನು ಪ್ರೀತಿಸಿಕೊಳ್ಳುವುದು ಎಂದರ್ಥ. ಹಾಗಾದರೆ ಆತ್ಮರತಿ ವ್ಯಕ್ತಿತ್ವವೆಂದರೇನು?

ಮಾನಸಿಕ ವ್ಯಾಪಾರಗಳಲ್ಲಿ ಕ್ರಿಯಾತ್ಮಕವಾಗಿರುವ ಶಕ್ತಿಗೆ ನಾವು ಮನೋರೇತಸ್ಸು (Libido) ಎಂದು ಕರೆಯುತ್ತೇವೆ. ಈ ಮನೋರೇತಸ್ಸು ಲೈಂಗಿಕ ಶಕ್ತಿಯ ಮಾನಸಿಕ ಸ್ವರೂಪವೆನ್ನಬಹುದು. ಮನೋರೇತಸ್ಸು ತನ್ನ ತೇಜವನ್ನು ಹಲವು ಹತ್ತು ದಿಕ್ಕುಗಳಲ್ಲಿ ಹರಿಬಿಡುತ್ತದೆ. ಅದು ತನ್ನ ತೇಜವನ್ನು ವ್ಯಕ್ತಿಯ ಅಹಮಿಕ್ಕೆ (ego) ಮೇಲೆಯೇ ಕೇಂದ್ರೀಕರಿಸಿದಾಗ ಆತ್ಮರತಿ ವ್ಯಕ್ತಿತ್ವದ ಉದಯವಾಗುತ್ತದೆ. ಇದು ಸಂಪೂರ್ಣವಾಗಿ ಸುಪ್ತಮನಸ್ಸಿನಲ್ಲಿ ನಡೆಯುವ ಕ್ರಿಯೆ.

ಸಿಗ್ಮಂಡ್ ಫ್ರಾಯ್ಡ್‌ರ ಆಧುನಿಕ ಮನೋವಿಜ್ಞಾನದ ಪ್ರಕಾರ ಮನಸ್ಸಿನ ಎರಡು ಪ್ರಮುಖ ಸ್ಥಿತಿಗಳು- ೧) ಲೈಂಗಿಕತೆ ಮತ್ತು ೨) ಆಕ್ರಮಣಶೀಲತೆಗಳು. ಭಾರತೀಯರ ಮನಸ್ಸನ್ನು ಹೆಚ್ಚಾಗಿ ಆವರಿಸಿರುವ ಸ್ಥಿತಿ ಲೈಂಗಿಕತೆ. ಯುರೋಪಿಯನ್ ಮನಸ್ಸು ಲೈಂಗಿಕತೆಗಿಂತ ಹೆಚ್ಚಾಗಿ ಆಕ್ರಮಣಶೀಲತೆಯತ್ತ ವಾಲುತ್ತದೆ. ಮನೋವಿಶ್ಲೇಷಣೆಯ ಪ್ರಕಾರ ಲೈಂಗಿಕತೆ ಹೆಚ್ಚು ಪ್ರಭಾವಶಾಲಿಯಾಗಿರುವ ಮನಸ್ಸು 'ಮಾತೃಕೇಂದ್ರಿತ'ವಾಗಿರುತ್ತದೆ ಅಂದರೆ ತಾಯಿಯಿಂದ ತನ್ನ ಸ್ಫೂರ್ತಿಯನ್ನು ಪಡೆಯುತ್ತದೆ. ಆಕ್ರಮಣಶೀಲತೆಯೇ ಹೆಚ್ಚು ಪ್ರಧಾನವಾಗಿರುವ ಮನಸ್ಸು 'ಪಿತೃಕೇಂದ್ರಿತ'ವಾಗಿರುತ್ತದೆ ಅಂದರೆ ತಂದೆಯಿಂದ ತನ್ನ ಸ್ಫೂರ್ತಿಯನ್ನು ಪಡೆಯುತ್ತದೆ. ಭಾರತೀಯರ ಮಾತೃಕೇಂದ್ರಿತ ಮನಸ್ಸು ತನ್ನ ಲೈಂಗಿಕತೆಯನ್ನು ತನ್ನೆಡೆಗೇ ತಿರುಗಿಸುತ್ತದೆ. ಅಂದರೆ ಅದು ತನ್ನನ್ನು ತಾನೇ ಪ್ರೀತಿಸತೊಡಗುತ್ತದೆ. ಈ

> ಪ್ರತಿ ಮನುಷ್ಯನ 'ವ್ಯಕ್ತಿತ್ವ' ವೆನ್ನುವುದೇನು ಗೊತ್ತೆ? ಹೂವಿಗೆ ಅದರ 'ವಾಸನೆ' ಯಿದ್ದ ಹಾಗೆ.
>
> -ಚಾರ್ಲ್ಸ್ ಸ್ವಾಬ್

ತರಹದ ಆತ್ಮಪ್ರೀತಿಯುಳ್ಳ ಮನುಷ್ಯ ಹೆಚ್ಚು ಆದರ್ಶವಾದಿಯಾಗುತ್ತಾನೆ.

ಲೈಂಗಿಕತೆ ಮತ್ತು ಆಕ್ರಮಣಶೀಲತೆಗಳು ಒಂದಕ್ಕೊಂದು ವಿರುದ್ಧವಾದ ಮಾನಸಿಕ ಸ್ಥಿತಿಗಳು. ಭಾರತೀಯರಲ್ಲಿ ಲೈಂಗಿಕತೆಯ ಪ್ರಭಾವ ಹೆಚ್ಚಾಗಿರುವುದರಿಂದ ಆಕ್ರಮಣಶೀಲತೆಯ ಪ್ರಮಾಣ ಕಡಿಮೆ. ಆದರೆ ಅದು ಹೆಚ್ಚು ಪ್ರಭಾವಶಾಲಿಯಾಗಿರುವ ಯುರೋಪಿಯನ್ ಮನಸ್ಸು ತನ್ನಲ್ಲಿಯ ಆಕ್ರಾಮಕ ಪ್ರವೃತ್ತಿಯನ್ನು ತನ್ನ ಮೇಲೆಯೇ ಪ್ರಯೋಗಿಸಿಕೊಳ್ಳುತ್ತದೆ. ಅಂದರೆ ಸ್ವಯಂದಂಡನೆಯ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತದೆ. ತನಗೆ ಕೊಟ್ಟ ಕೆಲಸವನ್ನು ಸಾಧಿಸದಿದ್ದರೆ ತಂದೆ ಕೊಡಬಹುದಾದ ಶಿಕ್ಷೆಗೆ ಹೆದರುವ ಯುರೋಪಿಯನ್ ಒಳಮನಸ್ಸು ತಾನಿಟ್ಟುಕೊಂಡ ಆದರ್ಶಗಳನ್ನು ಸಾಧಿಸಲು ಹೆಣಗುತ್ತದೆ. ಆದರೆ ಭಾರತೀಯ ಮನಸ್ಸು ತಾನಿಟ್ಟುಕೊಂಡ ಗುರಿಗಳ

ಗಿಂತ ಹೆಚ್ಚಾಗಿ ತನ್ನನ್ನೇ ಪ್ರೀತಿಸಿಕೊಳ್ಳುವುದರಿಂದ ಭಾರತೀಯರಲ್ಲಿ ಸ್ವಯಂಸುಧಾರಣೆಯ ಹವ್ಯಾಸ ಹೆಚ್ಚು; ಸಾಮಾಜಿಕ ಗುರಿ ಸಾಧನೆಯ ಪ್ರವೃತ್ತಿ ಕಡಿಮೆ.

ಯುರೋಪಿಯನ್ ಆತ್ಮಪ್ರಜ್ಞೆ, ತಂದೆ ಅಥವಾ ದೇವರು ಕೊಡಬಹುದಾದ ಶಿಕ್ಷೆಯ ಹೆದರಿಕೆಯಿಂದ ಹುಟ್ಟಿದ್ದರೆ, ಭಾರತೀಯನ ಆತ್ಮಪ್ರಜ್ಞೆ ತನ್ನ ಸ್ವಂತದ ಮೇಲಿನ ಪ್ರೀತಿಯಿಂದ ಹುಟ್ಟಿದೆ. ಅಪರಾಧೀ ಮನೋಭಾವನೆ ಯುರೋಪಿಯನ್ ಪ್ರವೃತ್ತಿಯ ಪ್ರತೀಕ. ತನ್ನ ತಪ್ಪಿತಸ್ಥ ಮನಃಸ್ಥಿತಿಯ ಪ್ರಭಾವದಲ್ಲಿ ಮನಸ್ಸು ಹೊಸಹೊಸ ಸಾಧನೆಗಳತ್ತ ಮುನ್ನುಗ್ಗುತ್ತದೆ. ಯಾವ ತರಹದ ತಪ್ಪಿನ ಭಾವನೆ ಮತ್ತು ಶಿಕ್ಷೆಯ ಹೆದರಿಕೆಯೂ ಇಲ್ಲದ ಭಾರತೀಯ ಮನಸ್ಸು ಯಾವ ಸಾಧನೆಗೂ ತುಡಿಯದೇ ತನ್ನನ್ನು ತಾನು ಪ್ರೀತಿಸಿಕೊಳ್ಳುತ್ತ ಇರುತ್ತದೆ. ಯುರೋಪಿಯನ್ನರಾಗಲಿ ಭಾರತೀಯರಾಗಲಿ ಆದರ್ಶವಾದಿಗಳಿದ್ದರೂ ಆದರ್ಶಗಳನ್ನು ಸಾಧಿಸಲು ಯುರೋಪಿಯನ್ ಮನಸ್ಸು ಹೆಣಗುತ್ತದೆ. ಭಾರತೀಯ ಮನಸ್ಸು ಕನಸು ಕಾಣುತ್ತಲೇ ಇರುತ್ತದೆ. ಹೀಗೆ ಯುರೋಪಿಯನ್ನರ ವಿಚಾರ ಮತ್ತು ಆಚಾರಗಳಲ್ಲಿ ಅಂತರ ಬಹಳ ಕಡಿಮೆಯಿರುತ್ತದೆ. ಭಾರತೀಯರ ವಿಚಾರ ಮತ್ತು ಆಚಾರಗಳಲ್ಲಿ ಬಹಳಷ್ಟು ಸಲ ತುಂಬಲಾರದ ಕಂದಕ ನಿರ್ಮಾಣವಾಗುತ್ತದೆ.

ಆದರ್ಶ ಮತ್ತು ವಸ್ತುಸ್ಥಿತಿಯ ನಡುವೆ ಆಳವಾದ ಭೇದವಿರುವುದು ಜಗತ್ತಿನ ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಸಾಮಾನ್ಯ. ಆದರೆ ಭಾರತದಲ್ಲಿ ಈ ಭೇದ ಉಳಿದೆಲ್ಲೆಡೆಗಳಿಗಿಂತ ಹೆಚ್ಚು ಎನ್ನುವುದು ವಿದೇಶಗಳಲ್ಲಿ ವಾಸಿಸಿ ಅನುಭವವಿರುವ ಎಲ್ಲ ಭಾರತೀಯರಿಗೂ ಗೊತ್ತು. ಇಲ್ಲಿ ರಾಜಕಾರಣಿಗಳು, ಜನಸಾಮಾನ್ಯರು, ಸಂತರು ಮತ್ತು ಸ್ವಾಮಿಗಳು ಜಾತಿಪದ್ಧತಿಯ ವಿರುದ್ಧ ಮಾತನಾಡುತ್ತಲೇ ಇರುತ್ತಾರೆ. ಆದರೆ ಜಾತಿಪದ್ಧತಿಯ ಕಾನೂನೀಕರಣ ಮತ್ತು ಸಾಂಸ್ಥೀಕರಣ ಭಾರತದ ಇತಿಹಾಸದಲ್ಲಿ ಹಿಂದೆಂದೂ ಈಗ ಆಗುತ್ತಿರುವಷ್ಟು ಆಗಿಲ್ಲ.

ಹಿಂದೂ ಮನಸ್ಸು ಪೂರ್ತಿ ತಪ್ಪಿತಸ್ಥ ಭಾವನೆಯಿಂದ ಹೊರಗುಳಿಯುವದಿಲ್ಲ. ವಾಸ್ತವವಾಗಿ ಹಿಂದುವಿನ ತಪ್ಪಿತಸ್ಥ ಭಾವನೆಯ ಮೂಲ ಅವನು ಬೆಳೆಯುವ ವರ್ಷಗಳಲ್ಲಿ ಬೋಧಿಸಲ್ಪಡುವ ಕರ್ಮಸಿದ್ಧಾಂತದಲ್ಲಿದೆ. ಹಿಂದುವಿನಲ್ಲಿ ನೈಚ್ಯಾನುಸಂಧಾನ ಅಥವಾ ಇನ್‌ಫೀರಿಯಾರಿಟಿ ಕಾಂಪ್ಲೆಕ್ಸ್ ಸಹ ಕಡಿಮೆ. ಹಿಂದುಗಳು ಪಾಶ್ಚಾತ್ಯರೊಡನೆ ಹೋಲಿಸಿಕೊಂಡು ತಮ್ಮ ಸ್ಥಿತಿಗಾಗಿ ಖಿನ್ನರಾಗುವುದು ಬಹಳ ಕಡಿಮೆ. ಆದರೆ ಬಹಳಷ್ಟು ಸಲ ತಮ್ಮನ್ನು ಶತಮಾನಗಳ ವರೆಗೆ ಮೆಟ್ಟಿ ಆಳಿದ ಮುಸ್ಲಿಮರೊಂದಿಗೆ ಹೋಲಿಸಿಕೊಂಡು ಖಿನ್ನರಾಗುವುದು ಸಾಮಾನ್ಯ.

ಪಾಶ್ಚಿಮಾತ್ಯರ ಮಾನಸಿಕ ಸ್ಫೂರ್ತಿ ಅವರ ಆಕ್ರಮಣಶೀಲತೆಯಲ್ಲಿದೆ. ಈ ಆಕ್ರಮಣಶೀಲತೆ ಅಂತರ್ಬಾಹ್ಯ ಘಟನೆಗಳಿಗೆ ತಕ್ಕಂತೆ ಹೆಚ್ಚುಕಡಿಮೆಯಾಗುತ್ತದೆ. ಪಾಶ್ಚಾತ್ಯರ ಅಂತಃಸಾಕ್ಷಿಯು ಅವರ ಒಳಮನಸ್ಸಿನ ಮೇಲೆ ಮಾಡುವ ಸತತ ಆಕ್ರಮಣ ಅವರನ್ನು ಆಕ್ರಮಕ ವ್ಯಕ್ತಿಗಳನ್ನಾಗಿ ರೂಪಿಸುತ್ತದೆ. ಪಾಶ್ಚಾತ್ಯರ ಲೈಂಗಿಕತೆಯೂ ಬಹಿರ್ಮುಖವಾಗಿರುತ್ತದೆ. ಆಕ್ರಮಣಶೀಲತೆ ಮತ್ತು ಲೈಂಗಿಕತೆಗಳೆರಡೂ ಬಹಿರ್ಮುಖವಾಗಿರುವುದರಿಂದ ಪಾಶ್ಚಾತ್ಯರು ಬಾಹ್ಯ ಚಟುವಟಿಕೆಯತ್ತ ಒಲಿಯುತ್ತಾರೆ. ಆದರೆ ಆತ್ಮರತ ಭಾರತೀಯ ಮನಸ್ಸು ತನ್ನ ಲೈಂಗಿಕತೆಯನ್ನು ಸಹ ಅಂತರ್ಮುಖವಾಗಿಸಿ ಮಾನಸಿಕ ಸ್ವರತಿಯಲ್ಲಿ ನಿರತವಾಗುವುದರಿಂದ ಅದು ಶಾಂತವೂ ಸ್ಥಿತಪ್ರಜ್ಞವೂ ಮತ್ತು ಆಲಸಿಯೂ ಆಗುತ್ತದೆ.

ಪಾಶ್ಚಾತ್ಯ ಮನಸ್ಸು ಆಕ್ರಮಣಶೀಲತೆಯನ್ನು ತನ್ನ ಮೇಲೆಯೇ ಕೇಂದ್ರೀಕರಿಸಿಕೊಳ್ಳುವುದರಿಂದ ಆಗುವ ಪರಿಣಾಮಗಳು ಎರಡು: ಶಿಕ್ಷೆಯ ಸಂಭವದಿಂದ ತಪ್ಪಿಸಿಕೊಳ್ಳಲು ಅದು ಯಾವಾಗಲೂ ಕಾರ್ಯರತವಾಗುತ್ತದೆ ಮತ್ತು ಮರು ಆಕ್ರಮಣದ ರೂಪದಲ್ಲಿ ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳತೊಡಗುತ್ತದೆ.

ಭಾರತೀಯನ ಅಂತಃಸಾಕ್ಷಿಯು ತಂದೆ ಕೊಡಬಹುದಾದ ಶಿಕ್ಷೆಯ ಮೇಲೆ ಅವಲಂಬಿಸಿಲ್ಲ. ಆದಕ್ಕೆ ಯಾವ ಶಿಕ್ಷೆಯ ಅಂಜಿಕೆಯೂ ಇಲ್ಲ. ಲೈಂಗಿಕಶಕ್ತಿಯ ಅಂತರೀಕರಣವಾಗುವುದರಿಂದ ಅದರ ಬಾಹ್ಯ ಅಭಿವ್ಯಕ್ತಿ ಸೌಮ್ಯವಾಗುತ್ತದೆ. ಭಾರತೀಯರ ಮತ್ತೊಂದು ಎದ್ದುಕಾಣುವ ಗುಣವೆಂದರೆ ವೀರ್ಯನಾಶದ ಭಯ. ಎಲ್ಲ ವೃತ್ತಿನಿರತ

ಡಾಕ್ಟರರಿಗೂ ಇದು ಸಾಮಾನ್ಯ ಅನುಭವ. ವೀರ್ಯದ ಜೊತೆಗೆ ಭಾರತೀಯರಿಗೆ ಇರುವಷ್ಟು ಬೆಸುಗೆ ಉಳಿದ ಯಾವ ನಾಗರಿಕತೆಯಲ್ಲಿಯೂ ಕಾಣುವುದಿಲ್ಲ. 'ಬ್ರಹ್ಮಚರ್ಯವೇ ಜೀವನ, ವೀರ್ಯನಾಶವೇ ಮರಣ' ಎಂಬ ಉಕ್ತಿ ಇದಕ್ಕೆ ಉದಾಹರಣೆ. ಐತ್ತರೀಯ ಉಪನಿಷತ್ತಿನ ಪ್ರಕಾರ ವೀರ್ಯವು ದೇಹದ ಎಲ್ಲ ಭಾಗಗಳಿಂದಲೂ ಶೇಖರಿಸಲ್ಪಡುತ್ತದೆ. ಆದ್ದರಿಂದ ಹಿಂದುವು ವೀರ್ಯವೆಂದರೆ ತನ್ನ ಆತ್ಮವೆಂದೇ ತಿಳಿಯುತ್ತಾನೆ.

ಹಿಂದುವಿನ ಶಕ್ತಿ ಅವನು ತನ್ನ ಎಲ್ಲ ಮನೋರೇತಸ್ಸನ್ನು ತನ್ನ ಆತ್ಮದ ಬೆಳವಣಿಗೆಗಾಗಿ ಉಪಯೋಗಿಸುವುದರಲ್ಲಿದೆ. ಆತ್ಮವನ್ನು ದೇಹದೊಂದಿಗೆ ಬೆಸೆಯುವ 'ಯೋಗ' ಹಿಂದುವಿನ ಸಾಧನೆಯಾಗುತ್ತದೆ. ಹಿಂದುವು 'ಯೋಗಿ'ಯಾಗಲು ತವಕಿಸುತ್ತಾನೆ.

ಭಾರತೀಯ ಮನಸ್ಸಿನಲ್ಲಿ ತನ್ನ ಅಹಂ ಮತ್ತು ತಂದೆಯಿಂದ ಪ್ರಣೀತವಾದ ಆದರ್ಶದ ನಡುವಿನ ಘರ್ಷಣೆ ಕಡಿಮೆ. ಇಲ್ಲಿ ಪರಂಪರೆಗೂ ಹಿರಿಯರಿಗೂ ಹೆಚ್ಚು ಗೌರವವಿದೆ. ಇದು ಪಾಶ್ಚಿಮಾತ್ಯರಲ್ಲಿಯ ಪರಿಸ್ಥಿತಿಗೆ ತದ್ವಿರುದ್ಧ.

> ಪರಿಸ್ಥಿತಿಯೇ ಮನುಷ್ಯನನ್ನೂ ಆತನ ವ್ಯಕ್ತಿತ್ವವನ್ನೂ ನಿರ್ಮಿಸುತ್ತದೆನ್ನುವುದು ನಿರ್ವಿವಾದದ ಮಾತು.
>
> -ಸರ್ ಗ್ರೆನ್‌ಫೆಲ್

ಹಿಂದೂ ವ್ಯಕ್ತಿತ್ವದ ಪ್ರಮುಖ ಗುಣವೆಂದರೆ ತಂದೆಗೆ ವಿಧೇಯನಾಗಿರುವುದು ಮತ್ತು ಆಳುವವರನ್ನು ಅವಲಂಬಿಸಿರುವುದು. ಹಿಂದುವಿನ ವ್ಯಕ್ತಿತ್ವದ ಬೆಳವಣಿಗೆಯು ಪರಂಪರೆ ಮತ್ತು ಅವಲಂಬನೆಗಳ ನಡುವಿನ ಇಕ್ಕಟ್ಟಾದ ದಾರಿಯಲ್ಲಿ ಸಾಗುವುದರಿಂದ ವ್ಯಕ್ತಿತ್ವದ ಸಂಪೂರ್ಣ ಬೆಳವಣಿಗೆಗೆ ಇಲ್ಲಿ ಬಹಳ ಕಡಿಮೆ ಅವಕಾಶವಿದೆ.

## ದೇಹದ ವೈಭವೀಕರಣ

ಹಿಂದುಗಳ ಮತ್ತೊಂದು ಗುಣವಿಶೇಷವೆಂದರೆ ದೈಹಿಕ ಸೌಂದರ್ಯದ ಬಗೆಗಿನ ಗಮನ. ಹಿಂದೂ ಪುರುಷರು ಪರಂಪರಾಗತವಾಗಿ ತಮ್ಮ ದೈಹಿಕ ಸೌಂದರ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ತೋರುವ ಆಸಕ್ತಿಯನ್ನು ಇತ್ತೀಚಿನ ದಶಕಗಳಲ್ಲಿ ಪಾಶ್ಚಿಮಾತ್ಯ ಪುರುಷರು ಅನುಸರಿಸತೊಡಗಿದ್ದಾರೆ. ಹಿಂದುಗಳ ದೇಹವು ಆತ್ಮನ ಉದ್ಧಾರಕ್ಕೆ ಒಂದು ಸಾಧನವೆಂದು ಬಗೆದಿರುವುದರಿಂದ ದೇಹದ ಆರೋಗ್ಯ ಮತ್ತು ಸೌಂದರ್ಯಕ್ಕೆ ಆತ್ಮೋನ್ನತಿಯ ಬಗೆಗೆ ಕೊಡುವಷ್ಟೇ ಗಮನವನ್ನು ಕೊಡುತ್ತಾರೆ. ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಗ್ರೀಕ್ ರಾಯಭಾರಿಯಾದ ಮೆಗಾಸ್ಥನೀಸ್ ತನ್ನ ನೆನಪುಗಳಲ್ಲಿ ಹಿಂದುಗಳ ದೈಹಿಕ ಸೌಂದರ್ಯದ ಬಗೆಗಿನ ಆಸ್ಥೆಯ ಬಗ್ಗೆ ಉಲ್ಲೇಖಿಸಿದ್ದಾನೆ. ಅಗ್ನಿಪುರಾಣದಲ್ಲಿ ದೈಹಿಕ ಸೌಂದರ್ಯ ಮತ್ತು ಆರೋಗ್ಯದ ಬಗೆಗೆ ವಿವರವಾಗಿ ಬರೆಯಲಾಗಿದೆ. ಕಥಾ ಸರಿತ್ಸಾಗರದ ಕಥೆಗಳಲ್ಲಿಯ ಎಲ್ಲ ನಾಯಕರು ಅನುಪಮ ದೈಹಿಕ ಸೌಂದರ್ಯವುಳ್ಳವರೆಂದೇ ವರ್ಣಿಸಲ್ಪಡುತ್ತಾರೆ. ಯೋಗ ತತ್ವೋಪನಿಷತ್ತಿನ ಪ್ರಕಾರ ಯೋಗಸಾಧನೆ ಮಾಡುತ್ತ ಹೋಗುವ ಪುರುಷನು ಕಾಮದೇವತೆಯಷ್ಟೆ ಸೌಂದರ್ಯವಂತನಾಗುತ್ತಾನೆ. ದೈಹಿಕ ಸೌಂದರ್ಯದ ಬಗೆಗಿನ ಆಸ್ಥೆ ಭಾರತೀಯರ ಆತ್ಮರತಿಯ ಮತ್ತೊಂದು ಉದಾಹರಣೆಯೆಂದೂ ಹೇಳಬಹುದು.

## ಉದಾರ ಲೈಂಗಿಕತೆ

ಲೈಂಗಿಕ ವಿಷಯಗಳಲ್ಲಿ ಹಿಂದುಗಳು ಮೊದಲಿನಿಂದಲೂ ಔದಾರ್ಯವನ್ನು ತೋರಿಸಿದ್ದಾರೆ. ನಮ್ಮ ಶಿಲ್ಪಕಲೆ, ಸಂಗೀತ ಮತ್ತು ಚಿತ್ರಕಲೆಗಳಲ್ಲಿ ಲೈಂಗಿಕತೆ ವಿಜೃಂಭಿಸಿದೆ.

ಪಾಶ್ಚಿಮಾತ್ಯರ ಕಲೆಗಳಲ್ಲಿ ನೋವನ್ನು ಪ್ರಮುಖವಾಗಿ ವೈಭವೀಕರಿಸಲಾಗಿದೆ. ಹಿಂದುಗಳ ಅನೇಕ ದೇವತೆಗಳು ವಿವಾಹಿತರಷ್ಟೆ ಅಲ್ಲ, ಪುರಾಣಗಳಲ್ಲಿ ದೇವತೆಗಳಲ್ಲಿಯ ಅನೈತಿಕ ಲೈಂಗಿಕ ನಡುವಳಿಕೆಗಳ ಬಗೆಗೆ ಸಾಕಷ್ಟು ಉಲ್ಲೇಖವಿದೆ. ಜಗತ್ತಿನ ನಾಗರಿಕತೆಗಳಲ್ಲಿ ಹಿಂದುಗಳು ಮಾತ್ರ ಕಾಮವನ್ನು ಒಂದು ಕಲೆ ಮತ್ತು ಒಂದು ಶಾಸ್ತ್ರವನ್ನಾಗಿ ಬೆಳೆಸಿದರು. ದೇವಸ್ಥಾನಗಳಲ್ಲಿ ನೃತ್ಯಗಾತಿಯರನ್ನಿಡುವ ಪರಂಪರೆ ಹಿಂದುಗಳಿಗೆ ಮಾತ್ರ ಸಾಧ್ಯವಾಗಬಲ್ಲದು.

ಹಿಂದುಗಳ ಕಲೆ ಅಂತರ್ಮುಖಿಯಾಗಿದೆ. ಅವರ ಚಿತ್ರಕಲೆ, ನೃತ್ಯ, ನಾಟಕ ಮತ್ತು ಶಿಲ್ಪಕಲೆ

ಗಳು ಕೇವಲ ಬಾಹ್ಯ ವಸ್ತುಸ್ಥಿತಿಗೆ ಒತ್ತು ಕೊಡದೇ ಹೊರಗೆ ಕಾಣುವುದರ ಹಿಂದೆ ಇರುವ ಸತ್ಯವನ್ನು ಹುಡುಕಲು ಪ್ರಯತ್ನಿಸುತ್ತವೆ. ಭಾರತೀಯ ಕಲೆಗಳು ವರ್ಣಿಸುವ ಒಂಭತ್ತು ರಸಗಳಲ್ಲಿ ಪ್ರೇಮ ಮತ್ತು ಕಾಮ ಇವೆರಡನ್ನು ಶಾಶ್ವತರಸಗಳೆಂದು ವರ್ಣಿಸಲಾಗಿದ್ದರೆ ಉಳಿದವು ಕ್ಷಣಿಕವೆಂದು ಭಾವಿಸಲಾಗಿದೆ. ಪ್ರಾಚೀನ ಪಾಶ್ಚಾತ್ಯ ಕಲೆಯಲ್ಲಿ ಇಲ್ಲದ ವೈಶಾಲ್ಯ ಭಾರತೀಯ ಕಲೆಯಲ್ಲಿದೆ. ಆದರೆ ಭಾರತೀಯ ನಾಟಕಗಳನ್ನು ಪಾಶ್ಚಾತ್ಯ ನಾಟಕಗಳಿಗೆ ಹೋಲಿಸಿದಾಗ ಅವು ಸಪ್ಪೆ ಎನಿಸುತ್ತವೆ. ನಾಟಕವನ್ನು ರೋಮಾಂಚಕವಾಗಿಸುವ ಘರ್ಷಣೆ, ಆಕ್ರಮಣಶೀಲತೆ ಮತ್ತು ತಪ್ಪಿತಸ್ಥ ಮನೋಭಾವನೆಗಳು ಪಾಶ್ಚಾತ್ಯ ನಾಟಕಗಳಲ್ಲಿ ಹೆಚ್ಚು ಕಾಣಿಸುವುದರಿಂದ ಅವು ಹೆಚ್ಚು ರೋಚಕವಾಗುತ್ತವೆ.

ಭಾರತದ ಪ್ರಾಚೀನ ಕಥೆಗಳಲ್ಲಿ ಒಟ್ಟಾರೆ ನಾಟಕೀಯತೆಯ ಅಭಾವವೇ ಇದೆ ಎನ್ನಬಹುದು.

ಹಿಂದುಗಳ ಪಾರಲೌಕಿಕ ಮನೋವೃತ್ತಿಯು ಈ ಕೆಳಗಿನ ಗುಣಗಳನ್ನು ಬೆಳೆಸುತ್ತದೆ.

೧)ಸಾಮೂಹಿಕತೆ ಮತ್ತು ಗುಂಪು ವೃತ್ತಿ ಕುಂಠಿತವಾಗಿದೆ. ೨) ಉದಾಸೀನತೆ ಬೇರು ಬಿಟ್ಟಿದೆ. ೩) ಮಾನಸಿಕ ಗೂಢತೆ ಮೈಗೂಡಿದೆ.

ಮಡಿ-ಮೈಲಿಗೆ ಮತ್ತು ಪರದೇಶಗಮನಕ್ಕೆ ನಿರ್ಬಂಧ ಮುಂತಾದ ಇತ್ತೀಚಿನವರೆಗೂ ಪ್ರಚಲಿತವಿದ್ದ ಪದ್ಧತಿಗಳು ಈ ಪರಾಙ್ಮುಖ ಪ್ರವೃತ್ತಿಗೆ ದ್ಯೋತಕಗಳಾಗಿವೆ.

ಜ್ಯೋತಿಷ್ಯ, ಹಸ್ತಸಾಮುದ್ರಿಕ, ಮಾಟಮಂತ್ರಗಳು ಇವುಗಳಲ್ಲಿಯ ಆಸ್ಥೆಗೆ ಅಪರ ಜ್ಞಾನದೆಡೆಗೆ ಹಿಂದುಗಳಿಗೆ ಇರುವ ಆಕರ್ಷಣೆಯೇ ಕಾರಣ. ಆಧ್ಯಾತ್ಮಿಕ ವಿದ್ಯೆಯ ಶ್ರೇಷ್ಠತೆಯ ಬಗೆಗೆ ಹಿಂದುಗಳಿಗೆ ಇರುವ ವಿಶ್ವಾಸವೇ ಅವರು ವಿಜ್ಞಾನದಲ್ಲಿ ಹಿಂದುಳಿಯಲೂ ಕಾರಣವಾಯಿತು.

### ಪ್ರಕ್ಷೇಪಿತ ಬಹಿರ್ಮುಖತೆ

ಮನೋವಿಶ್ಲೇಷಣಾ ಶಾಸ್ತ್ರದ ಪ್ರಕಾರ ಆತ್ಮರತ ವ್ಯಕ್ತಿತ್ವವು ತನ್ನ ಉತ್ತುಂಗವನ್ನು ತಲುಪಿದಾಗ ವ್ಯಕ್ತಿಯ ಮನೋರೇತಸ್ಸು ಪೂರ್ತಿಯಾಗಿ ಅವನಲ್ಲಿಯೇ ಶೇಖರವಾಗುತ್ತದೆ. ವ್ಯಕ್ತಿಗೆ ಬಾಹ್ಯ ಜಗತ್ತಿನ ವಸ್ತುಗಳ ಬಗ್ಗೆ, ವಿದ್ಯಮಾನಗಳ ಬಗ್ಗೆ ಆಸಕ್ತಿ ಇಡಿಯಾಗಿ ಕಳೆದುಹೋಗುತ್ತದೆ. ಇದನ್ನೇ ನಮ್ಮ ಪೂರ್ವಿಕರು ವೈರಾಗ್ಯವೆಂದು ಕರೆದಿದ್ದಾರೆ. ತನ್ನ ತೇಜಸ್ಸೆಲ್ಲವನ್ನೂ ತನ್ನೊಳಗೇ ಕೇಂದ್ರೀಕರಿಸಿಕೊಳ್ಳುವ ಕ್ರಿಯೆ ಸುಲಭವಾದುದಲ್ಲ. ಇದರಲ್ಲಿ ವ್ಯಕ್ತಿಯ ಸುಪ್ತಪ್ರಜ್ಞೆಯ ಪಾತ್ರವೂ ಇರಬೇಕಾಗುತ್ತದೆ. ಪೂರ್ಣ ಮನೋವೈರಾಗ್ಯವನ್ನು ಸಾಧಿಸಿದ ಮನಸ್ಸು ನಂತರ ಬಾಹ್ಯ ಜಗತ್ತನ್ನು ತನ್ನೊಳಗೇ ಕಲ್ಪಿಸಿಕೊಳ್ಳುತ್ತದೆ. ಉಪನಿಷತ್ತುಗಳ ತತ್ವಮಸಿ ಸ್ಥಿತಿಯು ಸಾರುವುದೂ ಇದನ್ನೇ. ಆತ್ಮ ಮತ್ತು ಹೊರಗಿನ ಜಗತ್ತುಗಳು ಇಡಿಯಾಗಿ ಏಕರೂಪವಾದಾಗ ಈ ಸ್ಥಿತಿಯನ್ನು ತಲುಪಿದ ವ್ಯಕ್ತಿ ತನ್ನೊಳಗಿನ ಪ್ರೀತಿಯೆಲ್ಲವನ್ನೂ ಇಡಿಯಾಗಿ ಜಗತ್ತಿಗೆ ಧಾರೆಯೆರೆಯುತ್ತಾನೆ. ಈ ಪ್ರಕ್ರಿಯೆ ಮನೋವಿಜ್ಞಾನದಲ್ಲಿ 'ಪ್ರಕ್ಷೇಪಿತ ಬಹುರ್ಮುಖತೆ' (PROJECTED EXTROVERSION) ಎಂದು ಕರೆಯಲ್ಪಡುತ್ತದೆ.

ಈ ಸ್ಥಿತಿಯ ಕೆಲವು ಉದಾಹರಣೆಗಳು:

೧) ರಮಣ ಮಹರ್ಷಿಗಳು.

೨) ಗುರುದೇವ ರವೀಂದ್ರನಾಥ ಟಾಗೋರರು.

೩) ಗೌತಮ ಬುದ್ಧ.

ಗುರುದೇವ ರವೀದ್ರನಾಥ ಟಾಗೋರರು ಒಂದೆಡೆ ಹೇಳುತ್ತಾರೆ:

"ಆ ಸಂಧ್ಯಾ ಸಮಯದ ಪರಿಣಾಮ ನನ್ನೊಳಗೆ ಆಗಿತ್ತು. ಸಂಜೆಯ ನೆರಳುಗಳು ನನ್ನ ಆತ್ಮವನ್ನು ಪೂರ್ತಿ ಅಳಿಸಿಬಿಟ್ಟಿದ್ದವು. 'ನಾನು' ಪೂರ್ತಿಯಾಗಿ ಅಳಿದುಹೋಗಿ ಜಗತ್ತಿನ ನಾಟಕವನ್ನು ಒಬ್ಬ ಪ್ರೇಕ್ಷಕನಂತೆ ನೋಡತೊಡಗಿದಾಗ ನನಗೆ ಬಹುಮೂಲ್ಯ ಅನುಭವವಾಯಿತು. ಆಗ ಜಗತ್ತಿನಲ್ಲಿಯ ಯಾವ ವಸ್ತುವಾಗಲಿ ಮನುಷ್ಯನಾಗಲಿ ನನಗೆ ತುಚ್ಛವಾಗಿ ಕಾಣಲಿಲ್ಲ. ನನ್ನ ಶೈಶವದಿಂದ ನಾನು ಜಗತ್ತನ್ನು ಕೇವಲ ನನ್ನ ಕಣ್ಣುಗಳ ಮೂಲಕ ನೋಡುತ್ತಿದ್ದೆ. ಆದರೆ, ಆ ಕ್ಷಣದಿಂದ ನಾನು ನನ್ನ ಇಡಿಯ ಪ್ರಜ್ಞೆಯ ಮೂಲಕ ಜಗತ್ತನ್ನು ನೋಡತೊಡಗಿದೆ."

ಮೇಲೆ ವರ್ಣಿಸಿರುವುದು 'ಪ್ರಕ್ಷೇಪಿತ ಬಹಿರ್ಮುಖತೆ'ಯ ಉತ್ತುಂಗ ಸ್ಥಿತಿ. ನಿಂಬಾಳದ ಗುರುದೇವ ರಾನಡೆಯವರೂ ತಮ್ಮ ಗ್ರಂಥಗಳಲ್ಲಿ

ಮೇಲಿನ ಸ್ಥಿತಿಯನ್ನು ಹೋಲುವ ಅನುಭವಗಳನ್ನು ವರ್ಣಿಸಿದ್ದಾರೆ.

ಪ್ರಕ್ಷೇಪಿತ ಬಹಿರ್ಮುಖತೆಯು ಆತ್ಮರತ ಮನಸ್ಸಿನ ಅತ್ಯುಚ್ಚ ಸ್ಥಿತಿ. ಕೇವಲ ಬೆರಳೆಣಿಕೆಯಷ್ಟು ಮಹಾನುಭಾವರಿಗೆ ಮಾತ್ರ ಇದನ್ನು ತಲುಪಲು ಸಾಧ್ಯ. ಈ ಸ್ಥಿತಿಯನ್ನು ತಲುಪಿದ ವ್ಯಕ್ತಿ ಸಾಮಾಜಿಕ, ರಾಜಕೀಯ ಚಟುವಟಿಕೆಗಳಿಂದ ವಿಮುಖನಾಗುತ್ತಾನೆ. ಭಾರತೀಯ ಇತಿಹಾಸದ ದುರಂತವಿರುವುದೇ ಇಲ್ಲಿ. ಇಪ್ಪತ್ತನೆಯ ಶತಮಾನದಲ್ಲಿ ಬಹುಮುಖ ಪ್ರತಿಭಾಶಾಲಿಗಳಾದ ಮಹರ್ಷಿ ಅರವಿಂದ ಮತ್ತು ಜಯಪ್ರಕಾಶ ನಾರಾಯಣರು ಅತ್ಯಂತ ಆಯಕಟ್ಟಿನ ಸಮಯದಲ್ಲಿ ಅವರ ಸೇವೆಯ ಅಗತ್ಯ ರಾಷ್ಟ್ರಕ್ಕೆ ಇರುವಾಗ ರಾಜಕೀಯ, ಸಾಮಾಜಿಕ ಜೀವನದಿಂದ ಹಿಂದಕ್ಕೆ ಸರಿದರು. ಜಯಪ್ರಕಾಶ ನಾರಾಯಣರು ಕೆಲವು ಸಮಯದ ಹಿಮಾಲಯವಾಸದ ನಂತರ ತಮ್ಮನ್ನು ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡರು. ಆದರೆ ಅವರು ಆಗ ವೃದ್ಧಾಪ್ಯದ ಅಂಚಿಗೆ ಬಂದಿದ್ದರು.

> ಪ್ರತಿಯೊಬ್ಬನೂ ಚಂದ್ರನೆ. ಹೀಗಾಗಿ ಆತನಿಗೂ ಒಂದು ಕರಾಳ ಮುಖವಿದ್ದು, ಅದನ್ನಾತ ಮುಚ್ಚಿಕೊಂಡೇ ಇರುತ್ತಾನೆ.
>
> -ಮಾರ್ಕ್‌ಟ್ವೇನ್

ಭಾರತೀಯರ ಆತ್ಮರತ ಮನಸ್ಸನ್ನು ಸಮಾಜ ಸೇವೆಯೆಡೆಗೆ ತಿರುಗಿಸಲು ಕೆಲವು ಉಪಾಯಗಳನ್ನು ಯೋಜಿಸಲಾಯಿತು. ಇವುಗಳಲ್ಲಿ ಮುಖ್ಯವಾದವು

೧) ಗೀತೆಯ ನಿಷ್ಕಾಮ ಕರ್ಮ ಮತ್ತು ೨) ಭಕ್ತಿ.

ಶಂಕರಾಚಾರ್ಯರು ಹೇಳುವಂತೆ 'ಅವಿದ್ಯಾ ಕಾಮ ಕರ್ಮಮಯವಾದ' ಈ ಜಗತ್ತಿನ ಮೋಹವನ್ನು ಬಿಡುವುದು ಆತ್ಮದ ಉದ್ಧಾರದ ದೃಷ್ಟಿಯಿಂದ ಒಳ್ಳೆಯದಾಗಿರಬಹುದು. ಆದರೆ ಈ ಸಿದ್ಧಾಂತ ಎಂಟನೆಯ ಶತಮಾನದ ನಂತರ ಆರಂಭವಾದ ಭಾರತದ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಅವನತಿಗೆ ಮುಖ್ಯ ಕಾರಣವಾಯಿತೆಂದು ಬಹಳಷ್ಟು ಜನ ತಜ್ಞರು ಭಾವಿಸುತ್ತಾರೆ.

ಭಾರತೀಯರ ಮಾನಸಿಕ ಬೆಳವಣಿಗೆಯು ಈ ಕೆಳಗಿನ ಮನೋವೈಜ್ಞಾನಿಕ ಪ್ರಕ್ರಿಯೆಗಳ ಆಧಾರದ ಮೇಲೆ ಸಾಗುತ್ತದೆ:

೧) ತಂದೆಯೊಡನೆಯ ಸುಪ್ತ ಸಮಲಿಂಗೀ ಕಾಮ ಧೋರಣೆ.

೨) ತಂದೆಯೊಡನೆ ಘರ್ಷಣೆ ತಪ್ಪಿಸಲು ಸ್ವೇಚ್ಛಾ ಷಂಢತ್ವ.

೩) ತಾಯಿಯೊಡನೆ ಗುರುತಿಸಿಕೊಳ್ಳುವಿಕೆ.

ಹಿಂದೂ ಸಂಸ್ಕೃತಿಯಲ್ಲಿ ತಂದೆ ಮತ್ತು ಅರಸನ ಅಥವಾ ಒಡೆಯನ ಬಗೆಗೆ ಇರುವ ಸಂಪೂರ್ಣ ಸಮರ್ಪಣಾಭಾವ ಪ್ರಭಾವಶಾಲಿಯಾಗಿದೆ. ಅರಸನ ಮರಣದ ನಂತರ ಆತ್ಮಹತ್ಯೆ ಮಾಡಿಕೊಳ್ಳುವ ಪ್ರವೃತ್ತಿ ದಕ್ಷಿಣ ಭಾರತದಲ್ಲಿ ಗಂಗ, ಚಾಲುಕ್ಯರ ಕಾಲದಿಂದ ಹಿಡಿದು ಈ ಶತಮಾನದ ಎಂಜಿಆರ್, ಜಯಲಲಿತಾ ಯುಗದವರೆಗೂ ನಡೆದುಕೊಂಡು ಬಂದಿದೆ. ನಮ್ಮ ಇನ್ನೊಂದು ಹಳೆಯ ಸಂಸ್ಥೆಯಾದ 'ಗುರು-ಶಿಷ್ಯ ಪರಂಪರೆ' ಇದೇ ಪರಂಪರೆಯ ಇನ್ನೊಂದು ಮುಖ.

## ಸತ್ಯಾಗ್ರಹ ಮತ್ತು ಧರಣಿ

ಸತ್ಯಾಗ್ರಹ ಅಥವಾ ಧರಣಿ ಕುಳಿತುಕೊಳ್ಳುವುದನ್ನು ಹಿಂದುಗಳು ಗಾಂಧೀಜಿಯಿಂದ ಕಲಿಯಲಿಲ್ಲ. ಅದು ಹಿಂದುಗಳ ಬಹಳ ಹಳೆಯ ಪರಂಪರೆ. ಕೃಷ್ಣಸ್ವಾಮಿ ಅಯ್ಯಂಗಾರರು ತಮ್ಮ 'ಪ್ರಾಚೀನ ಭಾರತ' ಗ್ರಂಥದಲ್ಲಿ 'ಚಂಡಿಯ' ಎಂಬ ತುಳುವನ ಕಥೆಯನ್ನು ಉಲ್ಲೇಖಿಸುತ್ತಾರೆ. ಈ ಚಂಡಿಯು ಬನವಾಸೀ ಕೋಟೆಯ ವಿಲೇವಾರಿಯು ತನಗೆ ಇಷ್ಟವಾಗುವಂತೆ ನಡೆಯುವ ತನಕ ತನ್ನ ಬೆರಳುಗಳ ಉಗುರುಗಳನ್ನು ಬೆಳೆಸದೇ ಇರುವ ಪ್ರತಿಜ್ಞೆ ಮಾಡಿದನಂತೆ. ಬಲ್ಲವರಸ ಮತ್ತು ಸತ್ಯಾಶ್ರಯ ದೇವರು ಈ ಕೋಟೆಯನ್ನು ಉಂಬಳಿ ಹಾಕಿ ಕೊಟ್ಟಿದ್ದರ ವಿರುದ್ಧ ಅವನು ತನ್ನ ಹೆಬ್ಬೆರಳನ್ನು ಕೊಯ್ದುಕೊಂಡನಂತೆ. ಇದನ್ನು ಭಾರತೀಯರ 'ಸ್ವೇಚ್ಛಾ ಷಂಡತ್ವ'ದ ಒಂದು ಉದಾಹರಣೆಯೆನ್ನಬಹುದು.

ತಮ್ಮೊಡನೆ ಮದುವೆಯ ಸಂಬಂಧ ಬೆಳೆಸಲು ಆಸಕ್ತಿಯಿಲ್ಲದವರ ಮನೆಯ ಮುಂದೆ ಅವರು

ಮದುವೆಗೆ ಒಪ್ಪುವ ತನಕ ಕುಳಿತು ಉಪವಾಸ ಮಾಡಿದವರ ಕತೆಗಳು ಕಥಾ ಸರಿತ್ಸಾಗರದಲ್ಲಿ ಸಿಗುತ್ತವೆ. ಇಪ್ಪತ್ತನೆಯ ಶತಮಾನದಲ್ಲಿ ಈ ಧರಣೆಯ ಪದ್ಧತಿ ಒಂದು ರಾಜಕೀಯ ಆಯುಧವಾಗಿ ರೂಪುಗೊಂಡಿದೆ.

ಯಯಾತಿಯ ಕಥೆಯಲ್ಲಿ ಅವನ ಮಗ ತನ್ನನ್ನು ಮತ್ತು ತನ್ನ ತಾಯಿ ದೇವಯಾನಿಯನ್ನು ಕಡೆಗಣಿಸಿದ. ಮಗ ಯಯಾತಿಯ ವಿರುದ್ಧ ಪ್ರತಿಭಟಿಸಲು ಬೆಂಕಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುವ ಮಾತು ಆಡುತ್ತಾನೆ. ಅನ್ಯಾಯದ ವಿರುದ್ಧ ಕತ್ತಿ ಎತ್ತುವುದಕ್ಕಿಂತ ಆತ್ಮ ಸಮರ್ಪಣೆ ಮಾಡಿಕೊಳ್ಳುವುದು 'ಸ್ವೇಚ್ಛಾ ಷಂಢತ್ವ'ವೇ ಹೊರತು ಬೇರೆಯಲ್ಲ.

## ತಾಯಿಯೊಡನೆ ಗುರುತಿಸಿಕೊಳ್ಳುವಿಕೆ

ದಿವಂಗತ ಮನೋವೈದ್ಯ ಡಾ. ಗಿರೀಂದ್ರಶೇಖರ ಬೋಸರ ಅಭಿಪ್ರಾಯದಲ್ಲಿ ಹಿಂದುಗಳ ಮನಸ್ಸಿನಲ್ಲಿ ಸ್ವೇಚ್ಛಾ ಷಂಢತ್ವದ ಪ್ರವೃತ್ತಿಗಿಂತಲೂ ತನ್ನ ಪೌರುಷ ಪ್ರಜ್ಞೆಯನ್ನು ತೊರೆದು ತಾಯಿಯೊಡನೆ ಗುರುತಿಸಿಕೊಂಡು ಸ್ತ್ರೀಪಾತ್ರವನ್ನು ವಹಿಸುವ ಪ್ರವೃತ್ತಿ ಪ್ರಬಲವಾಗಿದೆ.

ಪಾಶ್ಚಾತ್ಯ ಮನಃಶಾಸ್ತ್ರದ ಪ್ರಕಾರ ಆತ್ಮರತ ಮನಸ್ಸಿನ ಮತ್ತೊಂದು ವಿಶೇಷವೆಂದರೆ ಮಾತೃಗಮನ (Mother Fixation). ಸುಪ್ತಮನಸ್ಸು ಜಗತ್ತಿನ ಜಂಜಾಟದ ಬಿಸಿಯನ್ನು ತಾಳಲಾರದೇ ತಾಯಿಯ ಗರ್ಭದಲ್ಲಿಯ ಸುರಕ್ಷಿತತೆಗಾಗಿ ಹಲುಬುತ್ತದೆ. ತಾಯಿಯ ಗರ್ಭವನ್ನು ಮತ್ತೆ ಸೇರಲು ಬಯಸುತ್ತದೆ. ಹಿಂದೂ ದೇವಾಲಯಗಳ 'ಗರ್ಭಗೃಹ'ದ ಕಲ್ಪನೆಯೂ ಮೂಲತಃ ಹಿಂದೂಗಳ ಸುಪ್ತಮನಸ್ಸಿನಲ್ಲಿರುವ ಮಾತೃಗಮನದ ಪ್ರವೃತ್ತಿಯನ್ನೇ ಬಿಂಬಿಸುತ್ತದೆ.

'ಈಡಿಪಸ್ ಮನಸ್ಥಿತಿ' ಪಾಶ್ಚಾತ್ಯ ಮನೋವಿಜ್ಞಾನದ ಒಂದು ಮಹತ್ವದ ಸಿದ್ಧಾಂತ. ಪಾಶ್ಚಾತ್ಯರು ತಮ್ಮ 'ದಂಡನಾತ್ಮಕ ಆಕ್ರಮಕ' (Punitive Aggrassive) ವ್ಯಕ್ತಿತ್ವದ ಮೂಲವನ್ನು ಈ ಈಡಿಪಸ್ ಸ್ಥಿತಿಯಲ್ಲಿ ಹುಡುಕುತ್ತಾರೆ. ಫ್ರಾಯ್ಡ್‌ನ ಸಿದ್ಧಾಂತದ ಪ್ರಕಾರ ಶಿಶುವು ತನ್ನ ತಾಯಿಯ ಪ್ರೀತಿಗಾಗಿ ತಂದೆಯೊಡನೆ ಸ್ಪರ್ಧೆಗಿಳಿಯಬೇಕಾಗುತ್ತದೆ. ಈ ಸ್ಪರ್ಧೆಯಲ್ಲಿ ಸಹಜವಾಗಿ ತಂದೆ ಗೆಲ್ಲತೊಡಗಿದಾಗ ಶಿಶುವಿಗೆ ತನ್ನ ತಂದೆಯನ್ನೇ ಕೊಂದು ತಾಯಿಯನ್ನು ತನ್ನವಳಾಗಿ ಮಾಡಿಕೊಳ್ಳುವ ಹಂಬಲ ಹುಟ್ಟುತ್ತದೆ. ತಂದೆಯ ವಿರುದ್ಧದ ಆಕ್ರಾಮಕ ಪ್ರವೃತ್ತಿಯಲ್ಲಿಯೇ ಪಾಶ್ಚಾತ್ಯರ ಆಕ್ರಮಣ ಮನೋವೃತ್ತಿಯ ಮೂಲವಿದೆಯೆಂದು ಸಿಗ್ಮಂಡ್ ಫ್ರಾಯ್ಡ್‌ನ ದೃಢವಾದ ನಂಬಿಕೆಯಾಗಿತ್ತು.

ಭಾರತೀಯ ಪರಂಪರೆಯಲ್ಲಿಯೂ ತಂದೆಯ ಮೇಲಿನ ಆಕ್ರಮಣ ಮನೋವೃತ್ತಿಯ ಉದಾಹರಣೆಗಳಿವೆ. ಬಭ್ರುವಾಹನ ತನ್ನ ತಂದೆ ಅರ್ಜುನನನ್ನು ಕೊಂದ; ರುದ್ರ ತನ್ನ ತಂದೆ ಪ್ರಜಾಪತಿಯನ್ನು ಕೊಂದ. ಇಂದ್ರನೂ ತನ್ನ ತಂದೆಯನ್ನು ಕೊಂದಿರುವ ಸೂಚನೆಗಳಿವೆ. ಆದರೆ ಪಾಶ್ಚಾತ್ಯರ ಮತ್ತು ಮುಸ್ಲಿಮರ ಇತಿಹಾಸದ ಉದ್ದಕ್ಕೂ ಆಗಿರುವ ಇಂತಹ ಘಟನೆಗಳನ್ನು ಅವಲೋಕಿಸಿದರೆ ಫ್ರಾಯ್ಡ್‌ನ ಸಿದ್ಧಾಂತದಲ್ಲಿ ಸತ್ಯಾಂಶವಿದೆ ಎನ್ನಿಸದೇ ಇರದು.

ಹಿಂದೂ ಸಮಾಜವು ಹೆಚ್ಚಾಗಿ ಮಾತೃಸ್ಥಾಯೀಕರಣದ ಸ್ವಭಾವವನ್ನು ಹೊಂದಿದೆ. ತಾಯಂದಿರ ಬಗ್ಗೆ ಮತ್ತು ಮಾತೃಸೂಚಕ ಪ್ರತೀಕಗಳ ಬಗ್ಗೆ ಹಿಂದುಗಳಿಗೆ ಇರುವಷ್ಟು ಭಕ್ತಿ ಮತ್ತು ಆಕರ್ಷಣೆ ಉಳಿದ ಸಮಾಜಗಳಲ್ಲಿ ಇಲ್ಲ. ಹಿಂದುಗಳು ತಮ್ಮ ಮಕ್ಕಳನ್ನು ಬೆಳೆಸುವ ರೀತಿಯಲ್ಲಿಯೇ ಈ ಪ್ರವೃತ್ತಿಯ ಬೇರುಗಳನ್ನು ಕಾಣಬಹುದು. ಪ್ರಾಚೀನ ಹಿಂದುಗಳು ತಮ್ಮ ಮಕ್ಕಳನ್ನು ತುಷ್ಟಿಗೊಳಿಸಿದಷ್ಟು, ಮನಬಲಿಸಿದಷ್ಟು ಮತ್ತು ಸ್ವಾತಂತ್ರ್ಯ ಕೊಟ್ಟಿರುವಷ್ಟು ಪ್ರಾಚೀನ ಪಾಶ್ಚಿಮಾತ್ಯರು ಕೊಟ್ಟಿಲ್ಲ. ಮಕ್ಕಳ ತುಷ್ಟೀಕರಣ ಪ್ರವೃತ್ತಿ ಪಾಶ್ಚಿಮಾತ್ಯರಲ್ಲಿ ಇಪ್ಪತ್ತನೆಯ ಶತಮಾನದಲ್ಲಿಯೇ ಕಂಡುಬರುತ್ತದೆ.

ಕ್ರಿಸ್ತಶಕ ೧೭೨೦ರಲ್ಲಿ ದಕ್ಷಿಣಭಾರತವನ್ನು ಪ್ರವಾಸ ಮಾಡಿದ ಬುಶೆ ಎಂಬ ಜೆಸುಯಿಟ್ ಪಾದ್ರಿ ಹೀಗೆ ಬರೆಯುತ್ತಾನೆ, "ಒಂದು ಮಾತು ಮಾತ್ರ ಸತ್ಯ. ಜಗತ್ತಿನ ಯಾವ ದೇಶದಲ್ಲಿಯೂ ಭಾರತದಲ್ಲಿಯಂತೆ ತಂದೆತಾಯಿಗಳು ತಮ್ಮ ಮಕ್ಕಳ ಬಗ್ಗೆ ಅನುಕಂಪ ತೋರುವುದಿಲ್ಲ. ಭಾರತೀಯರು ತಮ್ಮ ಮಕ್ಕಳನ್ನು ಕಲ್ಪನಾತೀತವಾಗಿ ಪ್ರೀತಿಸುತ್ತಾರೆ."

ಬುಶೆ ಮೇಲಿನಂತೆ ಬರೆದ ಎರಡು ನೂರು ವರ್ಷಗಳ ನಂತರ ಇಪ್ಪತ್ತನೆಯ ಶತಮಾನದಲ್ಲಿ ಮದರಾಸಿನಲ್ಲಿ ಅರ್ಥಶಾಸ್ತ್ರದ ಪ್ರೊಫೆಸರ್ ಆಗಿದ್ದ ಡಾ. ಗಿಲ್ಬರ್ಟ್ ಸ್ಲೇಟರ್‌ರವರ ಪ್ರಕಾರ 'ಭಾರತವು ಸ್ವೇಚ್ಛಾ ಪ್ರವೃತ್ತಿಯುಳ್ಳ ಮಕ್ಕಳ ತವರು.'

ದುಬೋಯ್ ಎಂಬ ಇನ್ನೊಬ್ಬ ಯುರೋಪಿಯನ್ ತಜ್ಞ ಹೇಳುತ್ತಾನೆ, "ಭಾರತದಲ್ಲಿ ತಂದೆ ತಾಯಿಗಳನ್ನು ಗೌರವಿಸದ ಮಕ್ಕಳು ಸಹ ಮುದಿ ವಯಸ್ಸಿನಲ್ಲಿ ಅವರನ್ನು ಬಹಳ ಕಾಳಜಿಯಿಂದ ನೋಡಿಕೊಳ್ಳುತ್ತಾರೆ."

"ಭಾರತದಲ್ಲಿ ಚಿಕ್ಕಮಕ್ಕಳು ಅಶ್ಲೀಲವಾದ ಬೈಗುಳಗಳಲ್ಲಿ ತೋರುವ ಪ್ರಾವೀಣ್ಯ ಮತ್ತು ಪ್ರತಿಭೆಯನ್ನು ವಿಶ್ವದ ಇತರ ಯಾವದೇ ಚಿಕ್ಕಮಕ್ಕಳು ಸರಿಗಟ್ಟಲಾರರು" ದುಬೋಯ್ ಉವಾಚ.

೧೯೨೦ರ ದಶಕದಲ್ಲಿ ಒಬ್ಬ ಹಿಂದುವನ್ನು ಮದುವೆಯಾಗಿ ಭಾರತದಲ್ಲಿ ವಾಸಿಸಿದ ಫ್ರೀಡಾ ಹೋವರ್ಥ್ ಎಂಬ ಮಹಿಳೆ ಬರೆಯುತ್ತಾಳೆ, "ಭಾರತೀಯ ಪುರುಷರು ವಿಶ್ವದ ಇತರೆಡೆಗಳಲ್ಲಿನ ಪುರುಷರಿಗಿಂತಲೂ ಹೆಚ್ಚು ಅಂತರ್ಮುಖಿಗಳು. ಅವಿಭಕ್ತ ಕುಟುಂಬದಲ್ಲಿಯ ಜೀವನ, ಶತಮಾನಗಳ ಪರಕೀಯರ ಆಳ್ವಿಕೆ ಮತ್ತು ತಾವು ನಿರ್ಬಂಧಿತ ತಾಯಂದಿರ ಮಕ್ಕಳು ಎಂಬ ಭಾವನೆ ಭಾರತೀಯ ಪುರುಷರನ್ನು ಬಾಧಿಸುತ್ತದೆ. ಭಾರತೀಯ ಕನ್ಯೆಗೆ ತನ್ನ ಗಂಡ ತನ್ನ ಒಡನಾಡಿ ಎಂದೆನ್ನಿಸುವದಿಲ್ಲ. ಬದಲು, ಆತ ತಂದೆಯ ಸ್ಥಾನವನ್ನು ತುಂಬುವ ಒಬ್ಬ ಪುರುಷನಾಗಿ ಕಂಡು ಬರುತ್ತಾನೆ. ಅವಳು ತನ್ನ ಗಂಡನಿಗೆ ಕೊಡಬೇಕಾದ ಪ್ರೀತಿಯೆಲ್ಲವನ್ನೂ ತನ್ನ ಗಂಡುಮಕ್ಕಳ ಮೇಲೆ ಹರಿಸುತ್ತಾಳೆ. ಮಕ್ಕಳು ದೊಡ್ಡವರಾಗುವವರೆಗೂ ತಾಯಿ ಅವರಿಗೆ ತನ್ನ ಕೈಯಿಂದ ಉಣಿಸುತ್ತಾಳೆ. ಕೆಲವು ಸಲ ಐದು ವರ್ಷಗಳವರೆಗೂ ಮಗುವಿಗೆ ಮೊಲೆಯುಣಿಸುತ್ತಾಳೆ. ಈ ತರಹದ ವಿಕೃತ ಬೆಳವಣಿಗೆಯಿಂದ ಮಗುವಿನ ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆ ಕುಂಠಿತವಾಗುತ್ತದೆ. ಮಾತೃಸ್ಥಾಯೀಕರಣದ ಹಂತದಲ್ಲಿಯೇ ಉಳಿದು ಬಿಡುವ ಮಗು ತನ್ನ ತಾಯಿಯನ್ನು ದೇವತೆಯನ್ನಾಗಿ ಮಾಡಿ ಪೂಜಿಸತೊಡಗುತ್ತದೆ."

"ಭಾರತೀಯ ಮಕ್ಕಳು ಪಾಶ್ಚಾತ್ಯ ಮಕ್ಕಳಷ್ಟು ಜಗಳಗಂಟರಲ್ಲ. ವಿವಿಧ ವಯಸ್ಸುಗಳ ಗುಂಪುಗಳಲ್ಲಿಯ ಅಸೂಯೆ ಮತ್ತು ವೈರತ್ವ ಭಾರತೀಯ ಮಕ್ಕಳಲ್ಲಿ ಪಾಶ್ಚಾತ್ಯ ಮಕ್ಕಳಷ್ಟು ಕಂಡುಬರುವುದಿಲ್ಲ" ಎನ್ನುವುದು ಮತ್ತೊಬ್ಬ ಪಾಶ್ಚಿಮಾತ್ಯ ತಜ್ಞನ ಮತ.

ಮಕ್ಕಳ ಮನಃಶಾಸ್ತ್ರಜ್ಞ ಡಾ. ಲೂಯಿ ಮರ್ಫಿ ಭಾರತೀಯ ಮಕ್ಕಳ ಬಗ್ಗೆ ಹೀಗೆ ಬರೆಯುತ್ತಾರೆ, "ಭಾರತೀಯ ಶಿಶುವಿನ ಉತ್ಸ್ಫೂರ್ತಿ, ನಿರ್ಮಲತೆಗೆ ಒಂದು ಬಹು ಸುಂದರ ನೋಟ. ಆದರೆ ಅದೇ ಮಗು ಹಲವು ವರ್ಷಗಳ ನಂತರ ಒಬ್ಬ ಭಾವನಾಹೀನ, ಸಾಹಸಹೀನ ಯುವಕನಾಗಿ ಮಾರ್ಪಡುತ್ತದೆ."

ಮೇಲೆ ಕೊಟ್ಟಿರುವ ಅಭಿಪ್ರಾಯಗಳು ನಮ್ಮ ಬಗ್ಗೆ ಕೆಲವು ಪಾಶ್ಚಿಮಾತ್ಯ ತಜ್ಞರು ದಶಕಗಳ ಕೆಳಗೆ ವ್ಯಕ್ತಪಡಿಸಿರುವ ಅನಿಸಿಕೆಗಳು. ಈ ಅನಿಸಿಕೆಗಳು ಇಪ್ಪತ್ತನೆಯ ಶತಮಾನದ ಈ ಕೊನೆಯ ವರ್ಷಗಳಲ್ಲಿಯೂ ಪೂರ್ತಿ ಅಪ್ರಸ್ತುತವಾಗಿವೆ ಎಂದು ನನಗೆ ಅನ್ನಿಸುವುದಿಲ್ಲ. ●

---

ವಿಚಾರಹೀನರಲ್ಲಿ ವಿವೇಕಿಯಾದ, ಸುಷುಪ್ತಿಯಲ್ಲಿದ್ದವರಲ್ಲಿ ಜಾಗ್ರತನಾದ ಜಾಣ ಮನುಷ್ಯ ಯಾವಾಗಲೂ ಎಲ್ಲರಿಗಿಂತ ಮುಂದೆಯೆ ಇರುತ್ತಾನೆ.

● ಧಮ್ಮಪದ

ಸದಾ ಕಾರ್ಯಪ್ರವೃತ್ತರಾಗಿರುವುದರಿಂದ ಬೇಸರ, ದುರ್ಗುಣ ಹಾಗೂ ಅವಶ್ಯಕತೆ ಎಂಬ ಮೂರೂ ಕೆಡಕುಗಳಿಂದ ತಪ್ಪಿಸಿಕೊಳ್ಳಬಹುದು.

● ವಾಲ್ಟೇರ್

---

# ಮಲೆನಾಡಿನ ಚಿತ್ರಗಳು

**ವಿಶಿಷ್ಟವೂ, ವಿನೂತನವೂ ಆದ ಶೈಲಿ, ಆತ್ಮಮೋಘವಾದ ಶಬ್ದೋತ್ಪತ್ತಿ. ಪ್ರತಿಯೊಂದು ಪದವನ್ನೂ ತೂಕಮಾಡಿ ತುಂಬಿಸಿರುವರೋ ಎಂದೆನಿಸುವ ಪದಪುಂಜಗಳು, ಪ್ರತಿ ಸಾಲಿನಲ್ಲೂ ಅನುಭವಾಮೃತದ ಧಾರೆ. ಹೀಗೆ ಮಲೆನಾಡಿನ ಜೀವನದ ಸುಖ-ಸಂತೋಷಗಳು, ಎಡರು-ತೊಡರುಗಳು, ಅಗಾಧವೂ, ನಯನಮನೋಹರವೂ ಆದ ಸೃಷ್ಟಿಸೌಂದರ್ಯವನ್ನು ರಾಷ್ಟ್ರಕವಿ ಕುವೆಂಪು ಅವರಷ್ಟು ರಸವತ್ತಾಗಿ, ಮನಮುಟ್ಟುವಂತೆ ವರ್ಣಿಸಿದ ಸಾಹಿತಿ ಬೇರೊಬ್ಬರಿಲ್ಲ. ಕುವೆಂಪು ಬರೆದ "ಮಲೆನಾಡಿನ ಚಿತ್ರಗಳು" ಕೃತಿ ಮೇಲಿನ ಸಾಲುಗಳನ್ನು ಪುಷ್ಟೀಕರಿಸುತ್ತದೆ. ಪ್ರಸ್ತುತ ಕೃತಿಯಿಂದಾಯ್ದ ಸಾಲುಗಳಿವು.**

ಕುರುಡು, ಕಗ್ಗತ್ತಲೆ; ಭೀಷಣ ನೀರವತೆ. ಸ್ವಲ್ಪ ಹೊತ್ತಾಯಿತು. ಮತ್ತೂ ಸ್ವಲ್ಪ ಹೊತ್ತಾಯಿತು. ಕಾಲದ ನಡಿಗೆಯು ಸಪ್ಪಳ ಕೇಳಿಸುವಂತಿತ್ತು. ನೋಡುತ್ತಿದ್ದ ಹಾಗೆಯೇ ಇರುಳು ಕಾಣುವ ಬೆಳಕಿನ ಕನಸಿನಂತೆ ಮೂಡಣ ಬಾನೆಡೆಯಲ್ಲಿ ಏನೋ ಒಂದಿನಿತು ಹೊಳಪು ಮೈದೋರಿತು. ತಿಂಗಳು ಮೂಡಿ ಬರುವನೆಂದು ನನ್ನೆದೆ ಹಿಗ್ಗಿತು. ಆ ಮೌನ ತಿಮಿರಗಳ ಗುರುಭಾರದಿಂದ ಕುಗ್ಗಿ ನೆಲಸಮವಾಗಿದ್ದ ಮನಸ್ಸು ನಿಟ್ಟುಸಿರೆಳೆದು ನಸು ತಲೆಯೆತ್ತಿತು. ನೋಡುತ್ತಿದ್ದ ಹಾಗೆಯೇ ಕನಸು ನೆನೆಕೊನೆಯೇರಿತು. ಕಾಂತಿ ಹೆಚ್ಚಿತು. ಹೊಂಬಣ್ಣವಾಯಿತು. ಬಣ್ಣಕ್ಕೆ ಬಣ್ಣವೇರಿತು. ಪರ್ವತಶಿಖರ ಶಿರೋರೇಖೆಯಲ್ಲಿ ಬೆಳೆದಿದ್ದ ಭೀಮ ಭೂರುಹರಾಜಿ ಜ್ಯೋತ್ಸ್ನಾಪ್ರದೀಪ್ರದೀಪ್ತವಾದ ನೀಲಾಕಾಶಪಟದಲ್ಲಿ ಪಟದಲ್ಲಿ ಚಿತ್ರಿತವಾದಂತೆ ತೋರಿತು. ಉತ್ಕಂಠಿತ ಭಾವದಿಂದ ಅತ್ತಕಡೆ ಉನ್ಮೀಲಿತ ನಯನನಾಗಿ ದೃಷ್ಟಿಸಲಾರಂಭಿಸಿದೆ. ದೃಶ್ಯ ಅತ್ಯಂತ ರಮಣೀಯವಾಗಿತ್ತು. ಬೇಟೆಗಾರ ಕಬ್ಬಿಗನಾಗಿ ನೋಡಿದನು. ಮೆಲ್ಲಮೆಲ್ಲನೆ ಕತ್ತಲು ಹಿಂಜರಿಯತೊಡಗಿತು. ನೋಡುತ್ತಿದ್ದ ಹಾಗೆಯೇ ಪೂರ್ವಾಕಾಶ ಇನ್ನೂ ಪ್ರಕಾಶಮಾನವಾಯಿತು. ಶೀತಲ ಚಂದ್ರಕಿರಣಸ್ನಾತಶ್ವೇತೋರ್ಣಸದೃಶ ಖಂಡನೀರದಗಳು ನಭೋಮಧ್ಯದಲ್ಲಿ ಮೆರೆದವು. ಸ್ವಲ್ಪ ಹೊತ್ತಿನಲ್ಲಿಯೆ ಆಕಾಶಪಟಸ್ಥ ಸ್ವಲ್ಪವಿರಳ ವೃಕ್ಷಮಾಲೆಗಳ ಹಿಂಗಡೆಯಲ್ಲಿ ಸುಂದರ ಶಶಾಂಕನು ಗೋಚರವಾದನು.

ಹೊಂಗದಿರುಗಳು ಒಯ್ಯೊಯ್ಯನೆ ಅರಣ್ಯ ಪ್ರವೇಶಮಾಡಿದವು. ಕತ್ತಲು ನಿಬಿಡವೃಕ್ಷವಾಟಿಕೆಗಳಲ್ಲಿ ಅವಿತುಕೊಂಡಿತು. ಆದರೆ ಮೌನ ಎಂದಿನಂತೆ ಗಂಭೀರವಾಗಿತ್ತು. ಚಂದ್ರ ಆಕಾಶಮಾರ್ಗದಲ್ಲಿಡುವ ಹೆಜ್ಜೆಗಳ ಸದ್ದುಕೂಡ ಕೇಳಿಸುವಂತಿತ್ತು. ಘೋರ ವಿಷಣ್ಣಳಾಗಿದ್ದ ನಿಶಾವನಿತೆ ಮಧುರಪ್ರಸನ್ನೆಯಾದಳು. ರುದ್ರವಾಗಿದ್ದುದೆಲ್ಲ ರಮಣೀಯ

# ಅಚ್ಚಳಿಯದ ಪುಟಗಳು

## ಅನಾಥ ಪಕ್ಷಿ

ಪ್ರಿಯತಮೆಯ ಪ್ರೇಮಕ್ಕೂ ಮಾತೆಯ ಮಮತೆಗೂ ಇರುವ ಅಂತರವನ್ನು ತೆಲುಗಿನ ಸಾಹಿತಿ ವಿಶ್ವನಾಥ ಸತ್ಯನಾರಾಯಣ ಅವರು 'ಮಾಬಾಬು' ಕಾದಂಬರಿಯಲ್ಲಿ ವಿಶ್ಲೇಷಿಸಿದ್ದಾರೆ. ವೀರಭದ್ರ ಅವರು 'ಅನಾಥಪಕ್ಷಿ' ಶೀರ್ಷಿಕೆಯಡಿ ಆ ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. (ಪ್ರಕಾಶಕರು: ವಾಗ್ದೇವಿ ಪುಸ್ತಕಗಳು, ದೇವರಾಜ ಅರಸು ರಸ್ತೆ ಮೈಸೂರು)

"ಮಾತೃ ಪ್ರೇಮಕ್ಕೂ ಇನ್ನಿತರ ಪ್ರೇಮಗಳಿಗೂ ತುಂಬ ವ್ಯತ್ಯಾಸವಿದೆ. ಬೇರೆ ಪ್ರೇಮಗಳು ನೆರೆಯಂತೆ ಉಕ್ಕಿ ಬರುತ್ತವೆ. ಆಗ ನಾವು

ವಾಯ್ತು. ಚಂದ್ರ ಮೇಲೇರಿದನು. ಗಿರಿಶಿಖರವನ್ನು ದಾಟಿ ಬಂದನು. ಗಗನದಿಂದ್ಳಿತರುವ ಜ್ಯೋತ್ಸ್ನಾತು ಷಾರವೃಷ್ಟಿ ಹೆಣೆದುಕೊಂಡಿದ್ದ ಶಾಮಲ ಪಟಾರ್ಣ ವವನ್ನು ಸ್ವರ್ಣವರ್ಣಮಯವನ್ನಾಗಿ ಮಾಡಿ ಸಂದುಗೊಂದುಗಳಲ್ಲಿ ತೂರಿಕೊಂಡು ಬಂದು ಬನದ ಸಣ್ಣಪುಟ್ಟಗಿಡಬಳ್ಳಿ ಹೊದರುಗಳ ಮೇಲ ಮಲಗಿತು. ಬೆಳದಿಂಗಳ ಸೋನೆ ಎಡೆಬಿಡದೆ ಸುರಿ ಯಿತು. ಮರದ ನೆರಳುಗಳು ಮಾತ್ರ ಕತ್ತಲೆಗೆ ಆಶ್ರಯವಾದವು. ಅಲ್ಲಿಯೂ ಕೂಡ ಅವಿತುಕೊಂ ಡಿದ್ದ ಕತ್ತಲೆಯನ್ನು ಕಂಡುಹಿಡಿಯಬಹುದಾಗಿತ್ತು. ಜಗತ್ತೆಲ್ಲ ಚಿತ್ರೀಭೂತವಾದ ಮಧುರ ಕವನದಂ ತಿತ್ತು. ಪ್ರಕೃತಿ ಉಪಾಸಕನಾಗಿದ್ದ ನಾನು ಸೌಂದ ರ್ಯೋಪಾಸನೆಗೆ ತೊಡಗಿದೆ. ಬೇಟೆಗಾರನಿಗೆ ಬೇಟೆ ಯಾಗದಿದ್ದರೂ ಕಬ್ಬಿಗನಿಗೆ ಬೇಟೆಯಾಯಿತು ಎಂದುಕೊಂಡೆ. ಕೋವಿಯನ್ನು ತೊಡೆಯ ಮೇಲಿ ಟ್ಟುಕೊಂಡು ಬಿಡುಗಣ್ಣನಾಗಿ ನೋಡತೊಡಗಿದೆ. ಅವ್ಯಕ್ತದ ಅಂತಃಕರಣ ಮೂರ್ತಿಯಾಗಿರುವ ರತಿ ತನ್ನ ಐಶ್ವರ್ಯವನ್ನು ಮುಕ್ತಹಸ್ತೆಯಾಗಿ ಚೆಲ್ಲಿ ಸೂಸಿದ್ದಳು. ಸೊಬಗು ಸೂರೆಯಾಗಿತ್ತು. ಆದರ ಪ್ರೇಕ್ಷಕರಾರು ? ಶತಮಾನಗಳಿಂದ ಇದೇ ರೀತಿ ಯಲ್ಲಿ ಸೊಬಗು ಸೂರೆಯಾಗುತ್ತಿರುವುದು ಎಷ್ಟು ಜನ ನೋಡಿ ಅನುಭವಿಸಿದ್ದಾರೆ ? ಈ ಕಾಡಿನ ಬೆಳದಿಂಗಳು ಎನಿತೆದೆಗಳನ್ನು ವಿಕಾಸಗೊಳಿಸಿರು ವುದು ? ಈ ವಿಪಿನಚಂದ್ರಿಕೆ ಯಾರ ಆಹ್ಲಾದಕ್ಕಾಗಿ ಇಂತುದಿನವೂ ಬೇಸರವಿಲ್ಲದೆ ನಲಿಯುವುದು ? ಬಹುಶಃ ನನ್ನ ಆಗಮನವನ್ನೇ ನಿರೀಕ್ಷಿಸಿಕೊಂಡಿರಬ ಹುದೆ ? ಇದರ ತಪಸ್ಸು ಇಂದು ಫಲಿಸಿತೇ ? ಇನ್ನು ಮುಂದೆ ಹೀಗಿರುವುದಿಲ್ಲವೇ ? ಹೀಗೆಲ್ಲ ಆಲೋಚಿಸಿದೆ. ತರುವಾಯ ಕಾವ್ಯಗಳಲ್ಲಿ ಓದಿದ್ದ ಚಂದ್ರೋದಯದ ವರ್ಣನೆಗಳನ್ನು ನೆನೆದು ವಿಮ ರ್ಶಿಸಿದೆ. ಮಾತಿನ ಮಂಕುತನ ಮೇಲೆದ್ದು ತೋರಿತು. ಶಬ್ದಗಳ ಬಡತನ ಎದೆಯಲ್ಲಿ ಒಂದು ವಿಧವಾದ ನೋವನ್ನುಂಟುಮಾಡಿತು. ಈ ಚಂದ್ರೋದಯದ, ಈ ವಿಪಿನಗಳ, ಈ ಚಂದ್ರಿ ಕೆಯ ಈ ದೃಶ್ಯದ ವರ್ಣನೆ ಮಾಡಲೆಳಸುವವನೇ ಹುಚ್ಚ; ಮಾಡಿದರೂ ಸಂಪೂರ್ಣವಾಗಿ ಬಣ್ಣಿಸಿಬಿ ಟ್ಟೆನೆಂದುಕೊಳ್ಳುವವನು ಶತಮೂರ್ಖ !

ಸಂಗ್ರಹ: **ಹಾಲಸ್ವಾಮಿ ಮಲ್ಲನಗೌಡರ**

---

ಸುಖಪಡುವೆವೋ ಯಾತನೆ ಪಡುತ್ತಿರುವೆವೋ ಹೇಳಲಾರೆವು. ಹೆಣ್ಣಿನ ಬಗೆಗಿರುವ ಪ್ರೇಮ ಪಾಯಸ ಕುಡಿವಂತಿರಬಹುದು: ತಾಯಿಯ ಪ್ರೇಮ ಸಿಹಿ ನೀರನ್ನು ಕುಡಿದಂತಿರುತ್ತದೆ. ಹೆಣ್ಣಿನ ಪ್ರೇಮ-ಕಾಯ ಅತ್ಯಂತ ತಣ್ಣಗಿರುವ ಮಂಜಿನಂ ತಿರುತ್ತದೆ. ತಾಕಿದರೆ ಝಳ್ಳೆನ್ನುತ್ತಿರುವಂತಿರಬ ಹುದು. ಮಾತೃ ಪ್ರೇಮ- ಹೊಲದಲ್ಲಿ ಕಾಯ ಕಷ್ಟ ಪಟ್ಟು ದಣಿದಾಗ ಬೇವಿನ ಮರದ ಮೇಲಿಂದ ಬೀಸಿ ಬರುವ ತಂಗಾಳಿ ನಮ್ಮ ಸರ್ವಾಂಗಗಳಿಗೂ ಸೋಂಕಿ ಮೈ ಮರೆಸುವ ಸುಖದಂತಲ್ಲದೆ, ಪಟ್ಟ ಕಷ್ಟಗಳೆಲ್ಲಾ ಪರಿಹಾರವಾಗುವ ಹಾಗೆ, ಸರ್ವಧಾ ತುಗಳೂ ಉಪಶಾಂತಿ ಹೊಂದುವಂತೆ ಉದ್ವೇಗ ರಹಿತವಾದುದು, ಸೌಖ್ಯವನ್ನುಂಟುಮಾಡುವಂ ಥದು. ಹೆಣ್ಣು ನಿನ್ನನ್ನು ಪ್ರೇಮಿಸಿದರೆ ಪ್ರತಿಯಾಗಿ ನಿನ್ನಿಂದ ಎಷ್ಟೆಷ್ಟೋ ಮತ್ತೆ ಬಯಸುತ್ತಾಳೆ. ಹೆಣ್ಣಿಗೆ ನಿನ್ನ ಬುದ್ಧಿ ಕುಶಲತೆಗಳು, ನಿನ್ನ ಅಂದಚೆಂದಗಳು ಮತ್ತೆ ಇನ್ನೆಷ್ಟೋ ಬೇಕು. ಒಮ್ಮೊಮ್ಮೆ ನೀನು ಉತ್ಸಾಹದಿಂದಿದ್ದರೆ, ನೀನು ಚಾತುರ್ಯದಿಂದ ಮಾತನಾಡಿದರೆ, ಪರಿಶುದ್ಧವಾಗಿದ್ದ ಒಳ್ಳೆಯ ಉಡುಪು ಧರಿಸಿದರೆ ಅಥವಾ ನೀನು ಯಾವುದಾ ದರೂ ಅವಳ ಮೆಚ್ಚುಗೆ ಗಳಿಸುವ ಕೆಲಸ ಮಾಡಿ ದರೆ ಅವಳು ಸಂತೋಷಪಡುತ್ತಾಳೆ. ನಿನ್ನ ಬಗ್ಗೆ ಪ್ರೇಮವನ್ನು ವ್ಯಕ್ತಪಡಿಸುತ್ತಾಳೆ. ತಾಯಿ ಹಾಗಲ್ಲ. ನೀನು ರೂಪವಿಹೀನನಾಗಿದ್ದಷ್ಟೂ ನಿನ್ನನ್ನು ಹೆಚ್ಚಾಗಿ ಪ್ರೀತಿಸುತ್ತಾಳೆ. ನೀನು ಅಸಮರ್ಥನಾದಷ್ಟೂ ತಾಯಿ ನಿನ್ನನ್ನು ಅಮಿತವಾಗಿ ಪ್ರೀತಿಸುತ್ತಾಳೆ. ನೀನು ಅದಾವಾಗಲಾದರೂ ಮೌಢ್ಯದಿಂದ ಮಾತ ನಾಡಿದರೆ- 'ಅಯ್ಯೋ ಮಗೂ, ನಿನಗೆ ಸರಿಯಾಗಿ ಮಾತನಾಡಲೂ ಬರೋಲ್ಲವಲ್ಲಪ್ಪಾ? ಹೇಗೆ ಬದು ಕುತ್ತೀಯೋ ಏನೋ...' ಎಂದು ತನ್ನ ವಾತ್ಸಲ್ಯವ ನ್ನೆಲ್ಲಾ ಸುರಿಸುತ್ತಾಳೆ."

ಸಂಗ್ರಹ: **ವೀರಭದ್ರ**

# ಜಗತ್ತಿನಲ್ಲಿ ಎಂಥೆಂಥಾ ಜನ!

• ವೃಷಭೇಂದ್ರಯ್ಯ

ದುಡ್ಡಿದ್ದವನೇ ದೊಡ್ಡಪ್ಪ: ಅವನಿಗೇ ಮನ್ನಣೆಯ ಮಣೆ ಎಂಬುದು ಎಂದಿನಿಂದಲೋ ಬೆಳೆದು ಬಂದ ನೀತಿ. ಆದರೆ 'ದಟ್ಟ ದರಿದ್ರ ಶ್ರೇಷ್ಠ' ಎಂಬ ಪ್ರಶಸ್ತಿಯೂ ಒಂದಿದೆ ಎಂದರೆ ಅಚ್ಚರಿಪಡದೆ ಇರಲಾಗುತ್ತದೆಯೆ?

ಹೌದು. ವ್ಯಾಂಕೋವರ್ ದ್ವೀಪದ 'ಕ್ವಾಕಿಯೂಟಲ್' ಎಂಬ ಜಾತಿಯಲ್ಲಿ ದುಡ್ಡಿದ್ದವರಿಗೆ ಏನೇನೂ ಮರ್ಯಾದೆಯಿಲ್ಲ. ಏನಿದ್ದರೂ ಕೈ ಖಾಲಿಯಿರುವ ಕಂಗಾಲನಿಗೇ ಅಲ್ಲಿ ಗೌರವ. ಅಷ್ಟೇ ಅಲ್ಲ, ವರ್ಷಕ್ಕೊಮ್ಮೆ ನಡೆಯುವ ಸ್ಪರ್ಧೆಯಲ್ಲಿ 'ದಟ್ಟ ದರಿದ್ರ ಶ್ರೇಷ್ಠ' ಪ್ರಶಸ್ತಿ ಪಡೆಯಲು ಆ ಜನ ನಾ ಮುಂದು ತಾ ಮುಂದು ಎಂದು ತುರುಸಿಗೆ ನಿಲ್ಲುತ್ತಾರಂತೆ. ಈ ಪ್ರಶಸ್ತಿಯ ಗೌರವವನ್ನು ತಮ್ಮದಾಗಿಸಿಕೊಳ್ಳುವ ಇಚ್ಛೆಯಿಂದ ಶ್ರೀಮಂತರು ಕೂಡ ಆಸ್ತಿ-ಪಾಸ್ತಿ, ಧನ-ಕನಕಗಳನ್ನೆಲ್ಲ ದಾನ ಮಾಡಿಯೋ, ಇಲ್ಲ ಇನ್ನಿತರ ಮಾರ್ಗಗಳನ್ನನುಸರಿಸಿ ಖರ್ಚು ಮಾಡಿಕೊಂಡೋ ಸ್ಪರ್ಧಾಳುಗಳಾಗುತ್ತಾರಂತೆ. ಆದರೆ ನಿರ್ಣಾಯಕರೂ ತುಂಬ ಚಾಣಾಕ್ಷರು. ಯಾರು ಅತಿ ಹೆಚ್ಚು ಕಾಲದಿಂದ ದರಿದ್ರರಾಗೇ ಮುಂದುವರಿದುಕೊಂಡು ಬಂದಿದ್ದಾರೆ ಎನ್ನುವುದನ್ನು ಗಮನಿಸಿಯೇ ಅವರು ಪ್ರಶಸ್ತಿಯನ್ನು ಪ್ರಕಟಿಸುವುದು.

ದಾರಿದ್ರ್ಯದಲ್ಲೇ ಬೆಳೆದು ಬಂದವರಿಗೆ ಈ ಪ್ರಶಸ್ತಿಯಿಂದ ಮಾನಸಿಕ ನೆಮ್ಮದಿ ದೊರೆಯುತ್ತದೆನೋ ನಿಜ. ಆದರೆ ಪ್ರಶಸ್ತಿಗಾಗಿಯೇ ಕೈ ಖಾಲಿ ಮಾಡಿಕೊಂಡವನ ಗತಿ? ಇಂಥ ಎಷ್ಟೋ ಮಂದಿ ಅವಮಾನದಿಂದ ಆತ್ಮಹತ್ಯೆ ಮಾಡಿಕೊಂಡದ್ದೂ ಉಂಟಂತೆ.

## ಮುಖ ತೋರಬಾರದ ಗಂಡು

ಸಹಾರಾ ಮರುಭೂಮಿಯ ನಿವಾಸಿಗಳ ಪೈಕಿ 'ತೂರಾಂಗ' ಎಂಬೊಂದು ಪಂಗಡವಿದೆ. ಈ ಜಾತಿಯ ಯಾವನಾದರೂ ಗಂಡಸು ಬೀದಿಯಲ್ಲೇನಾದರೂ ಮುಖ ತೋರಿಸಿಕೊಂಡು ತಿರುಗಾಡಿದನೋ ಮುಗಿಯಿತು ಅವನ ಕಥೆ. ಸಮಾಜ ನಿಯಮವನ್ನು ಉಲ್ಲಂಘಿಸಿದ ಈ 'ಉಚ್ಛೃಂಖಲ'ನಿಗೆ ಉಗುರಿನಿಂದ ಗೀರಿ ಗಾಯ ಮಾಡುವುದರಿಂದ ಹಿಡಿದು ಉಪವಾಸ ಕೆಡವಿ ಕೊಲ್ಲುವವರೆಗೆ ನಾನಾ ರೀತಿಯ ಶಿಕ್ಷೆಗಳಿವೆ.

ಆ ಸಮಾಜದಲ್ಲಿ ಹೆಂಗಸಿಗೇ ಹೆಚ್ಚು ಸ್ವಾತಂತ್ರ್ಯ. ಆಕೆ ಮುಖ ತೆರೆದುಕೊಂಡೇ ತಿರುಗಾಡಬಹುದು. ಹಾಂ, ಗಂಡಸಿಗೆ ಮಾತ್ರ ನೀಲಿ ಬಣ್ಣದ ಬುರ್ಖಾ ಹಾಗೂ ಅದಕ್ಕೆ ಹೊಂದಿಕೊಂಡಂತೆ ಒಂದು ಬಿಳಿ ಟೊಪ್ಪಿಗೆಯ ದಿರಿಸು ಅತ್ಯವಶ್ಯ. ಎಲ್ಲಾ ಗಂಡಸರೂ ಹೀಗೇ ಕಾಣುವುದರಿಂದ ತನ್ನವನನ್ನು ಗುರುತಿಸಲು ಆ ಹೆಂಗಸರು ಪ್ರತ್ಯೇಕವಾದ ಚಿನ್ಹೆಯೊಂದನ್ನು ತಮಗೆ ಮಾತ್ರ ಕಾಣುವಂತೆ ಆ ಬುರ್ಖಾದ ಮೇಲೆ ಹಾಕಿಡುವುದಿದೆ.

## ಶವಕ್ಕೆ ಪಟ್ಟಾಭಿಷೇಕ

ಪೋರ್ತುಗಾಲದ ದೊರೆ ಡಾಮ್ ಪೆದ್ರೋಗೆ ಒಮ್ಮೆ ಏಕಾಏಕೀ ಏನಾಯಿತೋ. ತನ್ನ ಅಧಿಕಾರಿಗಳನ್ನು ಕರೆದುಕೊಂಡು ಸ್ಮಶಾನಕ್ಕೆ ನಡೆದ. ಒಂದು ಸಮಾಧಿಯನ್ನು ಅಗೆಸಿ ಅಲ್ಲಿದ್ದ ಶವವನ್ನು ಹೊರಕ್ಕೆ ತೆಗೆಸಿದ. ಅರಮನೆಗೆ ಅದನ್ನು ಸಾಗಿಸಿ ನಾಲ್ಕಾರು ಸಲ ಸ್ನಾನ ಮಾಡಿಸಿ ಮೈಗೆಲ್ಲ ಸುಗಂಧ ದ್ರವ್ಯಗಳನ್ನು ಪೂಸುವಂತೆ ಹೇಳಿದ. ಆ ಮೇಲೆ ಅದಕ್ಕೆ ಅತ್ಯಂತ ಬೆಲೆ ಬಾಳುವ ರಾಜ ಪೋಷಾಕು ಮತ್ತು ಆಭರಣಗಳನ್ನು ತೊಡಿಸುವಂತೆ ಆಜ್ಞೆಮಾಡಿದ. ಎಲ್ಲ ಮುಗಿದ ಮೇಲೆ ಶೃಂಗರಿಸಿದ ಆ ಹೆಣವನ್ನು ರಾಜಸಿಂಹಾಸನದ ಮೇಲಿಟ್ಟು ಪಟ್ಟಾಭಿಷೇಕ ಮಾಡುವಂತೆ ಪುರೋಹಿತರಿಗೆ ಹೇಳಿ, ಅವರು

ಹಾಗೆ ಮಾಡುತ್ತಿರುವಾಗ ಕಣ್ಣೀರು ಸುರಿಸುತ್ತ ಕುಳಿತುಕೊಂಡ.

ಅದು ಆತನ ಪ್ರೇಯಸಿ ಇನೆಸ್‌ಳ ಶವ. ಮದುವೆಗೆ ನಾಲ್ಕು ದಿನ ಮೊದಲೇ ಆಕೆ ದುಷ್ಕರ್ಮಿಗಳಿಂದ ಕೊಲ್ಲಲ್ಪಟ್ಟಿದ್ದಳು.

## ೧೫೦೦೦ ಹೆಂಡಂದಿರು?

ಚೀನದ ಮಹಾಗೋಡೆಯ ಹಿಂದೆ ಒಂದು ವಿಚಿತ್ರ ಕಥೆ ಅಡಗಿದೆ. ಈ ವಿಶಾಲ ಗೋಡೆಯನ್ನು ಕಟ್ಟಿಸಿದಾತ ಸಮ್ರಾಟ ಚಿಂಗ್ ಶಿ ವಾನ್. ಆತನ ಅರಮನೆಗೂ ಒಂದು ವೈಶಿಷ್ಟ್ಯವಿತ್ತು. ನಮ್ಮ ಶ್ರೀಕೃಷ್ಣ ಪರಮಾತ್ಮನಿಗಿಂತ ಕೇವಲ ಒಂದು ಸಾವಿರ ಕಡಿಮೆಯಂತೆ ಚಿಂಗ್ ಶಿ ವಾನ್‌ನ ಹೆಂಡಂದಿರ ಸಂಖ್ಯೆ. ತನ್ನ ಅರಮನೆಯಲ್ಲಿ ಅವರಿಗಾಗಿ ಒಟ್ಟು ೧೫೦೦೦ ಕೋಣೆಗಳನ್ನು ಆತ ಕಟ್ಟಿಸಿದ್ದನಂತೆ. ಈ ಒಂದೊಂದು ಕೋಣೆಯೂ ಒಂದೊಂದು ಪ್ರತ್ಯೇಕ ಅಂತಃಪುರವೆ.

ಶಿ ವಾನ್‌ನ ಮರಣಾನಂತರ ಆ ಎಲ್ಲಾ ೧೫೦೦೦ ರಾಣಿಯರನ್ನು ಅವರ ದಾಸಿಯರ ಸಹಿತ ಮಹಾ ಗೋಡೆಯಲ್ಲಿ ಸಾಲಾಗಿ ದಫನು ಮಾಡಲಾಯಿತೆಂದು ಚೀನದ ಜನ ಹೇಳುತ್ತಾರೆ.

## ಶ್ವಾನ ಭೋಜನ ಕೂಟ....

ಅಬ್ಬಾ! ಭೋಜನ ಕೂಟವೆಂದರೆ ಹೀಗಿರಬೇಕು. ನೋಡಿದರೇ ಕಣ್ಣಿಗೂ ಬಾಯಿಗೂ ಹಬ್ಬ! ಆದರೆ ಸ್ವಲ್ಪ ತಡೆಯಿರಿ, ಬಾಯಲ್ಲಿ ನೀರೂರಿಸಿಕೊಂಡು ತಟ್ಟೆಗಳೆಡೆ ಕೈ ಚಾಚೀರಿ. ಆ ಭೋಜನ ಕೂಟ ಏರ್ಪಟ್ಟದ್ದು ಮನುಷ್ಯರಿಗಾಗಿ ಅಲ್ಲ; ನಾಯಿಗಳಿಗಾಗಿ. ಹೌದು ಸ್ವಾಮಿ, ಮಹಾಮಹಿಮ, ಶ್ರೀಮಂತ ಫ್ರಾನ್ಸಿಸ್ ಹೆನ್ರಿ ಇಗ್ಟನ್‌ನ ಪ್ರೀತಿಯ ಶ್ವಾನ ಸಂಕುಲಕ್ಕಾಗಿ. ಹಾಂ, ಆ ನಾಯಿಗಳೆಲ್ಲ ಬಾಲ ಅಲ್ಲಾಡಿಸಿಕೊಂಡು, ನಾಲಗೆ ಹೊರಚಾಚಿ, ಜೊಲ್ಲು ಸುರಿಸುತ್ತ ಔತಣಕ್ಕೆ ಆಗಮಿಸುತ್ತಿದ್ದವೆಂದು ನೀವು ಭಾವಿಸಿದ್ದರೆ ಅದು ತಪ್ಪು. ಅವೆಲ್ಲ ತಮ್ಮ ಪದವಿಗೆ ಯೋಗ್ಯವಾದ ಪೋಷಾಕು ಧರಿಸಿ, ಜರಿಯ ಲೇಸು ಸಹಿತದ ಪಾದರಕ್ಷೆಗಳನ್ನು ಮೆಟ್ಟಿಕೊಂಡು ಬಲು ಗಾಂಭೀರ್ಯದಿಂದ ಹೆಜ್ಜೆಯಿಕ್ಕುತ್ತ ಪ್ರವೇಶಿಸುತ್ತಿದ್ದವು. ಊಟ ಮಾಡುವಾಗಲೂ ಅಷ್ಟೆ. ಕಂಡಿದ್ದೇವೆಯೋ ಇಲ್ಲವೋ ಎಂಬಂತೆ ಗಬಗಬ ತಿಂದುಬಿಡುತ್ತಿರಲಿಲ್ಲ. ಪ್ರತಿಯೊಂದನ್ನೂ ಸ್ವಲ್ಪ ಸ್ವಲ್ಪವೇ ರುಚಿ ನೋಡುತ್ತ, ಆಗೀಗ ತಮ್ಮ ಅಕ್ಕ-ಪಕ್ಕ, ಎದುರು ಬದುರು ಕುಳಿತ ಬಾಂಧವರೆಡೆ ನೋಡುತ್ತ ಮೌನ ಸಂಭಾಷಣೆಯೊಂದಿಗೆ ಮೆಲ್ಲುವಿಕೆಯನ್ನು ಮುಂದುವರಿಸುತ್ತಿದ್ದವು.

## ಹೆಂಡತಿ?!

ತವರಿನಲ್ಲಿದ್ದ ಹೆಂಡತಿಯನ್ನು ಕರೆದೊಯ್ಯಲೆಂದು ಬಂದ ಆತನಿಗೆ ಆಘಾತವಾಯಿತು. ಮುದ್ದಿನ ಮಡದಿ ಆದಾಗಲೇ ತನ್ನ ಮೊದಲಿನ ಪ್ರಿಯಕರನೊಂದಿಗೆ ಓಡಿ ಹೋಗಿದ್ದಳು. ಆದರೆ ಮನೆಯಲ್ಲಿ ಹೆಂಡತಿಯನ್ನು ಕರೆತರುತ್ತೇನೆಂದು ಹೇಳಿ ಬಂದವನಿಗೆ ತಾನೊಬ್ಬನೇ ವಾಪಸ್ಸು ಹೋಗುವುದು ಹೇಗೆಂಬ ಚಿಂತೆ. ಆ ರಾತ್ರಿಯೆಲ್ಲ ಯೋಚಿಸಿದ ಆತನಿಗೆ ಉಪಾಯವೊಂದು ಹೊಳೆಯದೇ ಇರಲಿಲ್ಲ. ಹೇಗೂ ತನ್ನ ಅತ್ತೆ ವಿವಾಹ ವಿಚ್ಛೇದಿತೆ. ಆಕೆಯನ್ನೇ ಕಟ್ಟಿಕೊಂಡರೆ ಹೇಗೆ?

ಮರುದಿನ ಮುಂಜಾನೆಯೇ ಈ ಪ್ರಸ್ತಾಪವನ್ನು ಅತ್ತೆಯ ಮುಂದೆ ಇಟ್ಟ. ಆಕೆ 'ಹೂಂ' ಎಂದು ಬಿಟ್ಟಳು. ಸರಿ, ಇಬ್ಬರೂ ಆ ಊರಿಂದ ಹೊರಟು ದಾರಿಯಲ್ಲಿನ ದೇವಾಲಯದಲ್ಲಿ ಮಾಲೆ ವಿನಿಮಯಿಸಿಕೊಂಡರು.

ಅಂತೂ ಹೆಂಡತಿಯನ್ನು ಕರೆತರಲು ಹೋಗುತ್ತಿದ್ದೇನೆ ಎಂದವ ನಿಜಕ್ಕೂ ಹೆಂಡತಿಯನ್ನು ಕರೆತಂದೇ ಬಿಟ್ಟ.

ಅಂದ ಹಾಗೆ ನಮ್ಮಲ್ಲಿ ಸಹಸ್ರಾರ್ಜುನ ಸೋಮವಂಶೀಯ ಕ್ಷತ್ರಿಯ ಯುವಕರು ತಮಗೆ ಮದುವೆ ಮಾಡಿಕೊಳ್ಳುವ ವಯಸ್ಸು-ಮನಸ್ಸು ಎರಡೂ ಆಗಿದೆ ಎಂಬುದನ್ನು ಮನೆಯವರಿಗೆ ತಿಳಿಯಪಡಿಸಲು ಏನಾದರೂ ವಸ್ತುವನ್ನು ಕದ್ದುಕೊಂಡು ಸೊಂಡೂರಿಗೆ ಓಡಿ ಹೋಗುವುದಿಲ್ಲವೆ? ಹಾಗೆಯೇ ಆಸ್ಟ್ರೇಲಿಯದ ಆದಿವಾಸಿಗಳಲ್ಲಿ ವಿಧುರ ತಾನು ಮದುವೆಯಾಗಬಯಸಿದುದನ್ನು ಸಮಾಜಕ್ಕೆ ತಿಳಿಯಪಡಿಸಲು ಗದ್ದ-ಗಲ್ಲಗಳಿಗೆ ರಾಡಿ ಹಚ್ಚಿಕೊಂಡು ತಿರುಗಾಡತೊಡಗುತ್ತಾನಂತೆ. ಇದನ್ನು ಅರಿತ ಸಮಾಜದ ಹಿರಿಯರು ಕೂಡಲೇ ಸೂಕ್ತ ಏರ್ಪಾಡು ಮಾಡುತ್ತಾರಂತೆ. ●

ಮಾತು-ಮಾಣಿಕ್ಯ

೨೦

# ಕೈಯ ಕಸರತ್ತು

ಕೈ ಹಿಡಿದ ಗಂಡ ಕೈಲಾಸ ಕಂಡ. ಕೈ ಮೀರಿ ಹೋದ ಕಾಯಿಲೆಗೆ ತುತ್ತಾದಾಗ ಯಾವ ವೈದ್ಯನ ಕೈಗುಣ ಏನು ತಾನೇ ಮಾಡೀತು? ಅಂತಕನ ದೂತರು ಕೈ ಸನ್ನೆ ಮಾಡಿ ವಿಶಿಷ್ಟ ವ್ಯಕ್ತಿಯನ್ನು ಕರೆದು ಪಾಶವನ್ನು ಬಿಗಿದು ಸೆಳೆದೊಯ್ಯುವಾಗ ಕೈ ಮುಗಿದು ಬೇಡಿಕೊಳ್ಳುವುದರಿಂದ ಏನು ಪ್ರಯೋಜನ? ಊರ ಹೊರಗಣ ದೊಡ್ಡ ಕೈಗಾರಿಕಾ ಸ್ಥಾವರವೊಂದರಲ್ಲಿ ಮನಮುಟ್ಟ, ಮೈಮುರಿದು ದುಡಿದು ಕೈ ತುಂಬ ಸಂಬಳ ತರುವ ಪತಿರಾಯನನ್ನು ಕಳೆದುಕೊಂಡ ಹತಭಾಗಿನಿ ಕಮಲಮ್ಮ ಕಂಗೆಟ್ಟು ಕೈ ಕೈ ಹಿಸುಕಿಕೊಂಡಳು. ಮುಂಗಾಣದೇ ತಲೆಗೆ ಕೈ ಹಚ್ಚಿಕೊಂಡು ಕುಳಿತ ಆಕೆಗೆ ಮುದ್ದಾದ ಕೈಗೂಸೊಂದನ್ನುಳಿದು ಆತನು ಬಿಟ್ಟು ಹೋದುದು ಸ್ನೇಹದ ನೆನಪು ಮಾತ್ರ. ಇನ್ನೇನು ಗತಿ? ಎಂದು ಕಳವಳಿಸಿ ಕಿರುಚಿದಳು. ಹೀಗೆ ಕೈಕಟ್ಟಿಕೊಂಡು ಕುಳಿತುಕೊಳ್ಳುವುದು ಎಷ್ಟು ಕ್ಷಣ? ಎಷ್ಟು ದಿನ? ಹೊಟ್ಟೆ ಕೇಳಬೇಕಲ್ಲ?....

ಮದುವೆಯ ಕಾಲಕ್ಕೆ ಅಗ್ನಿ ಸಮಕ್ಷಮ ಅಗ್ನಿದೇವನಿಗೆ ಕೈ ಜೋಡಿಸಿ "ಎಂದೆಂದಿಗೂ ನಿನ್ನ ಕೈ ಬಿಡಲಾರೆ" ಎಂದು ತನಗೆ ಭರವಸೆಯಿತ್ತವನು ಅದನ್ನೆಲ್ಲ ಮರೆತು ಈಗ ಸಂಸಾರದ ನಡುನೀರಿನಲ್ಲಿ ಕೈ ಬಿಟ್ಟು ಹೋಗಿದ್ದ. ಈಗೇನು ಮಾಡುವುದು ಕುಲದೈವತವನ್ನು ನೆನೆದು ಕೈ ಜೋಡಿಸಿ ಬೇಡಿಕೊಂಡಳು "ದಾರಿಯ ತೋರೋ ಮುಕುಂದಾ" ಎಂದು.

ಅವರಿವರ ಮನೆಯಲ್ಲಿ ಕೈಂಕರ್ಯ ಕೈಕೊಂಡು ಆ ಕೆಲಸ ಈ ಕೆಲಸ ಕೈಗೆತ್ತಿಕೊಳ್ಳಬೇಕೆ? ಏಕೋ ಮನಸ್ಸು ಚುರ್ರೆಂದಿತು. ಇದುವರೆಗೆ ಮರ್ಯಾದೆಯಿಂದ ಬಾಳಿದವಳು. ಬಾಳುವೆಯಲ್ಲಿ ಇತ್ತೀಚೆ ಕಾಲಿರಿಸಿ ಮರ್ಯಾದೆಯೊಂದಿಗೆ ಬಾಳುತ್ತಿರುವ ತಾನು ಒಮ್ಮೆಲೇ ಹೆರವರ ಕೈ ಕೆಳಗೆ ಆಳಾಗಿ ಹೇಳಿದಂತೆ ಕೇಳಿಕೊಂಡು ಉಳಿಯಲಾದೀತೆ? ಕಾಲ ಕಳೆಯಲಾದೀತೆ? ಅನ್ಯರ ಕೈ ಕಾಲು ಹಿಡಿದುಕೊಂಡು ಅವಹೇಳನದ ಕೀಳುತನದ ಸ್ಥಿತಿ ತನಗೆ ಬಂದೊದಗಿತಲ್ಲ? ಅದಾವ ಪಾಪ ತಾನು ಮಾಡಿದ್ದೆನೋ? ಕ್ರೂರ ದೈವ ಕೈ ಕೊಟ್ಟಿತಲ್ಲ? ಯೋಚನೆ ಬಗೆಹರಿಯಲಿಲ್ಲ. ನರಿಗೆ ಎತ್ತರದಲ್ಲಿ ತೂಗುತ್ತಿದ್ದ ಸಿಹಿ ದ್ರಾಕ್ಷಿ ಗೊಂಚಲು ಕೈಗೆಟುಕದೇ ಉಳಿದಂತಾಯಿತು.

ಹಗೆಯ ಕೈಗೆ ಸಿಕ್ಕ ಯೋಧ ಕೈ ಚಳಕ ತೋರಿಸಿ ತನ್ನನ್ನು ತಾನೇ ಬಿಡಿಸಿಕೊಳ್ಳುವಂತೆ ಆಳವಾದ ಚಿಂತೆಗೆ ಕೈವಶವಾದ ಆಕೆ ತನ್ನನ್ನು ತಾನೇ ಬಿಡಿಸಿಕೊಳ್ಳಲು ಹೆಣಗಿದ್ದೇ ಹೆಣಗಿದ್ದು. ತನ್ನ ಈಗಣ ದುರ್ಗತಿಗೆ ಬರಿದೇ ದೈವವನ್ನು ದೂರಿ ಏನು ಪ್ರಯೋಜನ? ದೈವದ ಮೇಲೆ ಕೈ ಊರಿ ಬದುಕುವುದು ತನ್ನಂತಹಳಿಗೆ ಎಷ್ಟೂ ಹಿಡಿಸದು. ತನ್ನ ಪತಿರಾಯ ಬದುಕಿನುದ್ದಕ್ಕೂ ದುಡಿಮೆಯ ಪೂಜಾರಿ. ಪ್ರಾಮಾಣಿಕ ಕಾಯಕದ ನಿಷ್ಠಾವಂತ ಕೈವಾರಿ. ಆತನ ನಡೆನುಡಿ ಸೌಜನ್ಯ- ಸರಳತೆಗೆ ಕೈಗನ್ನಡಿ. ಬಾಳಿನ ಸಂಕಟದ ಇರುಕಿನ ಇರುಳಿನಲ್ಲಿ ಆತನು ನೀಡುತ್ತಿದ್ದ ಅಪಾರ ವಿಶ್ವಾಸದ ಸಾಂತ್ವನದ ವಚನವೇ ಅವಳಿಗೆ ಕೈದೀವಿಗೆ.

ಬಾಳಿನ ಸೆಳುವಿನಲ್ಲಿ ತಾವಿಬ್ಬರೂ ಎಂದೆಂದಿಗೂ ಕೈ ಹಿಡಿದುಕೊಂಡೆ ಈಸುವವರು ಎಂದು ಹೇಳುತ್ತಿದ್ದ ಪತಿರಾಯ ಅಂದೇಕೆ ಬಸ್ಸಿನ ಫುಟ್‌ಬೋರ್ಡ್ ಮೇಲೆ ನಿಂತುಕೊಂಡು ಮನೆಗೆ ಮರಳಲು ಯೋಚಿಸಿದನೋ? ಕಾಕತಾಳೀಯವೆಂಬಂತೆ ಲಾರಿ ಅಪ್ಪಳಿಸಿ ಬಸ್ಸಿನ ಪ್ರವೇಶದ ಬಳಿ ನಿಂತುಕೊಂಡವರು ಕೈ ಜಾರಿ ಹೊರಕ್ಕೆ ದೂಡಲ್ಪಡಬೇಕೆ? ಇದೆಲ್ಲ ಕ್ರೂರ ದೈವದ ಕೈವಾಡ ಎಂದುಕೊಂಡಳು. ಥೂ ಮತ್ತೆ ದೈವದ ಯೋಚನೆಯೆ?

ಬೇಡ, ಬೇಡ ಅದರ ನೆನಪು ಕೂಡ ಬೇಡ.

ಹಾಗಾದರೆ ಈಗೇನು ಮಾಡುವುದು? ದೇವರು ಕೈ ಕೊಟ್ಟಿದ್ದಾನೆ! ಎಂದರೆ ಮೋಸ ಮಾಡಿದ್ದಾನೆ ಎಂದಲ್ಲ. ದುಡಿಯಲು ಕೈಗಳನ್ನು ಕರುಣಿಸಿದ್ದಾನೆ. ಆದರೆ ಮನುಷ್ಯ? ತನ್ನ ಮೈಗಳ್ಳತನದಿಂದಾಗಿ ಕೈ ಕೊಟ್ಟ ದೇವರಿಗೇ ಕೈ ಕೊಡುತ್ತಾನೆ. ತಾನು ಹಾಗಾಗಬಾರದಲ್ಲ.

ಹುಲು ಮಾನವನಂತೆ ತಾನು ದೈವದ ಕೈಗೊಂಬೆ ಎಂದು ಭಾವಿಸಲು ಅವಳ ಮನಸ್ಸು ಒಪ್ಪದು. ತಾನೇ ತನ್ನ ಕೈಯಾರೆ ಬೆಳೆಸಿದ ಕೈದೋಟದಿಂದ ಹೂವೊಂದನ್ನು ತೆಗೆದು ದೇವನಡಿಗಳಲ್ಲಿ ಇರಿಸುವಂತೆ ತನ್ನ ಪತಿರಾಯನು ಮನದಲ್ಲಿ ಬಿತ್ತಿಬೆಳೆದ ವಿಚಾರವನ್ನೇ ಆತನ ಸ್ಮೃತಿಗೆ ಸಮರ್ಪಿಸಲೆಂದು ತನ್ನ ಕಾಲ ಮೇಲೆ ತಾನು ನಿಲ್ಲಬೇಕೆಂದು ನಿರ್ಧರಿಸಿದಳು.

ಪದೇ ಪದೇ ಆತ ಹೇಳುತ್ತಿದ್ದ ಮನುಷ್ಯ ಎಂದಿಗೂ ಕೈಲಾಗದ ಹೇಡಿಯಾಗಕೂಡದು. ಕೈ ಸಾಗದಂತಹ, ಕೈ ನಿಂತುಹೋಗುವಂತಹ ಕಠಿಣ ಪ್ರಸಂಗಗಳಲ್ಲಿ ಕೂಡ ಹೆರವರಿಗೆ ಕೈಯೊಡ್ಡುವ ಮತಿಯನ್ನು ನೀಡದಿರು ದೇವಾ ಎಂದು ಬೇಡಿಕೊಳ್ಳುತ್ತಿದ್ದ. ರಣರಂಗದಲ್ಲಿ ಸೋತವರು ಕೈಯೆತ್ತುವಂತೆ, ಶಾಸನಸಭೆಗಳಲ್ಲಿ ತಮ್ಮ ಪಕ್ಷ ಹೇಳುವುದಕ್ಕೆಲ್ಲ ಯಾಂತ್ರಿಕವಾಗಿ ಕೈಯೆತ್ತುವಂತಹ ಮಂದಮತಿ ಶಾಸಕರಂತೆ, ಮಾನವನು ಬಾಳಿನ ರಣರಂಗದಲ್ಲಿ, ದೈವದ ಶಾಸನ ಸಭೆಯಲ್ಲಿ ಕೈಯೆತ್ತಿ ನಿಲ್ಲುವ ಹೀನ ಅವಸ್ಥೆಗೆ ಗುರಿಯಾಗಕೂಡದು ಎನ್ನುತ್ತಿದ್ದ. ಇಂತಹ ಆತನ ನುಡಿಗಳು, ನೆನಹುಗಳು ಮರುಕಳಿಸುತ್ತಿರಲು ಅದೇ ತನ್ನ ಮುಂದಿನ ಬಾಳಿಗೆ ಕೈಪಿಡಿ ಎಂದುಕೊಂಡಳು.

ಕಮಲಮ್ಮನ ಪತಿರಾಯನಿಗೆ "ಕೈ ಕೆಸರಾದರೆ ಬಾಯಿ ಮೊಸರು" ಎಂಬುದು ಬರೀ ಗಾದೆಯ ಮಾತಲ್ಲ. ಅದರ ತಿರುಳನ್ನು ತನ್ನ ಬಾಳಿನಲ್ಲಿ ಪ್ರತ್ಯಕ್ಷವಾಗಿ ಇಳಿಸಿದವ. ತಾನು ಕಂಡದ್ದನ್ನು ಕಂಡಂತೆ ನುಡಿಯುವವನೇ ಹೊರತು ಯಾವ ಕೈಗಂಟೂ ಸೇರಿಸುವವನಲ್ಲ. ಕಚೇರಿಗಳಲ್ಲಿ ಕೆಲಸ ಮಾಡುವ ಹಲವರು 'ಗಿಂಬಳ'ಕ್ಕೆ ಕೈಚಾಚಿ ಕಳ್ಳಗಂಟಿಗೆ ಗಂಟು ಬೀಳುವಂತೆ ಈತನಲ್ಲ. ಕವಲುದಾರಿಯಲ್ಲಿ ಕಂಬಕ್ಕೆ ತೂಗುಬಿಟ್ಟ ಮರದ ಕೈಫಲಕವು ಮುಂದೆ ಕ್ರಮಿಸಬೇಕಾದ ಸರಿಯಾದ ದಾರಿ ತೋರುವಂತೆ ತನ್ನ ಪತಿಯ ಬದುಕೇ ಒಂದು ಬೆಳಗುವ ಕೈದೀವಿಗೆ. ಅವಳಿಗೆ ಇಂದಿನ ಸಂಕಟ ಸಮಯದಲ್ಲಿ ಹಾಗಾದರೆ ಈಗ ತಾನು ಎಂತಹ ಯೋಜನೆಗೆ ಕೈ ಹಾಕುವುದು? ಯೋಚಿಸಿಯೇ ಯೋಚಿಸಿದಳು.

ಕೊನೆಗೊಂದು ನಿರ್ಧಾರಕ್ಕೆ ಬಂದಳು. "ಈಗ ದೌರ್ಭಾಗ್ಯದಿಂದಾಗಿ ಬಳೆಗಳು ಕೈಯಿಂದ ಕಳಚಿ ಹೋಗಿದ್ದರೂ ಅವುಗಳಿಗಾಗಿ ಕಳವಳಿಸದೇ ಆ ಕೈಗಳನ್ನೇ ಕಳಕಳಿಯಿಂದ ದುಡಿಸುವುದು." ಬೆಳಗಿನ ಹೊತ್ತು ಮನೆಗೆಲಸ ಹಗಲೆಲ್ಲ, ಕೈಗಳಿಗೆ ಕುಶಲ ಕೈಗಾರಿಕೆ ಕೆಲಸ, ಬೊಂಬೆ ಮಾಡುವುದು, ಕಸೂತಿ ಹಾಕುವುದು, ಮಕ್ಕಳಿಗೆ ಮುದ್ದು ಮುದ್ದಾದ ಬಗೆಬಗೆಯ ಆಟಿಗೆ ಸಾಮಾನುಗಳನ್ನು ಸಿದ್ಧಪಡಿಸುವುದು. ಎಲ್ಲವೂ ಕೈಗೆಲಸಗಳೇ. ತನ್ನ ಪತಿಯಂತೆಯೇ ಕೈಗಡಿಯಾರಕ್ಕೆ ದುಡಿಯುವ ಛಲವಿರಿಸಿಕೊಳ್ಳುವುದು. ಅದರ ಎರಡು ಮುಳ್ಳುಗಳಂತಿರುವ ತನ್ನ ಎರಡು ಕೈಗಳು ಸತತ ಉತ್ಸಾಹ, ಉಲ್ಲಾಸಗಳ ಸಂಕೇತಗಳು. ಸಿದ್ಧಪಡಿಸಿದ ವಸ್ತುಗಳನ್ನು ಅಂದವಾದ ಕೈಗಾಡಿಯಲ್ಲಿರಿಸಿ ಪೇಟೆಯವರೆಗೆ ಕೈಯಾರೆ ನೂಕಿಕೊಂಡು ಹೋಗಿ ಅವುಗಳ ವಿಕ್ರಯಕ್ಕೆ ಯೋಜಿಸುವುದು. ವಿಧಿಯೊಡನೆ ಕೈ ಕೈ ಮಿಲಾಯಿಸುವ ಗೋಜಿಗೆ ಹೋಗದೇ ತನ್ನ ಬಾಳಿನ ಆಶೆ ಆಕಾಂಕ್ಷೆ ಕೈಗೂಡುವಂತೆ ಆ ವಿಧಿಯೇ ತನಗೆ ನೆರವಿನ ಕೈ ಚಾಚಲಿ ಎಂದು ಅದನ್ನೇ ಯಾಚಿಸುವುದೇ? ಕೈಯ ತುದಿಯಲ್ಲಿ ಲಕ್ಷ್ಮಿ, ಮಧ್ಯದಲ್ಲಿ ಸರಸ್ವತಿ, ಮೂಲದಲ್ಲಿ ಗೌರಿ ನೆಲೆಸಿರುತ್ತಾರೆ ಎಂಬ ನಂಬುಗೆ ಆಕೆಗೆ. ಎಂತಲೇ ನಸುಕಿನಲ್ಲಿ ಹಾಸಿಗೆಯಿಂದ ಎದ್ದೊಡನೆ ಅಂಗೈಗಳನ್ನು ಜೋಡಿಸಿ ಮೂರೂ ದೇವತೆಗಳನ್ನು ಧ್ಯಾನಿಸಿ ನಿತ್ಯದ ಕೆಲಸಕ್ಕೆ ತೊಡಗುವ ಅಭ್ಯಾಸ ಅವಳದು. ತನಗೆ ಬಾಲ್ಯದಲ್ಲಿ ತಾಯಿ ಹೇಳಿಕೊಟ್ಟ ಈ ಮಾತು ನೆನಪಾಗಿ ಕಾಯಕದಲ್ಲಿಯೇ ಕೈಲಾಸವನ್ನು ಕಾಣುವ ಹಂಬಲವನ್ನು ತಳೆದು ಇಂದೇ ಈ ಕ್ಷಣದಿಂದಲೇ ಕೈಯ ಇಂತಹ ಕಸರತ್ತಿಗೆ ಅಣಿಯಾದಳು. •



೧೨

# ಎಕ್ಸ್-ರೇ ಕಣ್ಣಿನ ಮನುಷ್ಯ!

• ಗೋವಾ

"ಹರಿದ್ಹಾಕಿ ಬಿಡಪ್ಪಾ ಸುಮ್ನೇ.... ಹ್ಯಾಗೂ ಆ ಮೇಲೆ ಅದನ್ನ ಹರೀಲೇಬೇಕಾಗುತ್ತೆ..."

"ಏನ್ ಹಾಗಂದ್ರೆ? ಯಾರಪ್ಪನೇ ಬಂದು ಹೇಳಿದ್ರೂ ಹಾಗ್ ಮಾಡೋನಲ್ಲ ನಾನು. ನಿನಗಿನ್ನೂ ಗೊತ್ತಿಲ್ಲಾ ಅನ್ಸತ್ತೆ ನಾನ್ಯಾರೂಂತ..."

"ಗೊತ್ತಪ್ಪಾ, ಎಲ್ಲಾ ಗೊತ್ತು. ಅದಕ್ಕೇಂತ್ಲೇ ಹೇಳ್ತಿದೀನಿ ಸುಮ್ನೆ ಹರಿದ್ಹಾಕಿಬಿಡು ಅಂತ...."

ಪೊಲೀಸು ಪೇದೆ ಪಟ್ಟು ಬಿಡಲಿಲ್ಲ. ಪೀಟರ್‌ನೂ ಸುಮ್ಮನಾಗಲಿಲ್ಲ. ತಾನು ಬರೆದ ದಂಡದ ಚೀಟಿಯನ್ನಾತ ಹರಿದು ಹಾಕಿ ಕ್ಷಮೆ ಕೇಳುವ ಚಿತ್ರವನ್ನು ಕಣ್ಣಮುಂದೆ ತಂದುಕೊಂಡು ಮುಗುಳ್ನಕ್ಕ ಪೀಟರ್.

ಒನ್‌ವೇಯಲ್ಲಿ ಕಾರು ತಂದು ನಿಲ್ಲಿಸಿದ್ದನ್ನೇ ದೊಡ್ಡದು ಮಾಡಿ ತಕರಾರು ನಡೆಸಿದ್ದ ಆ ಪೊಲೀಸು. ಕಾರ್ ಪಾರ್ಕ್ ಮಾಡಿ ಪಕ್ಕದ ಕೆಫೆಯಲ್ಲಿ ಪೀಟರ್ ಕಾಫಿ ಕಪ್ ಎತ್ತುತ್ತಿರುವಂತೆಯೇ ಧಪ್ ಧಪ್ಪೆಂದು ಬೂಟ್ಹೆಜ್ಜೆಯಿಕ್ಕುತ್ತ ಬಂದು ನಿಂತಿದ್ದ ಆತ.

"ರೀ ಮಿಸ್ಟರ್, ಅಷ್ಟೂ ತಿಳಿಯಲ್ವೇನ್ರಿ ನಿಮ್ಗೆ? ಒನ್‌ವೇಯಲ್ಲಿ ಎಂಟರ್ ಆಗ್ಬಿಟ್ರಿ... ಏನು ನೀವೇನು ಗವರ್ನರ್ರಾ?" ಎಂದು ರೋಫ್ ಹಾಕಿದ್ದ.

"ಅಲ್ಲಪ್ಪಾ, ನಾನು ಎಂಟರ್ ಆಗ್ತಿರೋವಾಗ ನೀನು ಅಲ್ಲೇ ನಿಂತಿದ್ದೆ. ಕೈ ಮಾಡಿ ತಡೀಬಾರ್ದಾಗಿತ್ತಾ?"

"ನೀವು ನೋ ಎಂಟ್ರಿ ಬೋರ್ಡ್ ನೋಡಬಾರ್ದಾಗಿತ್ತಾ? ಏಳಯ್ಯಾ, ಎದ್ದು ಆ ಕಾರನ್ನು ಮೊದ್ಲು ಅಲ್ಲಿಂದ ಸಾಗ್ಸು. ಇಲ್ದೆ ಹೋದ್ರೆ..."

"ನೋಡಪ್ಪಾ... ಈ ಕಾಫಿ ಕುಡದು ಮುಗ್ಸೋವರ್ಗೂ ನಾನಿಲ್ಲಿಂದ ಏಳೋನಲ್ಲಾ."

ಈ ಮಾತಿನಿಂದ ತುಳಿಸಿಕೊಂಡ ಹಾವಿನಂತಾದ ಪೊಲೀಸು ಪೇದೆ ಅಲ್ಲಿಂದ ಸರಕ್ಕನೆ ಹೊರಕ್ಕೆ ನಡೆದಿದ್ದ. ಕಾರನ್ನು ಸಮೀಪಿಸಿ ಅದರ ನಂಬರನ್ನು ಬರೆದುಕೊಂಡು ದಂಡದ ಚೀಟಿ ಸಿದ್ಧಗೊಳಿಸುತ್ತಿದ್ದಂತೆಯೇ ನಿರಾತಂಕವಾಗಿ ನಡೆದು ಬಂದು ಕಾರಲ್ಲಿ ಕೂತಿದ್ದ ಪೀಟರ್. ಆಗಲೇ ಶುರುವಾದದ್ದು ವಾಗ್ಯುದ್ಧ.

"ಇಷ್ಟೆಲ್ಲಾ ಮಾತಾಡ್ತಿದೀಯಲ್ಲಾ.... ನಮ್ ಡಿಪಾರ್ಟ್‌ಮೆಂಟಿನಲ್ಲಿ ಯಾವುದೋ ದೊಡ್ಡ ಆಫೀಸರ್ ಪರಿಚಯ ಇರಬೇಕು ನಿನಗೆ... ಅದಕ್ಕೇ ಹಾರಾಡ್ತಿದೀಯಾ.... ನನ್ಮುಂದೆ ಅದೆಲ್ಲಾ ನಡೆಯಲ್ಲಾ. ನಡೀ ಪೊಲೀಸ್ ಸ್ಟೇಶನ್ಗೆ...."

ಪೀಟರ್ ಮಾತಾಡಲಿಲ್ಲ. ಕಣ್ಣುಗಳು ಕೆಂಪೇರತೊಡಗಿದವು. ಪೇದೆಯನ್ನು ಹಾಗೇ ದಿಟ್ಟಿಸಿ ನೋಡತೊಡಗಿದ.

"ಹೂಂ. ನಡಿಯಪ್ಪಾ.... ನನಗೂ ನಿನ್ನ ಬಗ್ಗೆ ನಿಮ್ ಸಾರ್ಜೆಂಟ್‌ಗೆ ಏನೇನೋ ಹೇಳೋದಿದೆ. ಡ್ಯೂಟಿ ಮೇಲಿರೋ ಪೊಲೀಸು ಅದನ್ನ ಮತ್ತ

ಏನೇನೋ ಕನಸು ಕಾಣ್ತಿದ್ರೆ ಇನ್ನೇನಾಗಬ್ಯಾಡಾ? ಅಲ್ಲಪ್ಪಾ, ಇವೊತ್ತು ಬೆಳಗಾ ಮುಂಚೆ, ಅದೂ ಸೂರ್ಯಾ ಮೂಡೋ ಮೂರು ತಾಸು ಮೊದಲು, ನಿನ್ನ ಗರ್ಲ್‌ಫ್ರೆಂಡ್‌ನ ಮನೇನ ಕಳ್ಳಬೆಕ್ಕಿನ ಹಾಗೆ ಕಿಟಕಿ ಮೂಲ್ಕ ಹೊಕ್ಕೆಯಲ್ಲಾ.... ರಾತ್ರ ೧೨ ರಿಂದ ಶುರುವಾಗೋ ಡ್ಯೂಟೀಲಿ ನೀನು ಹೀಗೆ ಎಷ್ಟು ದಿನದಿಂದ ಮಾಡ್ತಿದ್ದೀ ಅಂತ ಗೊತ್ತಿದೆ ನನ್ಗೆ. ಪಾಪ, ಆ ಹುಚ್ಚುಡುಗಿ ನಿನ್ನೇ ನಂಬ್ಕೊಂಡ್ ಕೂತಿದೆ. ಅದು ಹೋಗ್ಲಿ. 'ಬರೋವಾಗ ರೇಶನ್ ತಗೊಂಬಾ' ಅಂತ ನಿನ್ನಾಕೆ ಕೊಟ್ಟ ಹಣದಲ್ಲಿ ನಿನ್ನ ಮುದ್ದಿನ ಗಿಣೀಗೆ ರಿಸ್ಟ್‌ವಾಚ್ ತಂದ್ಕೊಟ್ಟೆ ಯಲ್ಲಾ.... ಹೆಂಡ್ತೀಗೇನ್ಹೇಳ್ತೀಯಾ? ಹಣಾ ಕಳ ದೊಯ್ತು ಅಂತ್ಲಾ?" ಪೀಟರ್ ಪಟಪಟನೆ

# ಅಮೇರಿಕದಲ್ಲಿ ಪ್ರಯೋಗಪಶುವಾಗಿ....

ಮಾತಾಡಿಬಿಟ್ಟ.

ಆಕಾಶ ನೋಡುತ್ತಿದ್ದ ಪೊಲೀಸನ ಮೀಸೆಗಳು ನೆಲದೆಡೆ ಬಾಗಿದವು. ಆತನಿಗೋ ಮೈತುಂಬ ನಡುಕ. ಆದರೂ ತತ್ತರಿಸುತ್ತಲೇ ಕೇಳಿದ; "ಯಾರ್ನೀನು?"

ಪೀಟರ್ ಜೇಬಿನಿಂದ ಕಾರ್ಡ್ ತೆಗೆದು ಆತನ ಮುಖಕ್ಕೆ ಹಿಡಿದ.

"ಆಂ? ನೀವಾ....! ಮೊದ್ಲೇ ಹೇಳ್ಬಾರ್ದಾ ಸಾರ್? ಇಂಟರ್‌ಪೋಲ್‌ನವ್ರು ಕೂಡ ಗೌರವಿಸಿ ಸದಸ್ಯತ್ವ ಕೊಟ್ಟಿರೋ ನಿಮ್ಮಂಥಾ ಗಣ್ಯ ವ್ಯಕ್ತೀನ ನಾನು ಗುರ್ತಿಸ್ದೇ ಹೋದೆ.... ಕ್ಷಮ್ಸಿ ಸಾರ್. ಪ್ಲೀಸ್," ಆ ಪೇದೆ ದಂಡದ ಚೀಟಿಯನ್ನು ಚೂರು ಮಾಡಿ ಎಸೆದ.

'ಇಂಟರ್‌ಪೋಲ್'ನ ಸದಸ್ಯತ್ವ ದೊರೆತ ಮೇಲೆ ಪೀಟರ್ ಅದೆಷ್ಟು ಜನಪ್ರಿಯನಾಗಿಬಿಟ್ಟನೆಂದರೆ ತಿಂಗಳಿಗೆ ಸರಾಸರಿ ೧೨೦೦ರಷ್ಟು ಪತ್ರಗಳು ಜಗತ್ತಿನ ಎಲ್ಲೆಡೆಯಿಂದಲೂ ಆತನಿಗೆ ಬರತೊಡ ಗಿದವು. ಅಂಥವುಗಳಲ್ಲಿ ಆತ ಅತ್ಯಂತ ಮಹತ್ವ ದ್ದೆಂದುಕೊಂಡದ್ದು ಡಾ. ಅಂಡ್ರಿಜಾ ಪುಹಾರಿಕ್‌ನ ಪತ್ರ. ಮೇನ್‌ನ ಗ್ಲೆನ್ ಕೋವ್‌ದಲ್ಲಿದ್ದ ರೌಂಡ್ ಟೇಬಲ್ ಫೌಂಡೇಶನ್ನಿನ ಮ್ಯಾನೇಜಿಂಗ್ ಡೈರೆಕ್ಟರ್ ಈ ಪುಹಾರಿಕ್. ವಿಖ್ಯಾತ ಮಾನಸಶಾಸ್ತ್ರಜ್ಞ ಕೂಡ. ಅತೀಂದ್ರಿಯ ಶಕ್ತಿಯ ಕುರಿತು ಆತ ಅನೇಕ ಪ್ರಯೋಗಗಳಲ್ಲಿ ತೊಡಗಿದ್ದ. ಅದಕ್ಕಾಗಿ ಮೇನ್ ನಲ್ಲಿ ಸುಸಜ್ಜಿತ ಪ್ರಯೋಗಾಲಯವನ್ನೂ ಸ್ಥಾಪಿಸಿದ್ದ. ಪೀಟರ್ ಹರ್‌ಕೋಸ್‌ನ ಅದ್ಭುತ ಶಕ್ತಿಯನ್ನು ಪ್ರಯೋಗಕ್ಕೊಳಪಡಿಸಿ ನೋಡುವುದು ಆತನ ಉದ್ದೇಶ. "ನಮ್ಮೊಂದಿಗೆ ದಯವಿಟ್ಟು ಆರು ತಿಂಗಳು ಇದ್ದು ಉಪಕರಿಸಿ," ಎಂದು ತನ್ನ ಪತ್ರದಲ್ಲಿ ಪೀಟರ್‌ನನ್ನು ವಿನಂತಿಸಿಕೊಂಡಿದ್ದ ಡಾ. ಪುಹಾರಿಕ್. "ನಿಮ್ಮಲ್ಲಡಗಿರುವ 'ಶಕ್ತಿ'ಯನ್ನು ಇನ್ನಷ್ಟು ಬಹುಮುಖ ಪ್ರಯೋಜನಕ್ಕೆ ಬಳಸಿಕೊ ಳ್ಳಲು ಸಾಧ್ಯ ಎಂದು ನನಗನಿಸುತ್ತದೆ," ಎಂಬ ವಾಕ್ಯ ಪೀಟರ್‌ನನ್ನು ಅಲ್ಲಿಗೆ ಹೋಗುವಂತೆ ಪ್ರೇರೇಪಿಸಿತು.

ಈ ಮೊದಲೊಮ್ಮೆ ಪೀಟರ್ ಇಂಥ ಪ್ರಯೋ ಗಕ್ಕೆ ಒಳಗಾಗಿದ್ದ. ಆ್ಯಂಟ್ವರ್ಪ್‌ನ ಡಾ. ರೇನೇ ಡೆಲಿಯರ್ಟ್ಸ್ (ಲೂಯಿಯನ್ ವಿಶ್ವವಿದ್ಯಾಲಯದ ಮಾನಸಶಾಸ್ತ್ರ ವಿಭಾಗದ ಮುಖ್ಯಸ್ಥ ) ಈತನ ಶಕ್ತಿಯ ವೈಜ್ಞಾನಿಕ ಪರೀಕ್ಷೆಗೆ ಮುಂದಾಗಿದ್ದರು. ಪೀಟರ್‌ನ ತಲೆಗೆ ಎಲೆಕ್ಟ್ರೊಎನ್‌ಸೆಫಲೊಗ್ರಾಫ್‌ನ್ನು ಜೋಡಿಸಿ ಆತನ ಮಿದುಳಿನ ಕಾರ್ಯ ಚಟುವಟಿ ಕೆಗಳನ್ನು ದಾಖಲುಗೊಳಿಸಲಾರಂಭಿಸಿದ್ದರು ಡಾ.

ಡೆಲಿಯರ್ಟ್ಸ್. ಒಂದಷ್ಟು ಫೋಟೋಗಳನ್ನು ಪೀಟರ್‌ನ ಮುಂದೆ ಹರವಿ ಅವುಗಳನ್ನು ಒಂದೊಂದಾಗಿ ಸ್ಪರ್ಶಿಸಿ ಆ ವ್ಯಕ್ತಿಯ ಕುರಿತ ಎಲ್ಲ ಮಾಹಿತಿ ನೀಡುವಂತೆ ಕೇಳಿಕೊಂಡಿದ್ದರು.

"ಹಾಂ. ಇವನು ಇಲ್ಲೇ ಆ್ಯಂಟ್ವರ್ಪ್‌ನಲ್ಲಿದ್ದಾನೆ. ಆದರೆ ಈ ಫೋಟೋದಲ್ಲಿಗಿಂತಲೂ ಹೆಚ್ಚು ವಯಸ್ಸಾಗಿದೆ ಆತನಿಗೆ. ಇದು ಇಪ್ಪತ್ತು ವರ್ಷಗಳ ಹಿಂದಿನ ಫೋಟೋ..." ಎಂದು ಕಣ್ಣು ಮಿಟುಕಿಸಿ ನಕ್ಕಿದ್ದ ಪೀಟರ್.

ಇದರಿಂದ ಡಾ. ಡೆಲಿಯರ್ಟ್ಸ್ ಸಂತೋಷಗೊಂಡಿದ್ದರು. ಅದು ಅವರದೇ ಫೋಟೋ!

"ಈಕೆ ಬದುಕಿಲ್ಲ ಬಿಡಿ," ಮತ್ತೊಂದು ಫೋಟೋ ಮುಟ್ಟಿ ಹೇಳಿದ್ದ ಪೀಟರ್ ಕೂಡಲೇ ಅಲ್ಲಿ ಹರವಲ್ಪಟ್ಟವುಗಳ ಪೈಕಿ ಅರ್ಧದಷ್ಟು ಛಾಯಾ ಚಿತ್ರಗಳನ್ನು ಎತ್ತಿಕೊಂಡು "ಬದುಕಿಗೆ ಕೊನೆ ಹಾಡಿದವರವು- ಕೊನೆ ಹಾಡುವಂತೆ ಮಾಡಲ್ಪಟ್ಟವರವು" ಎಂದು ಮತ್ತೆ ಎರಡು ಭಾಗಗಳಲ್ಲಿ ಅವುಗಳನ್ನು ವಿಂಗಡಿಸಿಟ್ಟಿದ್ದ. ಆ ಪೈಕಿ ಒಂದು ಚಿತ್ರವನ್ನು ಮುಟ್ಟಿದಾಗಲಂತೂ ಗ್ರಾಫ್‌ನಲ್ಲಿನ ಗೆರೆ ಹುಚ್ಚೆದ್ದು ಕುಣಿದಿತ್ತು. ಹೌದು. ಸತ್ತ ಆ ವ್ಯಕ್ತಿ ಕುಖ್ಯಾತರಲ್ಲೇ ಕುಖ್ಯಾತ. ಹತ್ತು ಜನ್ಮಗಳಲ್ಲಿ ಮಾಡಬಹುದಾದ ಪಾತಕಗಳನ್ನಾತ ಒಂದೇ ಬದುಕಿನಲ್ಲಿ ಮಾಡಿ ಮುಗಿಸಿದ್ದ. ಆ ಕಾರಣವಾಗಿಯೇ ಮುಗಿಸಲ್ಪಟ್ಟಿದ್ದ.

ಡಾ. ಪುಹಾರಿಕ್‌ರ ಪತ್ರವನ್ನು ಹಾಗೇ ದಿಟ್ಟಿಸಿದ ಪೀಟರ್ ಮೆಲ್ಲನೇ ಕೊನೆಯಲ್ಲಿದ್ದ ಅವರ ಸಹಿಯ ಮೇಲೆ ಬೆರಳಾಡಿಸಿದ. ತೆಳ್ಳಗಿನ ಮನುಷ್ಯನೊಬ್ಬನ ಚಿತ್ರ ಗೋಚರಿಸಿತು. ತನಗಿಂತ ಹತ್ತು ವರ್ಷ ದೊಡ್ಡವನಾದರೂ ತನಗಿಂತಲೂ ಹತ್ತು ವರ್ಷ ಚಿಕ್ಕವನಂತೆ ಕಾಣುತ್ತಿದ್ದ ಉತ್ಸಾಹಿ. ಹಿಡಿದ ಕೆಲಸವನ್ನು ಶ್ರದ್ಧೆಯಿಂದ ಮಾಡಿ ಮುಗಿಸುವ ಛಲವಂತ. ಸ್ನೇಹಜೀವಿ, ಅಂತಃಕರಣವುಳ್ಳವನೆಂಬುದನ್ನು ಆ ಕಣ್ಣುಗಳೇ ಸಾರುತ್ತಿದ್ದವು. ಡಾ. ಪುಹಾರಿಕ್‌ರನ್ನು ಎಷ್ಟು ಸಾಧ್ಯವೋ ಅಷ್ಟು ಬೇಗ ಕಾಣುವ ಕಾತರ ಪೀಟರ್‌ನಲ್ಲಿ ಉಂಟಾಯಿತು.

ಒಪ್ಪಿಗೆ ಪತ್ರವನ್ನು ಕೂಡಲೇ ಅಂಚೆಗೆ ಹಾಕಿದ.

"ಅಮೆರಿಕದಲ್ಲಿ ನಿಮ್ಮ ವಾಸ್ತವ್ಯಕ್ಕೆ ಎಲ್ಲ ವ್ಯವಸ್ಥೆಯನ್ನೂ ಮಾಡಲಾಗಿದೆ. ಮನೆಯಲ್ಲಿರುವಂತೆಯೆ ನಿಮಗೆ ಅನ್ನಿಸುವ ವಾತಾವರಣ ಇಲ್ಲಿಯದು...." ಡಾ. ಪುಹಾರಿಕ್ ಉತ್ತರಿಸಿದರು. ಜತೆಗೆ ತಮ್ಮ ಸಂಸ್ಥೆಯ ರೇಖಾಚಿತ್ರ, ತತ್ಸಂಬಂಧಿ ವಿವರಗಳು, ಪೀಟರ್ ಉಳಿಯಬೇಕಾದ ಮನೆಯ ಕೋಣೆಗಳ ಛಾಯಾ ಚಿತ್ರಗಳೂ ಇದ್ದವು. ಎರಡನೆ ಅಂತಸ್ತಿನ ಆ ಬೆಡ್‌ರೂಮಿನಿಂದ ಕಾಣುತ್ತಿದ್ದ ಸಮುದ್ರವನ್ನು ವಾಸ್ತವದಲ್ಲಿ ನೋಡುವ ಹಂಬಲ ಹೆಚ್ಚಿತು ಪೀಟರ್‌ಗೆ.

ವೀಸಾ-ಗೀಸಾ ಮುಂತಾದ ವಿಧಿಗಳನ್ನೆಲ್ಲ ಪೂರೈಸಲು ಮೂರುವಾರ ಬೇಕಾಯಿತು. ಹಾಲೆಂಡಿನಿಂದ ಅಮೆರಿಕಕ್ಕೆ ತೇಲುವ 'ಮಾಸ್‌ಡಾಮ್' ಎಂಬ ಹಡಗನ್ನೇರಿ ಕುಳಿತ ಪೀಟರ್. ಆತನಿಗಿಂತ ಹೆಚ್ಚಿನ ಸಂಭ್ರಮ ಮಾರಿಯಾಗೆ.

ಜಲಸಂಚಾರ ಪೀಟರ್‌ಗೆ ಮೊಟ್ಟಮೊದಲ ಅನುಭವ. ಒಂದು ಬೆಳಗಿನ ಹೊತ್ತು. ನ್ಯೂಯಾರ್ಕ್ ಬಂತು. ಆಕಾಶವನ್ನು ಚುಂಬಿಸುವ ಯತ್ನದಲ್ಲಿದ್ದ ಕಟ್ಟಡಗಳೆದುರು ತಾನೆಷ್ಟು ಚಿಕ್ಕವ ಎಂದು ಅಗಾಧಪಟ್ಟುಕೊಂಡಿದ್ದ ಗಂಡನನ್ನು ಕೇಳಿದಳು ಮಾರಿಯಾ,

"ಈಗ ಅಷ್ಟು ಜನರಲ್ಲಿ ಡಾ. ಪುಹಾರಿಕ್‌ರನ್ನು ಹೇಗೆ ಗುರುತಿಸುತ್ತೀರಿ?"

"ಹೇಳಿಬಿಡ್ಲಾ ಯಾರೂಂತ.... ಅಕೋ, ಅಲ್ಲಿದ್ದಾರೆ ನೋಡು," ಎಂದು ಕೈ ಬೀಸಿದ ಪೀಟರ್ ಅವಾಕ್ಕಾಗಿ ನಿಂತ ಡಾ. ಪುಹಾರಿಕ್‌ರನ್ನೇ ಎವೆಯಿಕ್ಕದೇ ನೋಡತೊಡಗಿದ. ಹೌದು, ಈ ಮೊದಲು ತಾನು 'ಕಂಡಂತೆ'ಯೇ ಇದ್ದಾರೆ.

ಕಸ್ಟಮ್ ವಿಧಿಗಳನ್ನೆಲ್ಲ ಪೂರೈಸಿಕೊಂಡು ನೇರವಾಗಿ ಡಾ. ಪುಹಾರಿಕ್‌ರ ಬಳಿ ನಡೆದ ಪೀಟರ್. ಅವರಿಗೋ ಡಚ್ ಭಾಷೆ ತಿಳಿಯದು. ಈತನಿಗೋ ಅಮೆರಿಕನ್ ಇಂಗ್ಲೀಷು ಕಷ್ಟ. ಮಾರಿಯಾ ಆ ಕಷ್ಟ ಪರಿಹರಿಸಿದಳು.

ಒಂದೆರಡು ದಿನಗಳ ವಿಶ್ರಾಂತಿಯ ನಂತರ ಲ್ಯಾಬ್‌ಗೆ ಕರೆದೊಯ್ದರು ಡಾ. ಪುಹಾರಿಕ್. ಬರಿ ಕೇಬಲ್ಲುಗಳು, ಯಾವ್ಯಾವುದೋ ರಾಸಾಯನಿಕಗಳ ಬಾಟಲುಗಳು, ಮಿದುಳಗತಿ ಪರೀಕ್ಷಕ ಯಂತ್ರ ಹಾಗೂ ವಿಚಿತ್ರವಾದ ಪಂಜರದಂಥ ಕ್ಯಾಬಿನ್ನು.

"ಗಾಬರಿಯಾಗಬೇಡಿ ಪೀಟರ್. ಝೂನಲ್ಲಿ ಪ್ರಾಣಿಗಳು ಹೇಗಿರುತ್ತವೆಂಬುದರ ಅನುಭವ

ಕೆಂದೂ ಅಂಥ ಅನುಭವವೂ ಜೀವಿತ ಕಾಲದಲ್ಲಿ ಬರುವುದು ಒಂದೆರಡು ಸಲ ಮಾತ್ರವೆಂದೂ ಅದು ಒದಗಿ ಬಂದಾಗ ಸಿಕ್ಕಿದ ಅವಕಾಶವನ್ನು ಬಿಟ್ಟುಬಿಡುವುದು ಜಾಣತನವಲ್ಲವೆಂದೂ ವಾದಿಸಿದರು. ಇದನ್ನೆಲ್ಲ ಕೇಳಿಸಿಕೊಂಡ ಹೆಂಗಸರು ಅಲ್ಲಿಗೆ ಬರಲು ಒಪ್ಪಲಿಲ್ಲ. ನಮ್ಮ ಗುಂಪಿನಲ್ಲಿ ಒಟ್ಟು ಹದಿನೆಂಟು ಜನರಿದ್ದರು. ಪಾತ್ರೆ ಪಗಡಗಳನ್ನು ಎಲ್ಲರಿಗೂ ಹಂಚಿಕೊಡಲಾಯಿತು. ದೂರವು ಕಡಿಮೆಯಾಗಲೆಂದು ಅಡ್ಡದಾರಿಯಲ್ಲಿ ನಡೆದು ಬೆಟ್ಟದ ಬುಡದಿಂದ ತುದಿಯವರೆಗೂ ಹಬ್ಬಿದ್ದ 'ಶ್ರವಣರ ಅರೆ'ಯನ್ನು ನಿರಾಯಾಸವಾಗಿ ತಲುಪಿದೆವು. ಇನ್ನು ಬಂಡೆಯನ್ನು ಹತ್ತುವುದೇ ಪ್ರಯಾಸದ ಕೆಲಸವೆಂಬುದು ಎಲ್ಲರಿಗೂ ಗೊತ್ತಾಯಿತು. ಈ ದಾರಿಯನ್ನು ಬಿಟ್ಟು ಮೆಟ್ಟಿಲುಗಳಿರುವ ಸ್ಥಳಕ್ಕೆ ಹೋಗಬೇಕಾದರೆ ಇನ್ನೂ ಒಂದು ಮೈಲಿ ದೂರವನ್ನು ನಡೆದು ಸವೆಸಬೇಕಾಗಿತ್ತು. ಹೆಡ್ಮಾಸ್ಟರ್ ಕೃಷ್ಣಮೂರ್ತಿ ಕ್ಯಾಪ್ಟನ್ ಆದರು.

ಗುಂಪಿನಲ್ಲಿದ್ದ ಒಬ್ಬಿಬ್ಬರನ್ನು ಬಿಟ್ಟರೆ ಉಳಿದವರಿಗೆ ಇಂಥ ಬೆಟ್ಟವನ್ನು ಹತ್ತಿ ಇಳಿಯುವ ನಿಜವಾದ ಕಲ್ಪನೆಯೇ ಇರಲಿಲ್ಲ. ಅವರು ನೋಡಿದ್ದುದು ಮೈಸೂರಿನ ಚಾಮುಂಡೇಶ್ವರಿ ಬೆಟ್ಟ, ನಂದೀಬೆಟ್ಟ ಇತ್ಯಾದಿ ಮಾತ್ರ; ಬಸ್ಸು ಅಥವಾ ಕಾರುಗಳ ಮೂಲಕ ಹತ್ತುವುದು ಅಥವಾ ಮೆಟ್ಟಿಲುಗಳ ಮೂಲಕ ಹತ್ತುವ ಬೆಟ್ಟಗಳು ಮಾತ್ರ.

ಶ್ರವಣರ ಅರೆಯುದ್ದಕ್ಕೂ ಸಾಮಾನುಗಳನ್ನು ಹೊತ್ತುಕೊಂಡು ಹತ್ತುತ್ತಿದ್ದವರೆಲ್ಲ ಹತ್ತು ನಿಮಿಷದಲ್ಲಿ ಆರು ತಂಡಗಳಾದರು. ಕೆಲವರು ಅಲ್ಲಲ್ಲೇ ಕುಳಿತಿದ್ದರು. ಇವರುಗಳ ಪೌರುಷವನ್ನು ಚೆನ್ನಾಗಿ ಅರಿತಿದ್ದ ಅಜ್ಜ ಸಾಕಷ್ಟು ತಿಂಡಿತಿನಿಸುಗಳನ್ನು ಕಳುಹಿಸಿದ್ದರು. ಮೊದಲು ತುದಿಯನ್ನು ತಲುಪಿದವರು ನಾಲ್ಕು ಜನ ಗೌಡರ ಮಂಟಪವನ್ನು ಚೊಕ್ಕಟಮಾಡಿ ಪಾತ್ರೆಗಳನ್ನೆಲ್ಲ ತೊಳೆದು, ಅಡುಗೆಯ ಕಾರ್ಯದಲ್ಲಿ ನಿರತರಾದರು. ಅಲ್ಲಿಂದ ಮುಂದೆ ಹತ್ತಬೇಕಾದುದು ಇರಲಿಲ್ಲ. ಅರ್ಧಮೈಲಿ ದೂರ ನಡೆದರೆ ಸಿದ್ದಪ್ಪನ ಗುಹೆ ತಲುಪಬಹುದಾಗಿತ್ತು. ನನ್ನ ತಮ್ಮನ ಜೊತೆಯಾಗಿ ಮೊದಲು ಬಂದ ನಾಲ್ಕು ಜನರು ಅಡುಗೆಯ ಕೆಲಸದಲ್ಲಿ ನಿರತರಾದರು. ಉಳಿದವರು ನಿಧಾನವಾಗಿ ಹೆಜ್ಜೆ



"ಹೆಂಡ್ತಿ ಗ್ರಾಮ ಪಂಚಾಯ್ತಿಗೆ ಆಯ್ಕೆ ಗೊಂಡು, ಈ ಮನೆ ಪಂಚಾಯ್ತಿ ನನಗೆ ಬಿಟ್ಟುಕೊಟ್ಟು."

ಹಾಕುತ್ತ ಸಿದ್ಧೇಶ್ವರನ ಸನ್ನಿಧಿಯನ್ನು ತಲುಪಿದರು.

ಎಲ್ಲರೂ ಗವಿಯ ದ್ವಾರದಲ್ಲಿ ನಿಂತು, ಗವಿಯನ್ನೂ ಪರಿಸರವನ್ನೂ ನೋಡಿದರು. ಈ ಗವಿಗಳ ನಿರ್ಮಾಣವೆಲ್ಲ ಪ್ರಕೃತಿಯ ವಿಕೃತ ಕೈವಾಡವೆಂಬುದು ಸ್ಪಷ್ಟವಾಗುವುದು. ಸುತ್ತಮುತ್ತ, ಮೇಲೆ ಕೆಳಗೆಲ್ಲ ಈ ದೈತ್ಯಾಕಾರದ ಬಂಡೆಗಳು ಒಂದಕ್ಕೊಂದು ಸೋಕಿಕೊಂಡು ಅಪಾಯಕಾರಿಯಾಗಿ ನಿಂತಿವೆ. ಬಂಡೆಗಳೇನೂ ಸಣ್ಣವಲ್ಲ. ನಲುಗಿದರೆ ಯಾವಾಗಲಾದರೂ ಏನು ಬೇಕಾದರೂ ಆಗಬಹುದಾಗಿದೆ. ಕಂಬಗಳಂತೆ ಕೆಲವು ನಿಂತು ತೂಗಾಡಬಹುದೆಂಬ ಭಯವನ್ನು ಹುಟ್ಟಿಸುತ್ತವೆ. ಎಲ್ಲರೂ ಈ ವಿಚಿತ್ರ ಹೊಂದಾಣಿಕೆಯನ್ನು ನೋಡಿ ದಿಗ್ಭ್ರಮೆಯಿಂದ ಭೀತರಾದರು. ಗವಿಯ ದ್ವಾರದಲ್ಲಿ ನೀರು ಒಳಗಿನಿಂದ ಹರಿದು ಬರುತ್ತಿತ್ತು. ಗಂಟೆ ಹತ್ತಾಗಿತ್ತು. ಪೂಜಾಕಾರ್ಯಗಳು ಆರಂಭವಾದವು. ವೇದಮಂತ್ರಗಳ ಸುರಿಮಳೆ, ಅಭಿಷೇಕ, ಸಾಲು ದೀಪಗಳ ಮೆರುಗು, ಧೂಪ, ಗಂಧ ಪುಷ್ಪಗಳ ಕಳೆಗಳಿಂದ ಗವಿಯೆಲ್ಲ ತುಂಬಿತ್ತು. ಸೋಮವಾರವಾಗಿದ್ದರಿಂದ ಭಕ್ತರ ಸಂಖ್ಯೆ ನಿಬಿಡವಾಗಿತ್ತು. ಪೂಜಾದಿಗಳೆಲ್ಲ ಪೂರೈಸಿದ ಮೇಲೆ, ತೀರ್ಥ ಪ್ರಸಾದಗಳ ವಿನಿಯೋಗವಾಯಿತು.

ಕೊಳ್ಳದ ಅಪಾರಶಕ್ತಿಯ ಅಡಗಿದೆ ಎಂಬುದನ್ನು ಪ್ರಯೋಗಗಳು ತೋರಿಸಿಕೊಟ್ಟವು. ಒಂದಲ್ಲ, ಹತ್ತಲ್ಲ, ನೂರಲ್ಲ.... ಸಾವಿರಾರು ಪ್ರಯೋಗಗಳು. ಫಲಿತಾಂಶ ಡಾ. ಪುಹಾರಿಕ್‌ರನ್ನು ಪುಳಕಿತರನ್ನಾಗಿ ಸಿತ್ತು.

ಇನ್ನೊಂದು ಮುಖ್ಯ ಪ್ರಯೋಗ. ತಲೆಗೆ ಪೆಟ್ಟು ಬಿದ್ದ ನಂತರ ಈ ಶಕ್ತಿ ಆತನಲ್ಲಿ ಜಾಗೃತವಾಯಿತೋ ಅಥವಾ ಮೊದಲಿಂದಲೋ ಇತ್ತೋ ಎಂಬುದನ್ನು ಅರಿತುಕೊಳ್ಳುವ ಪ್ರಯೋಗ. ಆದರೆ ಅಷ್ಟು ಹೊತ್ತಿಗಾಗಲೇ ಆರು ತಿಂಗಳ ಗಡುವು ಮುಗಿಯುತ್ತ ಬಂದದ್ದರಿಂದ ಪೀಟರ್ ಹಾಲೆಂಡಿಗೆ ಮರಳುವ ತಯಾರಿಗೆ ತೊಡಗಬೇಕಾಯಿತು.

ಗ್ಲೆನ್ ಕೋವ್‌ನಲ್ಲಿ ನಡೆದ ಪ್ರಯೋಗಗಳಲ್ಲಿ ಪೀಟರ್ ತನ್ನ ಶಕ್ತಿಯನ್ನು ಸ್ವಂತದ ವಿದ್ಯಮಾನಗಳಿಗೆ ಸಂಬಂಧಿಸಿದಂತೆ ಬಳಸಿಕೊಳ್ಳಲು ಸಾಧ್ಯವೇ ಎಂಬುದನ್ನು ಅರಿತುಕೊಳ್ಳುವ ಒಂದು ಭಾಗವೂ ಇತ್ತು. ಆದರೆ ಅದು ಅಸಾಧ್ಯ ಎಂಬುದು ಸಾಬೀತಾಯಿತು. "ಒಂದು ವೇಳೆ ಅದು ಸಾಧ್ಯ ಎಂದಾಗಿದ್ದರೇ ಒಳ್ಳೆಯದಿತ್ತು. ನನಗೆ ಮುಂದೇನು ಒದಗಲಿದೆ ಎಂಬುದನ್ನೆಲ್ಲ ಮುಂಗಂಡು ನನ್ನ ಬದುಕಿನ ಗತಿಯನ್ನು ಬದಲಿಸಿಕೊಳ್ಳಲು ಸಾಧ್ಯವಿತ್ತು. ಊಹೂಂ, ಹಾಗಾಗದಿದ್ದುದೇ ನನಗೊಂದು ವರದಾನ. ಯಾಕೆಂದರೆ ವ್ಯರ್ಥ ಚಿಂತೆ-ಕಾತರಕ್ಕೊಳಗಾಗಿ ಚಡಪಡಿಸುವುದನ್ನು ಯಾರು ಹೇಳಿದ್ದಾರು?" ಪೀಟರ್ ಹಾಲೆಂಡಿನ ಪತ್ರಿಕೆಯೊಂದಕ್ಕೆ ನೀಡಿದ ಸಂದರ್ಶನದಲ್ಲಿ ಅಭಿಪ್ರಾಯಪಟ್ಟ.

ಡಾ. ಪುಹಾರಿಕ್ ಸುಮ್ಮನೆ ಬಿಟ್ಟಾರೆಯೆ? ಮತ್ತೊಮ್ಮೆ ಅಮೆರಿಕಕ್ಕೆ ಬರಲು ಆಹ್ವಾನಿಸಿದರು. "ಪ್ರಯೋಗಗಳಿಗಾಗಿ ಅಲ್ಲ, ಅಮೆರಿಕದಲ್ಲಿ ನಿಮ್ಮ 'ಅದ್ಭುತ ಶಕ್ತಿ ಪ್ರದರ್ಶನ'ಗಳನ್ನು ನೀಡಲು. ಕಳೆದ ಬಾರಿ ನೀವಿಲ್ಲಿ ಹೊರಜಗತ್ತಿಗೆ ಪರಿಚಯವಾಗಲೇ ಇಲ್ಲ. ದಯವಿಟ್ಟು ಬನ್ನಿ."

ರೌಂಡ್ ಟೇಬಲ್ ಫೌಂಡೇಶನ್ನಿನ ಸಭಾಗೃಹದಲ್ಲೇ ಮೊಟ್ಟಮೊದಲ ಕಾರ್ಯಕ್ರಮ ಏರ್ಪಡಿಸಿದ್ದರು ಡಾ. ಪುಹಾರಿಕ್.

ನೆರೆದಿದ್ದವರು ನೂರೈವತ್ತು ಜನ. ಗಣ್ಯಾತಿಗಣ್ಯರು. ಅವರಿಗೆಲ್ಲ ಪೀಟರ್ ಹುರ್‌ಕೋಸ್ ಆಗಲೇ 'ಪರಿಚಿತ'ನಾಗಿದ್ದ ಡಾ. ಪುಹಾರಿಕ್ ಸಿದ್ಧಪಡಿಸಿ ಹಂಚಿದ್ದ ಬ್ರೋಶರ್ ಮೂಲಕ. ಈ ಕಾರ್ಯಕ್ರಮಕ್ಕೆ ಬರುವಾಗ ಯಾವುದಾದರೂ ವಿಶಿಷ್ಟ ವಸ್ತುವನ್ನು ತರುವಂತೆಯೂ ಆಮಂತ್ರಣದಲ್ಲಿ ವಿನಂತಿಸಲಾಗಿತ್ತು.

ವೇದಿಕೆಯನ್ನೇರಿ ಕೈ ಬೀಸಿದ ಪೀಟರ್‌ಗೆ ಮುಂದಿನ ಸಾಲಿನಲ್ಲೇ ಕೂತ ಫೌಂಡೇಶನ್ನಿನ ಚೇರ್‌ಮನ್ ಒಂದು ಬೆಳ್ಳಿಯ ಚೇನನ್ನು ತೋರಿಸಿದ. "ನನಗೆ ಇದರ ಇತಿಹಾಸ ಗೊತ್ತು. ನೀವು ಅದನ್ನು ಸರಿಯಾಗಿ ಹೇಳಬಲ್ಲಿರಾ?" ಎಂಬ ಪ್ರಶ್ನೆಯನ್ನೂ ಎಸೆದ.

ಮಾರಿಯಾ ಅದನ್ನು ಪಡೆದು ಗಂಡನ ಕೈಗಿತ್ತಳು.

"ನಿಜಕ್ಕೂ ಅದ್ಭುತವಾದ ಚೇನು. ಆದರೆ ದುರಂತಮಾಲೆ ಆಯಿತಲ್ಲ... ಸರ್, ಇದು ಇನ್ನೂರು ವರ್ಷಗಳಷ್ಟು ಹಳೆಯದು. ಶುದ್ಧ ಬೆಳ್ಳಿಯದು. ಬೆಳ್ಳಿ.... ಬಿಳಿ.... ಹತ್ತಿ.... ಹೊಲ.... ಹೆಂಗಸು.... ಬಿಳಿ ಹೊಲ... ಕರಿಹೆಂಗಸು.... ಕಪ್ಪು ಮುಖದಲ್ಲಿ ಬಿಳಿ ಕಣ್ಣುಗಳು, ಬಿಳಿ ಹಲ್ಲುಗಳು.... ಕೊರಳಲ್ಲಿ ಬಿಳಿ ಬೆಳ್ಳಿ ಚೇನು..... ಕೈಯಲ್ಲಿ ಬಿಳಿ ತೊಳೆಗಳು.... ಹತ್ತಿ ಬಿಡಿಸುವ ನಿಗ್ರೋ ಹೆಂಗಸು.... ಧುತ್ತೆಂದು ನುಗ್ಗಿಬಂದವರು ಅವಳನ್ನು ಹೆಡಮುರಿಗೆ ಕಟ್ಟಿದರು.... ಹತ್ತು ಜನ.... ಒಬ್ಬರಾದ ಮೇಲೊಬ್ಬರು ಎರಗಿ 'ತೃಷೆ' ತೀರಿಸಿಕೊಂಡರು. ಹೆಣವಾಗಿ ಹೋದಳು. ಅವಳನ್ನೆತ್ತಿ ಆಳ ಕಣಿವೆಯಲ್ಲಿ ಎಸೆದರು.... ಅಲ್ಲೇ ಅಸ್ಥಿಪಂಜರವಾದಳು... ಇದು ಆ ಅಸ್ಥಿಪಂಜರದಲ್ಲೇ ಉಳಿದಿದ್ದ ಚೇನು...." ಎಂದು ಹೇಳಿ ಪೀಟರ್ ಎದುರಿಗೆ ಕೂತ ಚೇರ್‌ಮನ್ನನ ಮುಖ ನೋಡಿದ.

ಆ ಹಿರಿಯ ಥಂಗನೆದ್ದು ನಿಂತ.

"ವಾಹವ್ವಾ. ನೂರಕ್ಕೆ ನೂರು ನಿಜ ನೀವು ಹೇಳಿದ್ದು. ನಾರ್ತ್ ಕೆರೋಲಿನಾದ ನಿಗ್ರೋ ಹೆಂಗಸು. ಬಲಾತ್ಕಾರಕ್ಕೀಡಾಗಿ ಬಲಿಯಾದದ್ದೂ ನಿಜವೆ. ಈ ಪ್ರಕರಣ ಬಹುದಿನಗಳವರೆಗೆ ಸುತ್ತಮುತ್ತಲಿನ ನಿಗ್ರೋ ಹೆಂಗಸರನ್ನು ಗಾಬರಿಗೀಡು ಮಾಡಿತ್ತು. ಆ ಪ್ರಕರಣದ ಪೂರ್ತಿ ತನಿಖೆಯ ವಿವರ ನನ್ನಲ್ಲಿದೆ. ಮಿ. ಪೀಟರ್, ನೀವು ಖಂಡಿತ

ಅಭಿನಂದನಾರ್ಹರು."

ಎಡೆಬಿಡದ ಕರತಾಡನದ ನಂತರ, ಮತ್ತೊ ಬ್ಬಾತನಿಂದ ಒಂದು ದಪ್ಪನಾದ ಲೋಹದ ತುಂಡು ನೀಡಲ್ಪಟ್ಟಿತು. ಸಿಕ್ಕಾಪಟ್ಟೆ ಜಜ್ಜಲ್ಪಟ್ಟ ಲೋಹದ ತುಣುಕು. ಅದನ್ನು ಕೈಗೆತ್ತಿಕೊಂಡ ಪೀಟರ್ ಒಂದು ಸಲ ತಲೆಯಲ್ಲಾಡಿಸಿದ.

"ಊಹುಂ, ಯಾವ ಮುಖವೂ ಕಾಣುತ್ತಿಲ್ಲ. ಕೇವಲ ಮೋಡಗಳು. ಯಾವುದೋ ದೊಡ್ಡ ಸ್ಫೋಟ. ಅಷ್ಟೆ. ಮನುಷ್ಯರಾಗಲಿ, ಕಟ್ಟಡಗಳಾಗಲೀ ನಜರಿಗೇ ಬರುತ್ತಿಲ್ಲ. ಸ್ಫೋಟದಿಂದ ಹಾಳಾದ ಊರಾಗಲಿ, ಹೆಣಗಳಾಗಲಿ ಕಾಣುತ್ತಿಲ್ಲ. ತುಂಬ ನಿರಾಶೆಯುಂಟು ಮಾಡಿತು, ಈ ತುಣುಕು," ಎನ್ನುತ್ತ ಪೀಟರ್ ಅದನ್ನು ಟೇಬಲ್ ಮೇಲಿಟ್ಟ.

ನಂತರದ ಚರ್ಚೆಯಲ್ಲಿ ಅದು ನೆವಾಡಾದಲ್ಲಿ ಪರಮಾಣು ಬಾಂಬ್ ಸ್ಫೋಟಿಸಿ ಪರೀಕ್ಷೆ ಮಾಡಿದ ಜಾಗದಲ್ಲಿ ನಂತರ ದೊರೆತ ಲೋಹದ ತುಂಡೆಂಬ ಅಂಶ ಗೊತ್ತಾಯಿತು. ಪರೀಕ್ಷಾರ್ಥ ಸ್ಫೋಟ ನಡೆಸಿದ ಆ ಜಾಗ ಒಂದು ನಿರ್ಜನ ಪ್ರದೇಶ. ಆ ಮೋಡಗಳು ಆಸ್ಫೋಟದ ಪರಿಣಾಮವಾಗಿ ಉಂಟಾದಂಥವು.

ಇಂಥ ಅನೇಕ ಪ್ರದರ್ಶನಗಳ ನಂತರ ಪೀಟರ್ ಅಮೆರಿಕದಲ್ಲಿ ವಿನೂತನವಾದೊಂದು ಪ್ರಯೋಗ ನಡೆಸಿದ. ಫೋನ್ ಮೂಲಕ ಪ್ರಶ್ನೆ ಕೇಳಿ ಉತ್ತರ ಪಡೆಯಬಹುದಾದಂಥ ಪ್ರಯೋಗ.

ತನ್ನ ಹೆಂಡತಿಯ ತೊಂದರೆಯನ್ನು ಕುರಿತಂತೆ ಒಬ್ಬ ಫೋನ್ ಮಾಡಿದ.

"ಹೌದ್ಹೌದು, ನಿಮ್ಮಾಕ್ಕೆಯ ಬಗ್ಗೆ ನನಗೆಲ್ಲ ಗೊತ್ತು. ನೋಡಿ, ನೀವು ಕೂಡಲೇ ಒಬ್ಬ ನರ್ಸ್‌ನ್ನು ನಿಮ್ಮಾಕ್ಕೆಯ ಆರೈಕೆಗಾಗಿ ನೇಮಿಸಿಕೊಳ್ಳಿ. ಪಾಪ, ನಿಮ್ಮ ಹೆಂಡತಿ ತುಂಬ ಅಸ್ವಸ್ಥೆ. ಹಾಸಿಗೆಯ ಮೇಲೇನೂ ಮಲಗಿಲ್ಲ ಬಿಡಿ. ಆದರೂ ನಿಮ್ಮ ಕುಟುಂಬ ವೈದ್ಯರನ್ನು ಕರೆಸಿ. ಯಾಕೆಂದರೆ ಇದು ಸ್ವಲ್ಪ ಸೀರಿಯಸ್ ಕೇಸು."

ಇಷ್ಟೆಲ್ಲ ಹೇಳುತ್ತಿದ್ದ ಪೀಟರ್‌ಗೆ ಕಣ್ಣೆದುರು ಹೆಂಗಸು ಕಾಣುತ್ತಿದ್ದಳು. ಶೂನ್ಯದಲ್ಲಿ ದೃಷ್ಟಿ ಕೀಲಿಸಿ ದಿನವಿಡೀ ಚೇರ್ ಮೇಲೇ ಕೂತಿರುತ್ತಿದ್ದ ಮೂವತ್ತರೊಳಗಿನ ಮಹಿಳೆ. ಮಾನಸಿಕ ರೋಗಿಯಾಗಿದ್ದ ಆಕೆ ಆತ್ಮಹತ್ಯೆಯ ವಿಚಾರ ಮಾಡುತ್ತಿದ್ದಳೆಂಬ ಸಂಗತಿಯನ್ನು ಪೀಟರ್ ಬೇಕೆಂದೇ ಹೇಳಲಿಲ್ಲ. ಆದರೆ ಆಕೆಯ ಫ್ಯಾಮಿಲಿ ಡಾಕ್ಟರ್‌ನನ್ನು ಸಂಪರ್ಕಿಸಿ ವಿಷಯ ಪ್ರಸ್ತಾಪಿಸಿದಾಗ ಆತ ಎಲ್ಲ ಎಚ್ಚರಿಕೆಯನ್ನೂ ವಹಿಸುವುದಾಗಿ ಭರವಸೆ ನೀಡಿದ.

ಪೀಟರ್ ಫೋನ್ ಎತ್ತಿಕೊಂಡಾಗಲೆಲ್ಲ ಆಚೆ ತುದಿಯ ವ್ಯಕ್ತಿಯ ಕೂಡ ಮಾತಾಡಬೇಕಾದ ಅಗತ್ಯವೂ ಇರುತ್ತಿರಲಿಲ್ಲ. ರಿಸೀವರಿಗೆ ಇರುತ್ತಿದ್ದ ವಯರನ್ನು ಸ್ಪರ್ಶಿಸುತ್ತಲಿದ್ದರೆ ಆಚೆ ತುದಿಯಲ್ಲಿರುವಾತನ ಮುಖ, ಆತನ ಸಮಸ್ಯೆ ಹಾಗೂ ತತ್ಸಂಬಂಧಿ ವ್ಯಕ್ತಿಗಳು ವಿಷಯಗಳು ವಸ್ತುಗಳ ವಿವರಗಳೆಲ್ಲ ತಿಳಿದುಬಿಡುತ್ತಿದ್ದವು. ●

(ಮುಂದಿನ ಸಂಚಿಕೆ ನೋಡಿ)

---

ಇತರರ ಮನಸ್ಸನ್ನು ಗೆಲ್ಲಲು ಅವರ ಸ್ನೇಹ ಸಂಪಾದಿಸಿರಿ. ನಿಮ್ಮಂತೆಯೆ ಪರರನ್ನೂ ಭಾವಿಸಿರಿ. ಯುದ್ಧ ಮಾಡುವ ಪ್ರಸಂಗವನ್ನು ತಂದುಕೊಳ್ಳಬೇಡಿ. ಈರ್ಷ್ಯೆಯನ್ನು ಬಿಟ್ಟು ಬಿಡಿ. ವಿನಾಕಾರಣ ಇತರರ ಮೇಲೆ ಏರಿಹೋಗಬೇಡಿ. ಎಲ್ಲರ ಇಚ್ಛೆಗಳನ್ನೂ ಪೂರೈಸಲು ಕಾಮಧೇನುವಿನ ಹಾಗೆ ಭೂಮಾತೆಯಿದ್ದಾಳೆ. ಕೃಪೆಯ ವರ್ಷಾಧಾರೆಯನ್ನೇ ಸುರಿಯಲು ಭಗವಂತನಿದ್ದಾನೆ. ಶಿಸ್ತಿನಿಂದ ಜೀವನವನ್ನು ನಡೆಸಿರಿ. ದಯೆಯನ್ನೂ ದಾನ ಮಾಡುವ ಬುದ್ಧಿಯನ್ನೂ ಮೈಗೂಡಿಸಿಕೊಳ್ಳಿ. ಭಗವಂತನು ಎಲ್ಲರಿಗೂ ಕಲ್ಯಾಣವನ್ನು ಉಂಟುಮಾಡಲಿ.

● **ಶ್ರೀ ಚಂದ್ರಶೇಖರ ಸರಸ್ವತಿ**

ಏನನ್ನೇ ಕೊಡು, ನಿಷ್ಠೆಯಿಂದ ಕೊಡು; ಬರಿ ನಿಷ್ಠೆಯಿಂದಷ್ಟೇ ಅಲ್ಲ, ಸಂತೋಷದಿಂದ ಕೊಡು, ವಿನಯದಿಂದ ಕೊಡು ಹಾಗೂ ಅನುಕಂಪದಿಂದ ಕೊಡು.

● **ತೈತ್ತರಿಯೋಪನಿಷತ್ತು**

## ನೆನಪು

# ಸಿದ್ಧರ ಬೆಟ್ಟ

• ತೋಏನಕೆರೆ ಸೀತಾರಾಮ ಜೋಯ್ಸ

ನಾನಿನ್ನೂ ಚಿಕ್ಕವನಾಗಿದ್ದಾಗ ಸೂರ್ಯ ಹುಟ್ಟುವ ಮೊದಲೇ ನಮ್ಮ ಹಳ್ಳಿಯ ಮನೆಯ ಮಾಳಿಗೆಯನ್ನೇರಿ ಪೂರ್ವಾಭಿಮುಖವಾಗಿ ನಿಂತು ಎದುರಿನ ಸಿದ್ಧಗಿರಿ ಬೆಟ್ಟವನ್ನು ನೋಡುತ್ತ ಹೊತ್ತು ಕಳೆಯುತ್ತಿದ್ದೆ. ಅದು ಹತ್ತಿರದಲ್ಲೇ ಇರುವಂತೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಸೂರ್ಯೋದಯಕ್ಕೆ ಮುನ್ನಿನ ಆಕಾಶವೆಲ್ಲ ಹೊಂಬಣ್ಣದ ಗಂಧರ್ವನ ಗರದಂಥ ಪ್ರಭಾವಳಿಯ ಸೊಬಗು ಕುತೂಹಲ ಕಾರಿ. ಸ್ವಲ್ಪಹೊತ್ತಿನಲ್ಲೇ ಶೃಂಗಗಳೆರಡರ ಬೆಟ್ಟದ ಮಧ್ಯೆ ಸೂರ್ಯ ಉದಯಿಸಿ ಕಿರಣಗಳನ್ನು ಸುತ್ತಲೂ ಹರಡುವಾಗಲಂತೂ ಒಳಗೊಳಗೇ ಹಿಗ್ಗುತ್ತಿದ್ದೆ. ಬೆಟ್ಟದ ಕೆಳಭಾಗವೆಲ್ಲ ನೀಲಿ ಬಣ್ಣದ ಬಂಡೆಗಳಿಂ ತಿರುತ್ತಿತ್ತು. ಅವುಗಳ ಮೇಲೆ ಆಗತಾನೆ ಬಿದ್ದಿದ್ದ ಇಬ್ಬನಿಯಲ್ಲಿ ಸೂರ್ಯನ ಎಳೆಬಿಸಿಲು ಆವರಿಸಿ ಅದು ಚಿನ್ನದ ತಗಡಿನಂತೆ ತೋರುತ್ತಿತ್ತು. ಮನೆಯವರು, "ಮಾಳಿಗೆಯ ಮೇಲೆ ನೀನೊಬ್ಬನೇ ಏನು ಮಾಡುತ್ತಿ?" ಎಂದು ಕೇಳುತ್ತಿದ್ದರೆ ನನಲ್ಲಿ ಯಾವ ಉತ್ತರವೂ ಇರುತ್ತಿರಲಿಲ್ಲ. ಮೌನವಾಗಿದ್ದು ಬಿಡುತ್ತಿದ್ದೆ. ಅಷ್ಟು ಹತ್ತಿರದಲ್ಲೇ ಇದ್ದ ಸಿದ್ಧರ ಬೆಟ್ಟಕ್ಕೆ ಹೋಗಿ ಬರುವ ಆಸೆ ಮಾತ್ರ ಪೂರೈಸದೆ ನಿರಾಶೆಯಾಗುತ್ತಿತ್ತು. ಪ್ರತಿ ಸೋಮವಾರವೂ ಅಲ್ಲಿ



ನೂರಾರು ಜನ ಸೇರುತ್ತಿದ್ದರೆಂದು ಕೇಳಿದ್ದೆ. ಅಲ್ಲಿಗೆ ಹೋಗುತ್ತಿದ್ದ ಎತ್ತಿನ ಗಾಡಿಗಳನ್ನೂ ನೋಡುತ್ತಿದ್ದೆ.

ಒಮ್ಮೆ ಅಲ್ಲಿಗೆ ಹೋಗುವ ಆಸೆಯನ್ನು ಹಿರಿಯರಲ್ಲಿ ವ್ಯಕ್ತಪಡಿಸಿದಾಗ - "ನೀನಿನ್ನೂ ಚಿಕ್ಕವನು; ಅಲ್ಲಿ ಹುಲಿ, ಕರಡಿ, ಕಿರುಬಗಳು ತುಂಬಿವೆ; ಅಲ್ಲಿನ ಗವಿಯಲ್ಲಿ ವೆಂಕಾವಧೂತರಿದ್ದಾರೆ. ಅವರನ್ನು ನೀನೇ ನೋಡಿದ್ದಿ. ನಿನಗೆ ಹೆದರಿಕೆಯಾಗುವುದಿಲ್ಲವೆ? ಅವರು ನಿನ್ನಂಥ ಮಕ್ಕಳನ್ನು ಹಿಡಿದುಕೊಂಡು ಹೋಗುತ್ತಾರೆ. ನೀನು ದೊಡ್ಡವನಾದಾಗ ಹೋಗಬಹುದು," ಎಂಬ ಉತ್ತರ ಬಂತು.

ವೆಂಕಾವಧೂತರನ್ನು 'ಗಡ್ಡದ ವೆಂಕಪ್ಪ' ಎಂದೇ ಮಕ್ಕಳು ಗುರುತಿಸುತ್ತಿದ್ದರು. ತಂಟೆ ತಕರಾರು ಮಾಡುವ ಮಕ್ಕಳಿಗೆ ಹಿರಿಯರು ಅವರ ಹೆಸರನ್ನು ಹೇಳಿ ಅಂಜಿಸುತ್ತಿದ್ದರು. ಈ ಗಡ್ಡದ ವೆಂಕಪ್ಪ ಕುಳ್ಳಾದ ಆಳು. ತಲೆಯ ಕೂದಲೆಲ್ಲ ಜಡೆಗಳಾಗಿ ಸೊಂಟದವರೆಗೂ ನೇತಾಡುತ್ತಿದ್ದವು. ನೀಳವಾದ ಕೆಂಚುಗಡ್ಡ. ಕೊರಳಿನಿಂದ ಪಾದಗಳ ವರೆಗೂ ಮುಚ್ಚಿದ್ದ ಕಾವಿ ಕಫಿನಿ, ಕೈಲಿ ಆಳುದ್ದದ ದಂಡ, ಕೆಂಪಾಗಿ ಕಾಣಿಸುತ್ತಿದ್ದ ಅವನ ಕಣ್ಣುಗಳು, ಭೈರವನನ್ನೇ ನೋಡಿದಂತಾಗುತ್ತಿತ್ತು. ಅವರು ಬೆಟ್ಟದ ಸಿದ್ಧಪ್ಪನ ಗವಿಯಲ್ಲಿರುತ್ತಿದ್ದು ಆಗಾಗ ನಮ್ಮೂರಿನ ಪೇಟೆಬೀದಿಯಲ್ಲಿ ಕಾಣಿಸಿಕೊಳ್ಳುತ್ತಿದ್ದರು. ಮಕ್ಕಳೆಲ್ಲರ ಪಾಲಿಗೆ ಅವರು ಶತ್ರುವೆ. ವೆಂಕಪ್ಪನಿಗೆ ನನ್ನ ಹೆಸರೂ ಗೊತ್ತಿತ್ತು. ಸಿದ್ಧರ ಬೆಟ್ಟಕ್ಕೆ ಹೋಗುವ ಆಸೆ ಮೂಡಿದಾಗಲೆಲ್ಲ ಆತನ ನೆನಪಾಗಿ ಆಶಾಭಂಗವಾಗುತ್ತಿತ್ತು. ಹೀಗೆ ಐದಾರು ವರ್ಷಗಳು ಉರುಳಿಹೋದುವು.

ನನಗೆ ಹನ್ನೆರಡು ವರ್ಷ ವಯಸ್ಸಾಗಿದ್ದಾಗ, ನಮ್ಮೂರಿನ ಪೊಲೀಸ್ ಠಾಣೆಯ ದಫೇದಾರ್ ಪೀರ್‌ಖಾನ್ ಸಾಹೇಬರು ಒಂದು ದಿನ, "ನೀನು ಸಿದ್ಧರ ಬೆಟ್ಟಕ್ಕೆ ಎಂದಾದರೂ ಹೋಗಿದ್ದೆಯಾ?" ಎಂದು ಕೇಳಿದರು. ನಾನು "ಇಲ್ಲ" ಎಂದೆ. "ಈ ದಿನ ನಾನು ಕರೆದುಕೊಂಡು ಹೋಗುತ್ತೇನೆ. ನಿಮ್ಮ ಅಯ್ಯ ಅವರಿಗೂ ಹೇಳಿದ್ದೇನೆ" ಎಂದರು. ಅವರಿಗೆ ಅಲ್ಲಿ ಸರಕಾರಿ ಕೆಲಸವಿತ್ತು. ಅವರು ಅಂದು ನನ್ನನ್ನು ಹಂಗಾಮಿ ಗುಮಾಸ್ತೆಯನ್ನಾಗಿ ಆರಿಸಿಕೊಂಡಿದ್ದರು. ಅಲ್ಲಿ ದಫೇದಾರರ ಕೆಲಸವೆಲ್ಲ ಮುಗಿದ ಮೇಲೆ, ಅವರು ಬೆಟ್ಟವನ್ನೆಲ್ಲ ಸುತ್ತಿಸಿ, ಸಿದ್ಧಪ್ಪನ ಗುಹೆಯನ್ನೂ ದೇವರನ್ನೂ ತೋರಿಸಿ 'ಶ್ರವಣನ ಅರೆ' ಎಂಬ ಭಾರಿಬಂಡೆಯ ಮಾರ್ಗದಲ್ಲಿ ಕರೆತಂದರು.

**"ಅಬ್ಬಾ ಎಪ್ಪತ್ತು ವರ್ಷಗಳ ಹಿಂದಿನ ಆ ಯಾತ್ರೆಯನ್ನು ನೆನೆದರೆ ಈಗಲೂ ಮೈ ನವಿರೇಳುತ್ತದೆ."**

ಸಿದ್ಧರ ಬೆಟ್ಟವು ನಿಜವಾಗಿಯೂ ಒಂದು ರಮ್ಯವಾದ ಬೀಡು. ಇದು ದೇವರಾಯನ ದುರ್ಗ, ಚೆನ್ನರಾಯನ ದುರ್ಗ, ಕೊರಟಗೆರೆ ಬೆಟ್ಟ, ಮಧುಗಿರಿ ದುರ್ಗಗಳ ಶ್ರೇಣಿಯಲ್ಲಿದೆ. ಈ ಬೆಟ್ಟ ಸುತ್ತಲೂ ಸಣ್ಣ ಪುಟ್ಟ ಗುಡ್ಡಗಳಿಂದ ಆವರಿಸಿಕೊಂಡು, ತರುಲತೆಗಳಿಂದ ನಿಬಿಡವಾಗಿ ಹಬ್ಬಿದೆ. ಯುಕ್ತ ಕಾಲದಲ್ಲಿ ಜಾಲಗಿರಿವೃಕ್ಷ (ಅರಗಿನ ಗಿಡ)ದ ಹೂವಿನ ಕಂಪು ಆ ಕಣಿವೆಯನ್ನೆಲ್ಲ ತುಂಬಿ ತುಳುಕುವುದು. ವಿಶಾಲವೂ ಉನ್ನತವೂ ಆಗಿರುವ ಬಂಡೆಗಳು ಅನೇಕ ಗುಹೆಗಳನ್ನು ಸೃಷ್ಟಿಸಿವೆ. ಈ ಗುಹೆಗಳಲ್ಲಿ ವಿಶಾಲವಾದದ್ದು ಶ್ರೀ ಸಿದ್ಧೇಶ್ವರನ ಗುಹೆ. ಸುಮಾರು ಅರವತ್ತು ಅಡಿ ಉದ್ದವಿದ್ದು ಅಲ್ಲಲ್ಲಿ ಸಣ್ಣ ಸಣ್ಣ ಗೂಡುಗಳಂಥ ಕೊಠಡಿಗಳನ್ನು ಮಾಡಿಕೊಂಡು ಸಿದ್ಧರು ಇರುತ್ತಿದ್ದರಂತೆ.

ಈಗಲೂ ಕೆಲವು ವಿರಕ್ತರು ಅಲ್ಲಿ ಇರುತ್ತಾರೆ. ಇಂಥ ಒಂದು ಗೂಡಿನಲ್ಲೇ ವೆಂಕಾವಧೂತರು ಇದ್ದುದು. ಈ ಗಿರಿಯನ್ನೆಲ್ಲ ಬಳಸಿಬಂದರೆ, ನಮ್ಮ ಅನುಭವದಲ್ಲಿ ಎಂದೂ ಕಂಡಿರದ ವಿವಿಧ ರೀತಿಯ ವನಸ್ಪತಿಯನ್ನು ನೋಡಬಹುದು. ಇವುಗಳಲ್ಲಿ ಕೆಲವಂತೂ ಅಮೂಲ್ಯವಾದ ಔಷಧಿಗೆ ಬೇಕಾದ ಮೂಲಿಕೆಗಳಿವೆ. ಬೆಟ್ಟದ ಸುತ್ತಲೂ ಮೂರು ನಾಲ್ಕು ಹಳ್ಳಿಗಳಿವೆ. ಬೆಟ್ಟದ ಉತ್ತರ ಭಾಗದಲ್ಲಿ ಹಳ್ಳಿಗರೇ ಸೇರಿ ಸಿದ್ಧೇಶ್ವರನ ಗುಹೆಯವರೆಗೆ ಮೆಟ್ಟಿಲುಗಳನ್ನು ಮಾಡಿಸಿದ್ದಾರೆ. ಬೆಟ್ಟದ ಬುಡದಲ್ಲಿ ಒಂದು ಸಣ್ಣ ಪ್ರವಾಸಿ ಮಂದಿರವೂ ಇದೆ. ಅನತಿ ದೂರದಲ್ಲಿ ಕೋಟೆಕೊತ್ತಲಗಳನ್ನುಳ್ಳ ಚೆನ್ನರಾಯನ ದುರ್ಗವಿದೆ. ಹಿಂದಿನ ಕಾಲದಲ್ಲಿ ಈ ದುರ್ಗಕ್ಕೆ ಪ್ರಸನ್ನ ವೆಂಕಟಗಿರಿ ಎಂಬ ಹೆಸರಿತ್ತಂತೆ.

ಇವೆಲ್ಲವೂ ಮಧುಗಿರಿ ದುರ್ಗದ ನಾಯಕರಿಗೆ ಸೇರಿದ್ದವಂತೆ. ಸಿದ್ಧೇಶ್ವರನ ಗುಹೆಯ ಮೂಲೆಯಲ್ಲಿ ಎರಡು ಲಿಂಗಗಳಿವೆ. ಒಂದು ಬಂಡೆಯಲ್ಲಿ ಕೊರೆದು ಮಾಡಿದ ಸಣ್ಣ ಲಿಂಗ, ಮತ್ತೊಂದು ಪಾಣಿಪಟ್ಟಸಮೇತವಾದದ್ದು. ಲಿಂಗಗಳ ಎದುರಿನಲ್ಲಿ ಎರಡುಗಜ ಚದುರದ ಕಲ್ಲುಕಟ್ಟಿದ ತೀರ್ಥದ ಭಾವಿ (ಒರತೆ)ಯಂಥ ಕೊಳವಿದೆ. ಇದರಲ್ಲಿ ಸರ್ವಕಾಲದಲ್ಲೂ ತಂಪಾದ ನೀರು ತುಂಬಿ ಗವಿಯಲ್ಲಿ ಹರಿಯುತ್ತದೆ. ಲಿಂಗಗಳ ಎದುರಿನಲ್ಲಿ ಇನ್ನೊಂದು ಗುಹೆಯದ್ವಾರವಿದೆ. ಇದರಲ್ಲಿ ಮತ್ತೆ ಕೆಲವು ಸಣ್ಣ ಗವಿಗಳಿವೆ. ಅಲ್ಲಿ ಸ್ವಲ್ಪ ಬೆಳಕು ಬಂಡೆಗಳ ಸಂದಿನಿಂದ ಬರುತ್ತದೆ. ಮುಂದಿನದೆಲ್ಲ ಕತ್ತಲೆ ಕೋಣೆ. ಅಲ್ಲಿ ಯಾರೂ ಇರುವುದಿಲ್ಲ, ಯಾರೂ ಅಲ್ಲಿಗೆ ಹೋಗುವುದಿಲ್ಲ. ಗಿರಿಗೆ ನಾಲ್ಕೂ ದಿಕ್ಕಿನಿಂದ ಹತ್ತಿಬರಲು ಕಾಡುದಾರಿಗಳಿವೆ, ಮೆಟ್ಟಿಲುಗಳಿಲ್ಲ. ಬೆಟ್ಟದ ಕೆಳಗಿನ ಪ್ರದೇಶವನ್ನು ಬೂದಗವಿ (ಬುದ್ಧಗವಿ) ಎನ್ನುತ್ತಾರೆ. ಅಲ್ಲಿ ಹಳೇಕಾಲದ ಕೆಲವು ಕಲ್ಲು ಮಂಟಪಗಳಿವೆ.

ಒಂದಾನೊಂದು ಕಾಲದಲ್ಲಿ ಇದೆಲ್ಲ ಜೈನ ಶ್ರವಣರು ತಪಸ್ಸು ಮಾಡಿದ ಸ್ಥಳವಿರಬಹುದೆಂದು ತೋರುತ್ತದೆ. ಸಿದ್ಧೇಶ್ವರನ ಗುಹೆಯಿಂದ ಪಶ್ಚಿಮ ದಿಕ್ಕಿನಲ್ಲಿರುವ 'ಶ್ರವಣನ ಅರೆ'ಯಲ್ಲಿ ಪುರಾತನ ಕಾಲದ ಶ್ರವಣರು ಇರುತ್ತಿದ್ದಂತೆ ಅರ್ಥವಾಗುತ್ತದೆ. ಪಕ್ಕದಲ್ಲಿ 'ಜೈನಿಗರಹಳ್ಳಿ' (ಜೋನಿಗರ ಹಳ್ಳಿ) ಎಂಬ ಗ್ರಾಮದಲ್ಲಿ ಜೈನರೇ ಇದ್ದರೆಂದು ತೋರುತ್ತದೆ. ಜೈನ ಸಾಹಿತ್ಯದಲ್ಲಿ ಸಿದ್ಧರನ್ನೂ ಉಪಾಧ್ಯಾಯರನ್ನೂ ಸ್ಮರಿಸುವ ಪದ್ಯಗಳಿವೆ. ಅನಂತಪುರ ಜಿಲ್ಲೆಯಲ್ಲೂ 'ಬೂದುಗವಿ' ಎಂಬ ಸ್ಥಳಗಳಿವೆ. ಜೈನರ ಅವನತಿಯಾದ ಮೇಲೆ ಇದನ್ನು ಶೈವಕ್ಷೇತ್ರವಾಗಿ ಪರಿವರ್ತಿಸಿರಬಹುದೆಂದು ತೋರುತ್ತದೆ.

ಸಿದ್ಧರ ಬೆಟ್ಟದ ನಾಲ್ಕಾರು ಗುಡ್ಡಗಳಲ್ಲಿ ಸಿದ್ಧೇಶ್ವರ ಗವಿಗೆ ನೈರುತ್ಯದ ಭಾಗವನ್ನು ಗಂಗಾಧರೇಶ್ವರನ ಬೆಟ್ಟವೆಂದು ಕರೆಯುವರು. ಇಲ್ಲಿಯೂ ಛತ್ರಿಯಂತಿರುವ ಒಂದು ಭಾರಿ ಬಂಡೆಗೆ ಗೋಡೆಯನ್ನೂ ಬಾಗಿಲನ್ನೂ ನಿರ್ಮಿಸಿ ಒಂದು ದೇವಾಲಯವನ್ನು ಮಾಡಿದ್ದಾರೆ. ಈ ಗುಹೆಯ ಮಧ್ಯೆ ಒಂದಕ್ಕೊಂದು ಅಂಟಿಕೊಂಡಿರುವ ಜೋಡಿ ಲಿಂಗಗಳೂ ಅವುಗಳೆದುರಿನಲ್ಲಿ ಎರಡು ಬಸವಗಳೂ, ಬಂಡೆಯಲ್ಲೇ ಕೊರೆದ ಗಣಪತಿ, ಸರ್ಪ ಇತ್ಯಾದಿ ದೇವತಾ ವಿಗ್ರಹಗಳಿವೆ. ಈ ದೇವಾಲಯಕ್ಕೆ ಬರುವ ಭಕ್ತರ ಸಂಖ್ಯೆ ತೀರಾ ಕಡಿಮೆ.

ಸಿದ್ಧರ ಬೆಟ್ಟದಲ್ಲಿ ಕಲ್ಲುಕೋಟೆಯ ಅವಶೇಷವಿದೆ. ಇಲ್ಲಿ ಕುರಂಗರಾಯನೆಂಬ ಪಾಳೆಯಗಾರನಿದ್ದಂತೆ. ಇವನ ನೆನಪಿಗಾಗಿ ಬೆಟ್ಟದ ಆಗ್ನೇಯಕ್ಕೆ ಕುರಂಗಕೋಟೆ (ಕುರಂಕೋಟೆ) ಎಂಬ ಗ್ರಾಮವೂ ಇದೆ. ಶ್ರವಣನ ಅರೆಯ ಕಡೆಯಿಂದ ಬರುವವರು ಗುಡ್ಡವನ್ನು ಏರದೆ ಸಿದ್ಧೇಶ್ವರನ ಗುಹೆಗೆ ನಡೆದೇ ಹೋಗಬಹುದು. ಶ್ರವಣನ ಅರೆಗೆ ಸೇರಿದಂತೆ ಒಂದು ಪುಟ್ಟ ಶಿವಾಲಯವಿದೆ. ಅದರ ಪಕ್ಕದಲ್ಲೇ ನಮ್ಮೂರಿನ ಗೌಡರು ಕಟ್ಟಿಸಿದ ಮಂಟಪವೂ ಅದರ ಎದುರಿಗೆ ಬಂಡೆಯಲ್ಲೇ ನಿರ್ಮಿತವಾದ ನೀರಿನ ದೋಣಿಯೂ ಇವೆ. ಸಮೀಪದಲ್ಲಿ 'ಅಲಸಂದೆ ಕೆರೆ' ಎಂಬ ಭಾರಿ ಹೊಂಡವಿದೆ. ಅಲ್ಲೆಲ್ಲ ಗಿಡಗಂಟೆಗಳು ಬೆಳೆದು ವಿಷಜಂತುಗಳಿಗೆ ಆಶ್ರಯವಾದ ಸ್ಥಳವಾಗಿದೆ.

ನಾನು ಕಡೆಯ ಸಲ ಸಿದ್ಧೇಶ್ವರ ಸ್ವಾಮಿಯ ದರ್ಶನಕ್ಕೆ ಹೋದದ್ದು ೧೯೫೦ನೇ ವರ್ಷ ಮಾರ್ಚ್-ಏಪ್ರಿಲ್ ತಿಂಗಳಲ್ಲಿ. ಆಗ ನಮ್ಮ ಮನೆಯಲ್ಲಿ ಒಂದು ಶುಭಕಾರ್ಯ ನಡೆದಿತ್ತು. ಪಟ್ಟಣಗಳಿಂದ ಸ್ನೇಹಿತರೂ. ನೆಂಟರೂ ಬಂದಿದ್ದರು. ಶುಭಕಾರ್ಯ ನೆರವೇರಿದ ಮೇಲೆ ಬಂದಿದ್ದವರೆಲ್ಲ ಬೆಟ್ಟದ ಪ್ರೋಗ್ರಾಂ ಹಾಕಿದರು. ಮೊದಲನೇ ದಿನ ಗಂಗಾಧರೇಶ್ವರನ ದರ್ಶನ, ಸೇವೆಯನ್ನು ಮುಗಿಸಿ ಸಿದ್ಧೇಶ್ವರನ ಸೇವೆಗೆ ಸಿದ್ಧರಾದರು. ಅವರ ಸಮೂಹದಲ್ಲಿ ನಮ್ಮೂರಿನ ಹೆಡ್ಮಾಸ್ಟರ್ ಕೃಷ್ಣಮೂರ್ತಿಗಳೆಂಬ ಉತ್ಸಾಹಿ ತರುಣರಿದ್ದರು. ಅವರು ಪಟ್ಟಣಗಳಿಂದ ಊರಿಗೆ ಬರುವವರನ್ನು ವಿಹಾರಾರ್ಥವಾಗಿ ಬೆಟ್ಟಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಈಗಲೂ ಅವರೇ ಮಾರ್ಗದರ್ಶಿಗಳಾದರು. ಮರುದಿನ ಬೆಳಗ್ಗೆ ಬಿಸಿಲೇರುವುದಕ್ಕೆ ಮೊದಲೇ ಎಲ್ಲರೂ ನಡೆದೇ ಹೋಗಬೇಕೆಂದು ತೀರ್ಮಾನಿಸಿದರು.

ಬೆಟ್ಟದ ಮೇಲೆ ಮಾಡಬೇಕಾಗಿದ್ದ ಅಡುಗೆ, ಊಟದ ವ್ಯವಸ್ಥೆಗೆ ಬೇಕಾದ ಪಾತ್ರೆ ಪಗಡಗಳನ್ನು ಸಾಗಿಸಲು ಗಾಡಿಗಳನ್ನು ತರಕೂಡದೆಂದೂ, ಹಳ್ಳಿಯವರು ಮಾಡುವಂತೆ, ಅವುಗಳನ್ನೆಲ್ಲರೂ ಗಂಟುಮೂಟೆಕಟ್ಟಿ ಹೊತ್ತುಕೊಂಡು ನಡದೇ ಹೋಗಬೇ

ನಿಮಗೆ ಸದ್ಯವೇ ಆಗಲಿದೆ," ಡಾ.ಪುಹಾರಿಕ್ ನಕ್ಕು ಹೇಳಿದರಾದರೂ ಪೀಟರ್‌ಗೆ ಅದು ಯಾಕೋ ಹಿಡಿಸಲಿಲ್ಲ.

ಆ ಪಂಜರವನ್ನೇ ದಿಟ್ಟಿಸುತ್ತಿದ್ದ ಪೀಟರ್. ಪ್ರತ್ಯೇಕವಾಗಿದ್ದ ಅದು ತಾಮ್ರದ ತಂತಿಗಳಿಂದ ಮಾಡಲ್ಪಟ್ಟಿತ್ತು. ಒಳಗೆ ಎರಡು ಕುರ್ಚಿಗಳು, ಒಂದು ಚಿಕ್ಕ ಟೇಬಲ್ಲು, ಅದರ ಮೇಲೊಂದು ಮೋಂಬತ್ತಿ. ವಿದ್ಯುಜ್ಜಾಲದ ಮೂಲಕ ಆ ತಂತಿಗೆಲ್ಲ ಕರಂಟು ಹರಿಸುವ ವ್ಯವಸ್ಥೆ. ಒಳಗೆ ಹೊಕ್ಕ ಮನುಷ್ಯ ಖಂಡಿತ ಉಸಿರುಗಟ್ಟಿ ತೊಂದರೆ ಅನುಭವಿಸುವಂಥ ವಾತಾವರಣ. ಇದು ಗೊತ್ತಿದ್ದೇ ಅಲ್ಲಿಡಲ್ಪಟ್ಟಿತ್ತು ಆ ಮೊಂಬತ್ತಿ. ಪ್ರಯೋಗ ಸಂದರ್ಭದಲ್ಲಿ ಉರಿಸಲ್ಪಡುತ್ತಿದ್ದ ಅದು ಆರಿತೆಂದರೆ ಕೂಡಲೇ ಸೂಚಕ ಯಂತ್ರ ಸದ್ದು ಮಾಡುತ್ತಿತ್ತು. ಪ್ರಯೋಗವನ್ನು ನಿಲ್ಲಿಸಬೇಕೆಂಬ ಎಚ್ಚರಿಕೆ ಅದು. ಪ್ರಯೋಗಕ್ಕೊಳಪಟ್ಟಾತ ಹೊರಬರಬೇಕು, ಸಾಕಷ್ಟು ಸ್ವಚ್ಛ ಗಾಳಿಗೆ ತನ್ನನ್ನು ಒಡ್ಡಿಕೊಳ್ಳಬೇಕು, ಮತ್ತೆ ಪಂಜರದಲ್ಲಿ ಬಂದಿಯಾಗಬೇಕು.

"ನಾನೇನು ಮಂಗವೋ, ಕಪ್ಪೆಯೋ ಅಥವಾ ಬಿಳಿ ಇಲಿಯೋ?" ಪೀಟರ್ ಅಸಹನೆಯಿಂದ ಕೇಳಿದ.

"ನೋ ನೋ.... ಇದು ಸದ್ಯದ ಪ್ರಯೋಗವಲ್ಲ. ಮೊದಲು ಎಲೆಕ್ಟ್ರೊ ಎನ್‌ಸೆಫೆಲೊಗ್ರಾಫ್ ಪರೀಕ್ಷೆ," ಡಾ. ಪುಹಾರಿಕ್ ಧೈರ್ಯ ಹೇಳಿದರು.

ಆ ಯಂತ್ರದ ಬಳಿ ಕುರ್ಚಿಗಳಲ್ಲಿ ಕುಳ್ಳಿರಿಸಲ್ಪಟ್ಟ ಪೀಟರ್ ಮತ್ತು ಹ್ಯಾರಿ ಸ್ಟೋನ್ ಎಂಬ ಇನ್ನೊಬ್ಬ ವ್ಯಕ್ತಿಯ ತಲೆಗೆ ಹತ್ತಾರು ಬಗೆಯ ವಯರುಗಳು ಜೋಡಿಸಲ್ಪಟ್ಟವು. ಯಂತ್ರದ ಗುಂಡಿ ಅದುಮಿದರು. ಡಾ. ಪುಹಾರಿಕ್. ಗಾಬರಿಯಿಂದ ಬಾಯಿ ಒಣಗಿಸಿಕೊಂಡ ಪೀಟರ್ ನಾಲಗೆಯನ್ನು ಕಚ್ಚಿಕೊಳ್ಳತೊಡಗಿದ.

"ಊಹುಂ, ಹಾಗೆ ಮಾಡಬೇಡಿ ಪೀಟರ್. ಗ್ರಾಫ್‌ಗೆ ತೊಂದರೆಯಾಗುತ್ತದೆ."

ಡಾ.ಪುಹಾರಿಕ್‌ರ ಮಾತಿನಿಂದ, 'ಹ್ಞ್, ನನಗೆ ತೊಂದರೆಯಾಗುತ್ತಿರುವುದು ಮುಖ್ಯವಲ್ಲವೇನೋ ಇವರಿಗೆ' ಎಂದುಕೊಂಡ ಪೀಟರ್.

ಕ್ರಮೇಣ ಹೊಂದಿಕೊಂಡು ಸಹಕರಿಸತೊಡಗಿದ ಆತನಲ್ಲಿ-ಗುರುತಿಸದ ಕಾರಣದಿಂದ ಬಳಸಿ



"ಟೇಬಲ್ ಮೇಲೆ ಕುಟ್ಟಿ ಕುಟ್ಟಿ ಮಾತಾಡ್ಬೇಡಿ ಅಂತ ಆವಾಗ್ಲೇ ಹೇಳಿದೆ."

ಕ್ಯಾಪ್ಟನ್ ಕೃಷ್ಣಮೂರ್ತಿಗೆ ದೂರದಿಂದ ಬಂದಿದ್ದವರಿಗೆಲ್ಲ ಗುಹೆಗಳ ಅದ್ಭುತವೂ ಭಯಂಕರವೂ ಆಗಿದ್ದ ಕತ್ತಲೆ ಕೋಣೆಗಳನ್ನು ತೋರಿಸಲೇಬೇಕೆಂಬ ಕುತೂಹಲವಿತ್ತು. ಬಂದಿದ್ದವರಲ್ಲಿ ಒಬ್ಬರು ಮೊದಲನೇ ಗುಹೆಯಲ್ಲಿಯೇ ಅತಂತ್ರವಾಗಿ ಹಬ್ಬಿದ್ದ ಬಂಡೆಗಳ ಶ್ರೇಣಿಯನ್ನು ನೋಡಿದಾಗಲೇ, ಈ ಬಂಡೆಗಳೆಲ್ಲ ನಾವು ಹೊರಗೆ ಬರುವವರೆಗೂ ಅವು ಇದ್ದಕಡೆಯಲ್ಲಿಯೇ ನಿಂತಿರಲೆಂದು ಶ್ರೀ ಸಿದ್ಧೇಶ್ವರ ಸ್ವಾಮಿಯನ್ನು ಪ್ರಾರ್ಥಿಸಿದ್ದರು! ಆಗ ಆವರು ಒಳಗಿನ ಗುಹೆಗಳನ್ನು ನೋಡಿರಲಿಲ್ಲ. ಕ್ಯಾಪ್ಟನ್ ಕೃಷ್ಣಮೂರ್ತಿಗಳು, "ನಾವು ಈಗ ಒಳ ಗುಹೆಗಳನ್ನು ಪ್ರವೇಶಿಸುತ್ತೇವೆ. ನಾನೇ ಮುಂದುಗಡೆ ಹೋಗುತ್ತೇನೆ. ಆಮೇಲೆ ಎಲ್ಲರೂ ಹಿಂಬಾಲಿಸಬಹುದು," ಎಂದು ಎಲ್ಲರನ್ನೂ ಕೇಳಿಕೊಂಡರು. ಎರಡನೇ ಗುಹೆಯಲ್ಲಿ ಚಿಕ್ಕದಾದರೂ ಬೆಳಕು ಚೆನ್ನಾಗಿತ್ತು. ಏಕೆಂದರೆ ಸೂರ್ಯನ ಬಿಸಿಲಿನ ಬೆಳಕು ಒಳಗೆ ಧಾರಾಳವಾಗಿ ಬಿದ್ದಿತ್ತು. ನೆಲವೆಲ್ಲ ಚೊಕ್ಕಟವಾಗಿತ್ತು. ಅಲ್ಲಿ ಒಂದು ಗದ್ದಿಗೆಯೂ, ಪಕ್ಕದಲ್ಲಿ ಎರಡು ಮಣ್ಣಿನ ಪಾತ್ರೆಗಳೂ, ಸ್ವಲ್ಪ ಬೂದಿಯೂ ಇತ್ತು. ಬಂದು ಹೋಗುವ ಸಾಧುಗಳಿಗೆ ಇದೇ ಆವಾಸಸ್ಥಾನ. ಮುಂದೆ ಕಾಣುತ್ತಿದ್ದುದೆಲ್ಲ ಕತ್ತಲೆಯ ಕೋಣೆಗಳು. ಅಲ್ಲಿ ಒಂದು ಸ್ಥಳದಲ್ಲಿ ಒರತೆಯ ನೀರು ನಿಂತಿತ್ತು. ಅದು ಸ್ವಚ್ಛವಾಗಿ, ತಿಳಿಯಾಗಿ, ಸಿಹಿಯಾಗಿದ್ದುದರಿಂದ ಎಲ್ಲರೂ ಎರಡೆರಡು ಬೊಗಸೆ ನೀರು ಕುಡಿದು ತೃಪ್ತರಾದರು. ಗವಿಯ ಮೇಲು ಭಾಗವೇ ಕಾಣುತ್ತಿರಲಿಲ್ಲ. ಗದ್ದಿಗೆಯ ಪಕ್ಕದಲ್ಲಿ ಹುಟ್ಟಿಕೊಂಡು ಬೆಳೆದಿದ್ದ ಎರಡು ಮರಗಳು ತೆಂಗಿನ ಮರದಂತೆ ಉನ್ನತವಾಗಿ ಬೆಳೆದಿದ್ದರೂ, ಅವು ಹೊರಗಿನ ಗವಿಯಲ್ಲಿದ್ದವರಿಗೆ ಕಾಣಿಸುವಂತಿರಲಿಲ್ಲ. ಮುಂದಿನ ಗುಹಾದ್ವಾರದಲ್ಲಿ ಬಂಡೆಗಳು ಕಂಬಗಳಂತೆ ಸಾಲಾಗಿ ಕಂಡರೂ ಇನ್ನೆರಡು ಭಾರಿ ಬಂಡೆಗಳು ಮಲಗಿರುವ ತಿಮಿಂಗಿಲದಂತೆ ಕಂಡವು. ಒಂದು ಬಂಡೆಯ ಮೇಲೆ "ಮುಂದೆ ದಾರಿ ಇಲ್ಲ" ಎಂಬ ಅಕ್ಷರಗಳನ್ನು ಯಾರೋ ಕೊರೆಸಿದ್ದರು.

ಕ್ಯಾಪ್ಟನ್, "ಬೆಳಕಿನ ಸೂಚನೆ ಕಂಡ ಕಿಂಡಿಯನ್ನೇ ಅನುಸರಿಸಿ ಹೋಗುತ್ತೇನೆ. ನೀವೂ ಹಿಂಬಾಲಿಸಿರಿ," ಎಂದು ಸಲಹೆಮಾಡಿದ್ದ. ಅಷ್ಟು ಹೊತ್ತಿಗೆ ಹೊರಗಿನಿಂದ ಯಾರೋ, "ಮುಂದೆ ಹೋಗಲು ದಾರಿ ಇಲ್ಲ. ಯಾರಾದರೂ ದಾರಿತಪ್ಪಿ ಕತ್ತಲು ಗುಹೆಯಲ್ಲಿ ಸಿಕ್ಕಿಕೊಂಡರೆ ಮೂರು ತಿಂಗಳಾದರೂ ಹೊರಕ್ಕೆ ಬರಲಾರಿರಿ. ಹಗಲು ಹೊತ್ತಿನಲ್ಲಿ ಕಾಡು ಮೃಗಗಳು ಒಳಗೆ ಮಲಗಿರಲೂ ಬಹುದು. ಇದರ ಮೇಲೆ ನಿಮ್ಮ ಹಣೆಬರಹ" ಎಂದು ಕೂಗಿ ಎಚ್ಚರಿಸಿದರು.

ಎಚ್ಚರಿಕೆ ಹೇಳಿದ ಮನುಷ್ಯ ಸತ್ಯವನ್ನೇ ಹೇಳಿದ, ಕಾರಣವೇನೆಂದರೆ ಈ ಬೆಟ್ಟವೆಲ್ಲ ಟೊಳ್ಳಾಗಿದೆ. ಬಂಡೆ ಬಂಡೆಗಳ ಮಧ್ಯೆ ಕಾಣಿಸುವ ಸಂದು ಓಣಿಯಂತಿದೆ. ಅಲ್ಲಿಗೆ ಹೋಗುವವರು ಸಂದುಗಳನ್ನೇ ದಾರಿ ಎಂದು ಭ್ರಮಿಸಿ ಹೋದರೆ, ಆ ಕತ್ತಲೆಯು ಎತ್ತಕಡೆಗೆ ಹೋಗುವುದೋ ಯಾರಿಗೆ ಗೊತ್ತು! ಅಲ್ಲಿ ನೋಡತಕ್ಕದ್ದಾದರೂ ಏನು ಇದೆ? ನನಗೆ ಮನಸ್ಸು ಅಳುಕಿತು. ಇವರ ಸುರಕ್ಷತೆ ನನಗೆ ಸೇರಿದ್ದು. ಈ ವಿಕ್ರಮದ ಕೆಲಸದಿಂದ ಏನು ಲಾಭ ಎಂಬ ಚಿಂತೆ ನನ್ನನ್ನು ಅಧೈರ್ಯಗೊಳಿಸಿತು. ಆದುದರಿಂದ ಎಲ್ಲರನ್ನೂ ವಾಪಸ್ಸು ಕರೆದುಕೊಂಡು ಹೋಗಲು ಮನಸ್ಸಾಯಿತು. ಅದರಂತೆ ಅವರನ್ನೆಲ್ಲ ಒಪ್ಪಿಸಲು ಕೇಳಿಕೊಂಡೆ.

ಆದರೆ ಅವರು ಒಪ್ಪಿಕೊಳ್ಳಲಿಲ್ಲ. ಏಕೆಂದರೆ ಆಗಲೇ ಕ್ಯಾಪ್ಟನ್ ಅವನ ಗುಂಪಿನೊಡನೆ ಗುಹೆಯೊಳಕ್ಕೆ ಹೊರಟು ಹೋಗಿದ್ದ. ಆತನ ಸಂಗಡಿಗರಾಗಲಿ ಆತನಾಗಲಿ ಕಾಣಿಸಲಿಲ್ಲ. ಅಬ್ಬರಿಸಿ ಕೂಗಿದರೂ ಉತ್ತರಬರಲಿಲ್ಲ. ಎಲ್ಲರೂ ಮುಂದೆ ಹೋದವರನ್ನು ಗವಿಯಲ್ಲಿ ಬಿಟ್ಟು ನಾವು ಮಾತ್ರ ವಾಪಸಾಗುವುದು ನ್ಯಾಯವೂ ಅಲ್ಲ, ಧರ್ಮವೂ ಅಲ್ಲ, ಎಂದು ಹೇಳಿದರು.

ಎಲ್ಲರೂ ಕ್ಯಾಪ್ಟನ್ ಕೃಷ್ಣಮೂರ್ತಿಯನ್ನು ಅರಸುತ್ತ ಹೊರಟೆವು. ಅಡಿಗಡಿಗೆ ಕೂಗಿ ಕೂಗಿ ಗಂಟಲು ಗಾರಾಯಿತು. ಕೋತಿಗಳು ಮರದ ಕೊಂಬೆಯ ಮೇಲೆ ಸಾಗುವಂತೆ ಬಂಡೆಯ ಮೇಲೆ ಮಂಡಿಯೂರಿಕೊಂಡು ತೆವಳಿದರೂ ಬಂಡೆಯ ಕೊನೆ ಮುಟ್ಟಿದಾಗ ನಾಲ್ಕು ಐದು ಅಡಿ ಕೆಳಕ್ಕೆ ಧುಮುಕಬೇಕಾಯಿತು. ಹಿಂದಿರುಗಿ ನೋಡಿದಾಗ ನಮ್ಮ ಗುಂಪು ಒಡೆದು ಎರಡಾಗಿತ್ತು. ಕೆಲವರು ಹಿಂದೆಯೇ ಉಳಿದಿದ್ದರು. ಈಗ ವಾಸ್ತ

ವವಾಗಿ ಮೂರು ಗುಂಪಾಗಿದ್ದರೂ ಆ ಗುಂಪುಗಳು ಕಾಣದಷ್ಟು ದೂರದಲ್ಲಿದ್ದು ಕೇವಲ ಧ್ವನಿಯಿಂದಲೇ ನಾವಿರುವ ದಿಕ್ಕನ್ನು ಗುರುತಿಸಬಹುದಾಗಿತ್ತು. ಬಂಡೆಗಳ ಮೇಲೆಲ್ಲ ಬಳ್ಳಿಗಳೂ ಪೊದೆಗಳೂ ಬೆಳೆದಿದ್ದವು. ಪೊತ್ತು ಮೀರುತ್ತಿತ್ತು. ಒಂದು ವೇಳೆ ರಾತ್ರಿಯವರೆಗೂ ಹೀಗೇ ಆದರೆ ಮುಂದೇನು ಗತಿ? ಎಂಬ ಚಿಂತೆ ಮೂಡಿ ಎದೆ ಡವಡವ ಹೊಡೆದುಕೊಳ್ಳುತ್ತಿತ್ತು! ಸಂಜೆಯ ವೇಳೆಯಾದರೆ. ಗವಿಯಲ್ಲಿ ಆಶ್ರಯಪಡೆದ ಕಾಡು ಮೃಗಗಳು ಹೊರಬರಬಹುದು-ಮುಂತಾದ ಯೋಚನೆಗಳು ಬಂದವು. ಕ್ಯಾಪ್ಟನ್ ಎಲ್ಲಿದ್ದನೋ ದೇವರಿಗೇ ಗೊತ್ತು.

ಕೊನೆಗೆ ಒಂದು ಯೋಚನೆ ಹೊಳೆಯಿತು. ಈ ಕತ್ತಲೆಯಗವಿಯಲ್ಲಿ ಮಾಡುವ ಪ್ರಯಾಣ ಕೊನೆ ಇಲ್ಲದ್ದು. ಮೊದಲು ಬೆಳಕಾದ ಒಂದು ಸ್ಥಳವನ್ನು ಕಂಡುಹಿಡಿದು ಧ್ವನಿಯಿಂದಲೇ ಎಲ್ಲರನ್ನೂ ಒಂದು ಕಡೆ ಸೇರಿಸಿ, ನಾವು ಸಿದ್ದಪ್ಪನ ಗವಿಯಿಂದ ಯಾವ ದಿಕ್ಕಿನಲ್ಲಿದ್ದೇವೆಂಬುದನ್ನು ಗುರುತಿಸಿ, ಎಲ್ಲರೂ ಒಟ್ಟಾಗಿ ಹೋಗಬೇಕು ಎಂದುಕೊಂಡು ಎಲ್ಲರನ್ನೂ ಬಿಟ್ಟು ಸುತ್ತಾಡಿ ಬಿಸಿಲಿರುವ ಬಂಡೆಯನ್ನು ಕಂಡೆ. ಅಷ್ಟು ಹೊತ್ತಿಗೆ ನಮ್ಮಿಂದ ಬೇರ್ಪಟ್ಟಿದ್ದವರ ಧ್ವನಿಕೇಳಿಸಿತು. ಧ್ವನಿ-ಪ್ರತಿಧ್ವನಿಗಳ ಸಹಾಯದಿಂದ ಎರಡು ಗುಂಪುಗಳು ಒಂದಾಗುವಲ್ಲಿ ಯಶಸ್ವಿಯಾದವು. ಆದರೆ ಬಿಸಿಲು ಬಂಡೆಗೆ ಹತ್ತಲು ಕಷ್ಟವಾಯಿತು. ಒಬ್ಬಿಬ್ಬರು ಬಿಸಿಲು ಬಂಡೆಯನ್ನೇರಿ, 'ಇಲ್ಲಿ ಆಕಾಶ ಕಾಣಿಸುತ್ತಿದೆ' ಎಂದು ಕೂಗಿದರು. ಅಂದರೆ ಬೆಟ್ಟದ ನೆತ್ತಿಯಲ್ಲಿದ್ದೇವೆಂದು ಅರ್ಥವಾಯಿತು. ಮುಂದೆ ಬಂಡೆಯನ್ನು ಹತ್ತುವ ಕೆಲಸ ಮುಗಿದಿತ್ತು. ಒಬ್ಬೊಬ್ಬರನ್ನೇ ಮೇಲಕ್ಕೆ ಹತ್ತಿಸಲಾಯಿತು. ನಮ್ಮ ಗುಂಪಿನಲ್ಲಿ ಈಗ ಹನ್ನೊಂದು ಜನ ಸೇರಿದರು; ಕ್ಯಾಪ್ಟನ್ ಗುಂಪಿನ ಮೂವರನ್ನು ಧ್ವನಿಯಿಂದಲೇ ಹುಡುಕುತ್ತಿದ್ದೆವು. ಬೆಟ್ಟದ ಶಿಖರದಲ್ಲಿದ್ದ ನಾವು ಬೂದುಗವಿಯನ್ನು ಹುಡುಕಿದೆವು. ಮುಂದೆ ಕಾಣಬೇಕಾಗಿದ್ದ ಮಂಟಪ ಹಿಂದುಮುಂದಾಗಿತ್ತು. ದಿಕ್ಕೂ ಸಿಕ್ಕಿತು. ಶಿಖರದಲ್ಲಿ ಸುತ್ತಾಡಿದೆವು. ಸಿದ್ಧೇಶ್ವರನ ಗುಹೆಯಲ್ಲಿ ಉರಿಯುತ್ತಿದ್ದ ಧೂಪದ ವಾಸನೆಯಿಂದ ನಾವಿರುವ ಸ್ಥಳದ ಅಂದಾಜು ಸಿಕ್ಕಿತು. ಬಂಡೆಗಳ ಸಂದಿನಲ್ಲಿ ದೇವರ ಮುಂದೆ ಹಚ್ಚಿದ್ದ ದೀವಟಿಗೆಗಳು ಮಿನುಗುವುದನ್ನು ಕಂಡೆವು. ಅವು ಸುಮಾರು ಮುನ್ನೂರು ಅಡಿಗಳಷ್ಟು ಕೆಳಗಿದ್ದವು. ಅಲ್ಲಿಗೆ ಇಳಿಯಲು ಅನುಕೂಲವಾದ ಜಾಗವೂ ಸಿಕ್ಕಿತು. ಪ್ರಯಾಸದಿಂದ ಒಬ್ಬರಾದ ಮೇಲೆ ಒಬ್ಬರಂತೆ ಇಳಿದೆವು. ಅಲ್ಲೆಲ್ಲೋ ದಾರಿ ತಪ್ಪಿ ಅಲೆದಾಡುತ್ತಿದ್ದ ಕ್ಯಾಪ್ಟನ್ ಗುಂಪಿನ ಮೂವರು ನಮ್ಮ ಗುಂಪಿನವರು ಮಾಡುತ್ತಿದ್ದ ಆರ್ಭಟದ ಮಾರ್ಗವನ್ನೇ ಅರಸುತ್ತ ಜೊತೆಯಾದರು. ಸಿದ್ಧೇಶ್ವರನ ದಯದಿಂದ ಎಲ್ಲ ಹದಿನಾಲ್ಕು ಜನರೂ ಮತ್ತೆ ದೇವರ ಗುಹೆಯಲ್ಲಿ ಸಂಧಿಸಿ ದೇವರಿಗೆ ಶರಣು ಹೊಡೆಯುತ್ತಿದ್ದರು. ಬೆಳಗಿನ ಹನ್ನೊಂದು ಗಂಟೆಗೆ ಪೂಜೆ ಮುಗಿಸಿ ಹೊರಟವರು ಮಧ್ಯಾಹ್ನ ಮೂರು ಘಂಟೆಗೆ ಎಲ್ಲರೂ ಸೇರಿದರು.

ಅಡುಗೆ ವ್ಯವಸ್ಥೆಗೆ ನಿಂತಿದ್ದ ನಾಲ್ವರೂ ಹೆದರಿ ಹಳ್ಳಿಯ ಜನರ ಸಹಾಯದಿಂದ ಹುಡುಕಲು ಬಂದು ಸೇರಿದ್ದರು. ಹೋಗಿದ್ದ ಜೀವಗಳು ಮತ್ತೆ ಉಸಿರಾಡಿದವು. ಅವರು ಪುನಃ ತಾಯಿಯ ಗರ್ಭದಿಂದ ಬಂದಂತೆ ಸಂತಸಪಟ್ಟರು. ಹಸಿವಿನಿಂದ ಬಳಲಿದ್ದವರಿಗೆ ಮೃಷ್ಟಾನ್ನದ ಭೋಜನವಾಯಿತು.

ಈ ಘಟನೆ ನಡೆದು ಇಂದಿಗೆ ಸರಿಯಾಗಿ ನಲವತ್ತೈದು ವರ್ಷಗಳಾಗಿವೆ. ಸಿದ್ಧಪ್ಪನ ಗವಿಯ ಬಂಡೆಗಳು ಹಾಗೇ ಇವೆ. ಅಲಸಂದೆ ಕೆರೆಯಲ್ಲಿ ಕಂಡ ಅಜಗರ (ಹೆಬ್ಬಾವು) ಇನ್ನೂ ಅಲ್ಲಿಯೇ ಇರಬಹುದು. ಅಲ್ಲಿಯ ತಿಳಿಗಾಳಿಯು ಜಾಲಗಿರಿಯ ಹೂವಿನ ಸುವಾಸನೆಯನ್ನೂ ಇನ್ನೂ ಬೀರುತ್ತಿರಬಹುದು. ●

---

ಎಲ್ಲರೂ ಮೃತ್ಯುವಿಗೆ ಹೆದರುವವರೆ. ಸಂತರು ಮಾತ್ರ ಇದಕ್ಕೆ ಅಪವಾದ. ಅವರು ಮರಣಕ್ಕಾಗಲಿ ಮರಣದ ನಂತರ ಒದಗಬಹುದಾದ ಸ್ಥಿತಿಗಾಗಲಿ ಭಯಪಡುವುದೇ ಇಲ್ಲ.

● **ಮತ್ಸ್ಯ ಪುರಾಣ**

# ನಿಮ್ಮ ಹೊಗಳಿಕೆ ಎಷ್ಟು ಪ್ರಾಮಾಣಿಕ?

ಹೊಗಳಿ ಹೊಗಳಿ ಎನ್ನ
ಹೊನ್ನ ಶೂಲಕ್ಕೇರಿಸದಿರಯ್ಯಾ....

-ಎಂದರು ಅಣ್ಣ ಬಸವಣ್ಣನವರು. ಯಾಕೆಂದರೆ ಹೊಗಳಿಕೆಯ ಕೆಲವು ಶಬ್ದಗಳು, ಮೆಚ್ಚಿಗೆ ಸೂಸುವ ಮುಖ, ಪ್ರಶಂಸಾಪೂರ್ವಕ ನಗು-ಇಷ್ಟೇ ಸಾಕು ಒಬ್ಬನನ್ನು ಹಿರಿಹಿರಿ ಹಿಗ್ಗಿಸಿ ಹೀರೇಕಾಯಿ ಮಾಡಲು ಎಂಬುದು ಅವರಿಗೆ ಗೊತ್ತಿತ್ತು. ಆದರಿಂದ ತಾವು ಅಟ್ಟಕ್ಕೇರಿ ಕೂತೇನೆಂಬ ಭಯದ ಅರಿವೂ ಅವರಿಗಿತ್ತು.

ನಾವೆಲ್ಲ, ಸಾಮಾನ್ಯರು, ನಮ್ಮ ಮೂಲಭೂತ ಅವಶ್ಯಕತೆಗಳ ಪೂರೈಕೆಯ ನಂತರ ಹೆಣಗುವುದು ಪ್ರಾಯಶಃ 'ಜನಪ್ರಿಯತೆ'ಗಾಗಿಯೇ. ಸುತ್ತ ಮುತ್ತಲಿನ ಜನ ನಮ್ಮನ್ನು ಗಮನಿಸಬೇಕು, ಗುರುತಿಸಬೇಕು, ಪ್ರಶಂಸಿಸಬೇಕು ಎಂದು ಬಯಸುತ್ತೇವೆ. ಈ ವಾಂಛೆಗೆ, ಬಸವಣ್ಣನವರನ್ನು ಬಿಟ್ಟರೆ, ಯಾರೂ ಹೊರತಲ್ಲ. ಮಟ್ಟವಷ್ಟೇ ಬೇರೆ ಬೇರೆಯಾಗಿರಬಹುದು. ಕೆಲವರು ತಮ್ಮನ್ನು ಅಡಿಗಡಿಗೂ ಹೊಗಳಲಿ ಎಂದು ಇಚ್ಛಿಸಿದರೆ, ಇನ್ನು ಕೆಲವರಿಗೆ ಒಂದು ಪ್ರಶಂಸಾಪೂರ್ವಕ ನೋಟವೇ ಸಾಕಾಗುತ್ತದೆ. ಅಥವಾ ಶಬ್ದರಹಿತವಾದ, ಆದರೆ ಆತ್ಮೀಯವಾದ ಬೆನ್ನು ತಟ್ಟುವಿಕೆಯೇ ಅವರಲ್ಲಿ ಹೊಸ ಚೈತನ್ಯ ಮೂಡಿಸುತ್ತದೆ.

ಮನಃಶಾಸ್ತ್ರಜ್ಞರ ಪ್ರಕಾರ ಮಗುವಿರಲಿ, ಗೃಹಿಣಿಯಿರಲಿ ಅಥವಾ ಯಶಸ್ವಿ ಅಧಿಕಾರಿಯೇ ಆಗಿರಲಿ, ಎಲ್ಲರಿಗೂ ತಮ್ಮನ್ನು ಇತರರು ಹೊಗಳಬೇಕೆಂಬ ಅಪೇಕ್ಷೆ. (ಮನುಷ್ಯಮಾತ್ರರಿರಲಿ ಸಾಕುಪ್ರಾಣಿಗಳು ಕೂಡ ಈ ಹೊಗಳಿಕೆಯ ಮತ್ತು ತೆಗಳಿಕೆಯ ಮಾತುಗಳನ್ನು ಅರ್ಥೈಸಿಕೊಂಡು ತದನುಸಾರ ವರ್ತಿಸುತ್ತವೆ.) ಹೊಗಳಿಕೆಯ ಕೆಲವು ಶಬ್ದಗಳು ಮನುಷ್ಯ ಮನಸ್ಸಿನ ಮೇಲೆ ಮನೋಲ್ಲಾಸಕಾರಿ ಮಾತ್ರೆಗಳಂತೆಯೂ ಕೆಲಸ ಮಾಡುತ್ತವೆ.

ಒಬ್ಬ ಕಲಾವಿದ ತನ್ನೆಲ್ಲಾ ಮೇಧಾಶಕ್ತಿ, ಕಲ್ಪಕ ಶಕ್ತಿಗಳನ್ನು ಬಳಸಿ ಬೆವರು ಸುರಿಸಿ, ಸೃಷ್ಟಿಸಿದ ಕೃತಿಯನ್ನು ಹೃದಯ ತುಂಬಿ ಪ್ರಶಂಸಿಸುವುದ

**ಹೊಗಳಿಕೆ ಏನೆಲ್ಲ ಭಾವನೆಗಳನ್ನುಂಟು ಮಾಡುತ್ತದೆ! ಹೊಗಳುವ ಜನ ಪ್ರಶಂಸೆಯ ಮಳೆಯನ್ನೇ ಸುರಿಸುತ್ತಾರೆ. ಅದು ಸ್ವಾರ್ಥದೃಷ್ಟಿಯಿಂದಲೂ ಆಗಿರಬಹುದು, ಅವರ ಸ್ವಭಾವದ ಪರಿಣಾಮವೂ ಆಗಿರಬಹುದು. ಆದರೆ, ಯಾವುದೆ ಹೊಗಳಿಕೆ ಅದೆಷ್ಟು ಪ್ರಾಮಾಣಿಕ ಎಂಬುದನ್ನು ತೂಗಿ ನೋಡಬೇಕಾದ್ದು ಅತ್ಯವಶ್ಯ.**

ರಿಂದ ಅವನಲ್ಲಿ ಇನ್ನಷ್ಟು ಉತ್ಕೃಷ್ಟವಾದ ಕಲಾಕೃತಿಗಳನ್ನು ಸೃಜಿಸುವ ಹುಮ್ಮಸ್ಸು ಹುಟ್ಟುತ್ತದೆ.

ಶ್ರಮಪಟ್ಟು ಅಡಿಗೆ ತಯಾರಿಸಿ ಔತಣವಿತ್ತ ಆತಿಥೇಯಳ ಪಾಕ ಪ್ರಾವೀಣ್ಯವನ್ನು ಬಾಯಿ ಚಪ್ಪರಿಸುತ್ತ "ವಾಹವ್ವಾ, ಎಷ್ಟು ರುಚಿ!" ಎಂದು ಹೊಗಳುವುದರಿಂದ ಅವಳಿಗೆ ತನ್ನ ಶ್ರಮ ಸಾರ್ಥಕವೆಂಬ ಧನ್ಯತಾಭಾವ ಉಂಟಾಗುತ್ತದೆ. ಮಗಳು ಅಚ್ಚುಕಟ್ಟಾಗಿ ಮಾಡಿರುವ ಹೋಮ್ ವರ್ಕನ್ನು ನೋಡಿ ತಂದೆ-ತಾಯಿ, "ಗುಡ್.... ವೆರೀ ಗುಡ್" ಎನ್ನುವುದರಿಂದ ಅವಳಿಗೆ ಆತ್ಮವಿಶ್ವಾಸ ಹೆಚ್ಚುತ್ತದೆ. ಹೀಗೆ ಪ್ರಶಂಸೆ ಮನುಷ್ಯನ ಆತ್ಮಸ್ಥೈರ್ಯವನ್ನೂ ಹುರುಪನ್ನೂ ಇಮ್ಮಡಿಸುವುದರ ಜತೆಗೆ ಅವನಿಗೆ ನೈತಿಕ ಬಲವನ್ನೂ ತಂದುಕೊಡುತ್ತದೆ ಎನ್ನುವುದರ ಕುರಿತು ಭಿನ್ನಾಭಿಪ್ರಾಯವಿಲ್ಲ. ಅಂತೆಯೆ, ಟ್ರೈಸನ್ ಎಡ್ವರ್ಡ್ಸ್, "ಅರ್ಹ ಹಾಗು ಒಳ್ಳೆಯ ಹೊಗಳಿಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತದೆ; ಹಾಗೂ ಆತ್ಮವಿಶ್ವಾಸವಿಲ್ಲದವರಿಗೂ ಸೋಲಿನಿಂದ ನಿರಾಶೆ ಹೊಂದಿದವರಿಗೂ ಬಲ ನೀಡುತ್ತದೆ," ಎಂದಿದ್ದಾನೆ.

ಆದರೆ ತಮ್ಮ ಸ್ವಾರ್ಥ ಸಾಧನೆಗಾಗಿ ಕೆಲವರು ಅತಿ ಪ್ರಶಂಸೆ ಮಾಡುತ್ತಿರುತ್ತಾರೆ. ಇಂಥವರನ್ನು ಚೇಷ್ಟೆಗಾಗಿ 'ಹೊಗಳುಭಟ್ಟ'ರೆಂದೇ ಕರೆಯುವ ವಾಡಿಕೆ. ಅವರ ಶಬ್ದ ಕೋಶದಲ್ಲಿ ಬರಿ ವಿಶೇಷಣಗಳೇ ಇರುತ್ತವೆ. ಇಂಥವರ ಕುರಿತು ಎಚ್ಚರದಿಂದಿರುವುದು ಅತ್ಯವಶ್ಯಕ. "ಸುಳ್ಳು ಪ್ರಶಂಸೆ ಎಂದರೆ ಸುತ್ತಿ ಬಳಸಿ ಬಯ್ದಂತೆ," ಎಂಬ ಹೆನ್ರಿ ಬ್ರಾಡ್ ಹರ್ಸ್ಟ್‌ನ ನುಡಿ ಹಾಗೂ, "ನಿಜವಾದ ಪ್ರಶಂಸೆಯಲ್ಲಿ ವಿಧೇಯತೆ ಹೆಚ್ಚಿರುತ್ತದೆ. 'ಸುಳ್ಳು' ಪ್ರಶಂಸೆ ಬರಿ ಅದ್ಭುತ ಎನ್ನುವುದಕ್ಕಷ್ಟೇ ಸೀಮಿತವಾಗಿರುತ್ತದೆ," ಎನ್ನುವ ಹೆನ್ರಿ ಹೋಮ್‌ನ ಮಾತು ನೆನಪಲ್ಲಿಡುವಂಥವು.

ಹೊಗಳಿಕೆಯು ಎದೆಯಾಳದಿಂದ ಬಂದದ್ದೇ, ಕೇವಲ ಗಂಟಲಿಂದೀಚೆಗೆ ನೆಗೆದದ್ದೇ ಎಂದು ಅರಿಯುವುದು ಕಷ್ಟದ ಕೆಲಸ. ಅತಿ ಚಾಣಾಕ್ಷರು ಕೂಡ ಕೆಲವೊಮ್ಮೆ ಇಂಥ 'ಶರ್ಕರ ಲೇಪಿತ' ಮಾತಿಗೆ ಮರುಳಾಗಿ ಮೂರ್ಖರಾದ ಉದಾಹರಣೆಗಳೂ ಸಾಕಷ್ಟಿವೆ. ಈ 'ಸಕ್ಕರೆ ಗುಳಿಗೆ'ಯ ಜನರಾಗಲಿ ಎದುರಿನವರು ತಮ್ಮ ಬಗ್ಗೆ ಒಳ್ಳೆಯ

• ವಿದ್ಯಾ ಕೊಡ್ಲೆಕೆರೆ

ಅಭಿಪ್ರಾಯ ತಳೆಯುವಂತೆ ಮಾಡಲು ಯತ್ನಿಸುವವರಾಗಲಿ ಹೆಚ್ಚಾಗಿ ಒಂದು ರೀತಿಯ ಕೀಳರಿಮೆಯಿಂದ ಬಳಲುತ್ತಿರುತ್ತಾರೆಂಬುದು ಮನಃಶಾಸ್ತ್ರಜ್ಞರ ಅಭಿಪ್ರಾಯ.

ಇಂಥ ಕೀಳರಿಮೆಗೆ ಕಾರಣ ಅವರಲ್ಲಿರುವ ಯಾವುದೋ ಒಂದು ದೋಷ. ಉದಾಹರಣೆಗೆ ಸಾಮಾನ್ಯಕ್ಕಿಂತ ಸ್ವಲ್ಪ ಜಾಸ್ತಿಯೇ ಅನ್ನಬಹುದಾದಷ್ಟು ಕಪ್ಪಗಿರುವವರೋ ಮೆಳ್ಳಗಣ್ಣುಳ್ಳವರೋ ಅಥವಾ ಉಗ್ಗುವಿಕೆಯುಳ್ಳವರೋ ಅದೊಂದು 'ಊನತೆ'ಯೆಂದೇ ಭಾವಿಸಿ ಕುಗ್ಗಿಕೊಂಡೇ ಇರುವುದು ಅವರ ನಡೆ-ನುಡಿಗಳಲ್ಲಿ ವ್ಯಕ್ತವಾಗುತ್ತದೆ.

ಇನ್ನು ಕೆಲವರಿರುತ್ತಾರೆ. ಅವರು ತಮ್ಮ ದೋಷಗಳನ್ನು ಮೆಟ್ಟಿ ನಿಂತು 'ತಲೆಯೆತ್ತಿ' ಜೀವಿಸುತ್ತಾರೆ. ಮತ್ತೆ ಕೆಲವರು ತಮ್ಮ 'ಕೊರತೆ'ಗಳನ್ನು ತುಂಬಿಕೊಳ್ಳಲು ಪ್ರಯತ್ನಿಸುತ್ತಾರೆ. ಖೇದದ ಸಂಗತಿಯೆಂದರೆ ಇನ್ನು ಕೆಲವರು ತಮ್ಮಲ್ಲಿಲ್ಲದ ಗುಣಗಳು ಬೇರೆಯವರಲ್ಲಿದ್ದರೆ ಅಸೂಯೆಪಡುತ್ತಾರೆ, ಕರುಬುತ್ತಾರೆ. ಅವರ ಕುರಿತು ಕಹಿ ಭಾವನೆಗಳನ್ನು ಬೆಳೆಸಿಕೊಳ್ಳುತ್ತಾರೆ. ವಿನಾಕಾರಣ ಅವರನ್ನು ದ್ವೇಷಿಸುವ ಹಂತವನ್ನೂ ತಲುಪುತ್ತಾರೆ. ಆದರೆ 'ದ್ವೇಷಿಸಲ್ಪಟ್ಟ'ವನಿಗೆ ಇದಾವುದರ ಪರಿವೆಯೂ ಇರುವುದಿಲ್ಲ. ಯಾಕೆಂದರೆ ಆತನಿಗೆ ಈತನ 'ಪರಿಚಯ'ವೇ ಇರುವುದಿಲ್ಲವಲ್ಲ.

ಕೆಲವರಿಗೆ ಕಂಡ ಪ್ರತಿಯೊಂದೂ 'ಸೂಪರ್ಬ್.' ಎದುರಿಗಿರುವಾತ ಮಾಡಿದ್ದೆಲ್ಲ 'ಶ್ರೇಷ್ಠ.' ಇದರಿಂದ ಪ್ರಶಂಸೆಗೊಳಗಾಗುವ ವ್ಯಕ್ತಿಗೆ ಕೆಲವೊಮ್ಮೆ ಮುಜುಗರ ಉಂಟಾಗಿ ಹೊಗಳಿಕೆ ಹೊನ್ನಶೂಲವೆನಿಸಿಬಿಡುತ್ತದೆ. ಆದರೆ ಹೀಗೆ ಹೊಗಳುವವರಿಗೆ ಯಾವುದೇ ನಿಹಿತ ಸ್ವಾರ್ಥವಿರುವುದಿಲ್ಲವಾದ್ದರಿಂದ ಇಂಥವರು 'ಅಪಾಯಕಾರಿ'ಗಳಲ್ಲ.

ಇನ್ನು ಕೆಲವರಿರುತ್ತಾರೆ. ಅವರಿಗೆ 'ವಂದಿಮಾಗಧರು' ಬೇಕೇ ಬೇಕು. "ಹೊಗಳಿಸಿಕೊಳ್ಳುವ ಅತಿಯಾಸೆ ಇರುವವರು ತಮ್ಮಲ್ಲಿ ಏನೋ ದೋಷ ಇದೆ ಎನ್ನುವುದನ್ನು ಸ್ಪಷ್ಟ ಪಡಿಸುತ್ತಾರೆ," ಎಂದು ಪ್ಲುಟಾರ್ಕ್ ಹೇಳಿದ್ದು ಇಂಥವರನ್ನು ನೋಡಿಯೇ

ಇರಬೇಕು. ಇದರಲ್ಲೇ ಇನ್ನೊಂದು ವರ್ಗವಿದೆ. "ನಾನದಕ್ಕೆ ಅರ್ಹನಲ್ಲ" ಎಂದೆನ್ನುವ ಇವರು 'ಎದುರಿನವರು ಮತ್ತೊಮ್ಮೆ ಹೊಗಳಲಿ' ಎಂಬ ಆಶೆಯಿರುವವರು.

ಫ್ರಾಂಕ್ ಮೆಕಿನ್ನಿ ಹಬ್ಬರ್ಡ್, "ಕೆಲವರು ಹೊಗಳುವುದನ್ನು ಕೇಳಿದರೆ ಅವರು ತಮ್ಮನ್ನು ತಿರುಗಿ ಹೊಗಳಲಿ ಎಂಬುದಕ್ಕಾಗಿಯೇ ಹೊಗಳು ತ್ತಿದ್ದಾರೇನೋ ಅನಿಸುತ್ತದೆ," ಎಂದು ಗುರುತಿಸಿ ದ್ದಾನೆ.

ಸ್ವಾರ್ಥ ಸಾಧನೆಗಾಗಿ ಹೊಗಳುವವರು ಇದ್ದಿದ್ದು ಇಲ್ಲದ್ದು ಎಲ್ಲವನ್ನೂ ಆರೋಪಿಸಿ ಅಟ್ಟ ಕ್ಕೇರಿಸುತ್ತಾರೆ. ಅಷ್ಟೇ ಅಲ್ಲ, ಹೀಗೆ ಅಟ್ಟಕ್ಕೇರಿಸಿದ ವನನ್ನು ಅಲ್ಲಿಂದ ಕೆಡವಲೂ ಇವರಿಗೆ ಹೆಚ್ಚು ಹೊತ್ತು ಬೇಕಿಲ್ಲ. ಈ ಜನರ ಮಾತಿನ ಬಲೆಗೆ ಬೀಳದಂತೆ ಜಾಗರೂಕರಾಗಿರಬೇಕು.

ಮೊದಲ ಪರಿಚಯದಲ್ಲೇ ಅತಿ ಪ್ರಶಂಸೆಗೆ ತೊಡಗುವವರದು ಇನ್ನೊಂದು ವರ್ಗ. ಇವರು ನೇರವಾಗಿ ವ್ಯಕ್ತಿಗತವಾದ ಅಂದರೆ "ನಿನ್ನ ಕಣ್ಣು ಗಳು ಕಮಲ" ಎಂದೋ, "ನಿನ್ನದು ಅತ್ಯಾಕರ್ಷಕ ವ್ಯಕ್ತಿತ್ವ"ವೆಂದೋ ಹೇಳಿಬಿಡುವಂಥವರು. ಇಂಥ ಜನರ ಬಗ್ಗೆ ಇವರು ಇನ್ನೂ ನಾಗರಿಕತೆಯ ಲಕ್ಷಣಗಳನ್ನು ಅರಿಯಬೇಕಿದೆ ಎಂದುಕೊಳ್ಳುವುದೇ ಒಳಿತು.

ಮೊದಲ ಭೇಟಿಯಲ್ಲೇ ಪುಂಖಾನುಪುಂಖ ವಾಗಿ ಹೊಗಳುವ ಜನರದು ಮತ್ತೊಂದು ವರ್ಗ. ಅವರು ಸನ್ನಿವೇಶವನ್ನು ತಿಳಿಯಾಗಿರಿಸಲೋ, ಮಧುರವಾಗಿಸಲೋ ಮಾತಾಡುತ್ತಾರಾದರೂ ಅದರ ಹಿಂದೆ ತಮ್ಮ ಕುರಿತು ಮತ್ತೊಂದು ಒಳ್ಳೆಯ ಅಭಿಪ್ರಾಯ ಮೂಡಿಸುವ ಪ್ರಯತ್ನವಿರು ತ್ತದೆ. ಇಂಥವರನ್ನು ಗಂಭೀರವಾಗಿ ಪರಿಗಣಿಸಬೇ ಕಾದ ಅಗತ್ಯವಿಲ್ಲ. ಆದರೆ ಅವರ ವರ್ತನೆ ಇನ್ನುಳಿದವರೊಡನೆ ಹೇಗಿರುತ್ತದೆ ಎಂದು ಪರೀ ಕ್ಷಿಸಿ ನೋಡಿ. ಅವರು ಇತರರೊಂದಿಗೂ ಹೀಗೇ ಹೊಗಳಿಕೊಂಡು ತಿರುಗುತ್ತಿರುತ್ತಾರೆ. ಅವರ ಸ್ವಭಾ ವವೇ ಹಾಗೆ. ಇಂಥವರು ಯಾರಿಗೂ ಒಳ್ಳೆಯ ಸ್ನೇಹಿತರಾಗಲು ಸಾಧ್ಯವಿಲ್ಲ.

ಇನ್ನು ಪತಿ-ಪತ್ನಿಯರ ವಿಷಯ. ಪರಸ್ಪರ ಪ್ರಶಂಸೆಯೇ ಅವರ ಬದುಕನ್ನು ಸುಗಮಗೊಳಿಸು ತ್ತದೆ. ಆದರೆ ಕೆಲವು ಪತಿ-ಪತ್ನಿಯರು ಸದಾ ಕಿತ್ತಾಡುತ್ತಲೇ ಇದ್ದು ಒಮ್ಮೊಮ್ಮೆ ಒಬ್ಬರಿನ್ನೊಬ್ಬರ ಹೊಗಳಿಕೆಗೂ ಮುಂದಾಗುತ್ತಾರೆ. ಇದರ ಹಿಂದೆ ಒಬ್ಬರಿಗೊಬ್ಬರು ಮೋಸ ಮಾಡುವ ಪ್ರಯತ್ನವಿ ರುತ್ತದೆ. ತಮ್ಮ ಅಕ್ರಮ ಸಂಬಂಧಗಳನ್ನು ಮುಚ್ಚಿಡುವುದಕ್ಕಾಗಿಯೋ ಅಥವಾ ಶೇಖರಿಸಿಟ್ಟ ಹಣ, ಒಡವೆ ಲಪಟಾಯಿಸಲೆಂದೊ 'ಹೊಗ ಳಿಕೆ'ಯನ್ನು ಬಳಸಿಕೊಳ್ಳುತ್ತಾರೆ. ಇಂಥ ಸಂದರ್ಭ ಗಳಲ್ಲಿ, ಆತ ಅಥವಾ ಆಕೆ ಒಂದು ಸಲ ಮೋಸ ಹೋಗಬಹುದು. ಆದರೆ ಕೂಡಲೇ ಆ ಬಣ್ಣದ ಮಾತುಗಳ ಅರ್ಥ ಹಾಗೂ ಉದ್ದೇಶಗಳ ಅರಿವಾಗಿ ಪರಿಸ್ಥಿತಿ ಹದಗೆಡುವುದೂ ಉಂಟು. ಇದು ಸಾಮಾನ್ಯವಾಗಿ ಕೆಳವರ್ಗದ, ಕೂಲಿಕಾರರೇ ಮೊದ ಲಾದವರಲ್ಲಿ ಕಂಡು ಬರುವಂಥದು. "ವ್ಯಕ್ತಿಯೊ ಬ್ಬನ ಸ್ವನಿಂದೆ ಸದಾ ನಂಬಲರ್ಹವೆ; ಸ್ವ-ಪ್ರಶಂ ಸೆಯಲ್ಲ" ಮೈಕೆಲ್ ಡಿ.ಮಂಟಾಗ್ನೆಯ ಈ ಮಾತೂ ಲಕ್ಷ್ಯದಲ್ಲಿರಬೇಕು. ಒಂದಂತೂ ನಿಜ, ಯಾರಿಗೆ ತಮ್ಮ ಬಗ್ಗೆ ಆತ್ಮವಿಶ್ವಾಸವಿರುತ್ತದೆಯೋ ತಮ್ಮ ಗುಣ ಹಾಗೂ ದೋಷಗಳ ಕುರಿತು ಅರಿವಿರುತ್ತದೆಯೋ ಅವರು ಬೇರೆಯವರ ಹೊಗ ಳಿಕೆಗೆ ಮಾರು ಹೋಗುವುದಿಲ್ಲ. ಅಷ್ಟೆ ಅಲ್ಲ, ಅವರು ಬೇರೆಯವರನ್ನು ಹೊಗಳುತ್ತಾ ಕೂರು ವುದೂ ಇಲ್ಲ. ತಮಗೇ ಗೊತ್ತಿರದಂತೆ ತಮ್ಮಲ್ಲಿರ ಬಹುದಾದ ದೋಷಗಳನ್ನು ಪತ್ತೆ ಹಚ್ಚಿ ತಿದ್ದಿಕೊ ಳ್ಳುವ ಯತ್ನದಲ್ಲೇ ಇರುವ ಇವರು ನಿಜಕ್ಕೂ ಸ್ಥಿತಪ್ರಜ್ಞರು. ಎಲ್ಲರೂ ಈ ನಿಟ್ಟಿನಲ್ಲಿ ಪ್ರಯತ್ನಿಸಿದರೆ ನಾವು ಹೊಗಳಿಕೆಯ 'ಅಪಾಯ'ದಿಂದ ಸುರಕ್ಷಿತ ವಾಗಿರಬಹುದು.

ಸ್ಯಾಮ್ಯುಎಲ್ ಜಾನ್ಸನ್ ಹೇಳುತ್ತಾನೆ- "ಪ್ರಶಂಸೆ ಚಿನ್ನ-ವಜ್ರಗಳಂತೆ ವಿರಳವಾದಾಗಲೇ ಅದಕ್ಕೆ ಹೆಚ್ಚಿನ ಬೆಲೆ ಬರುತ್ತದೆ."

ಚಿನ್ನದಂತಹ ಮಾತು. ●



## ಐದು ಮಿನಿ ಕಥೆಗಳು

ಈ ಮೊದಲು 'ಕಥಾಮೋದಕ,' 'ಲಘುಕಥೆಗಳು,' 'ಆ್ಯಂಬ್ರೋಜ್ ಬಿಯರ್ಸ್‌ನ ಕಟು ಹಾಸ್ಯ ಕಥೆಗಳು' ಮುಂತಾದವುಗಳನ್ನು ಸವಿದಿರುವ ನೀವು ಈ ಸಲ ಈ 'ಐದು ಮಿನಿ ಕಥೆ'ಗಳನ್ನೂ ಆಸ್ವಾದಿಸುತ್ತೀರೆಂಬ ಭರವಸೆ ನಮ್ಮದು. ಈ ಕಥೆಗಳನ್ನು ಬರೆದವರೆಲ್ಲ ಈ ಪ್ರಕಾರದಲ್ಲಿ ಕೃಷಿಗೈಯುತ್ತಿರುವವರು.

• ಸಂಪಾದಕ

# "ಸರ್‌ಪ್ರೈಜ್ ವಿಜಿಟ್?"

• ವಿಶಾಖದತ್ತ



ಅದೊಂದು ಪ್ರಖ್ಯಾತ ಸರಕಾರಿ ಆಸ್ಪತ್ರೆ. ಸುತ್ತಮುತ್ತಲಿನ ನಾಲ್ಕು ಜಿಲ್ಲೆಗಳಲ್ಲೇ ಅತ್ಯಂತ ದೊಡ್ಡದೆಂಬ ಹೆಸರುಳ್ಳದ್ದು. ಒಂದೊಂದು ಅಂತಸ್ತಿನಲ್ಲೂ ಎಡಕ್ಕೆ ನಾಲ್ಕು ಬಲಕ್ಕೆ ನಾಲ್ಕು ವಾರ್ಡುಗಳನ್ನುಳ್ಳ ನಾಲ್ಕಂತಸ್ತಿನ ಬೃಹತ್ ಚಿಗ್ಣಾಲಯ.

ಒಂದು ಮುಂಜಾನೆ ಇದ್ದಕ್ಕಿದ್ದ ಹಾಗೆಯೇ ಪೊಲೀಸು ಜೀಪುಗಳು ಬಂದು ನಿಂತವು. ಆಸ್ಪತ್ರೆಯ ವಿಶಾಲ ಆವಾರದಲ್ಲೆಲ್ಲ ಬೂಟುಗಳ ಸದ್ದು. ಕೂತಿದ್ದ-ನಿಂತಿದ್ದ-ಹೊರಟಿದ್ದ-ಬರಲಿದ್ದ ಮಂದಿಯನ್ನೆಲ್ಲ ಕ್ಷಣಾರ್ಧದಲ್ಲಿ ಅಲ್ಲಿಂದ ದೂರ ಹೋಗುವಂತೆ ಒತ್ತಾಯಿಸಿದರು.

ಅಷ್ಟರಲ್ಲೇ ಆಗಮಿಸಿತು ಮಂತ್ರಿ ಮಹೋದರರೊಬ್ಬರ, ನೆತ್ತಿಯ ಮೇಲೆ ಕೆಂಗಣ್ಣಿನಂಥ ಲೈಟು ಹೊತ್ತ, ಅಚ್ಚ ಬಿಳಿಯ ಏರ್‌ಕಂಡೀಶನ್ಡ್ ಕಾರು.

## ಐದು ಮಿನಿ ಕಥೆಗಳು

ಆಸ್ಪತ್ರೆಯ ಮುಖ್ಯಸ್ಥರಿಗಾಗಲೇ ಸುದ್ದಿ ತಲುಪಿತ್ತು.

ಮಂತ್ರಿವರ್ಯರ ಕಾಲು ನೆಲಕ್ಕೆ ಹತ್ತುವುದನ್ನೇ ಕಾಯುತ್ತಿದ್ದ ಆಸ್ಪತ್ರೆಯ ಮುಖ್ಯಸ್ಥರು ವಿನಯಕ್ಕೆ ವಿಧೇಯತೆಗೆ, ಭಯಕ್ಕೆ-ಭಕ್ತಿಗೆ ಮತ್ತೊಂದು ಹೆಸರೇನೋ ಎಂಬಂತೆ ದೇಹವನ್ನು ಹಿಡಿ ಮಾಡಿಕೊಂಡು ಹಲ್ಲು ಗಿಂಜುತ್ತ ಸಾಷ್ಟಾಂಗವೆರಗಿ ಸ್ವಾಗತ ಕೋರಿದರು. ಅವರ ಬೆನ್ನುತಟ್ಟಿ ಹೆಗಲ ಮೇಲೆ ಕೈ ಹಾಕಿಕೊಂಡು ಒಳನಡೆದ ಮಂತ್ರಿಗಳು ಮುಖ್ಯಸ್ಥರ ಕಿವಿಯಲ್ಲೇನು ಉಸುರಿದರು ಎಂಬುದೇ ಹಿಂಬಾಲಕರ ಜಿಜ್ಞಾಸೆ. ಮುಖ್ಯಸ್ಥರು ಮಂತ್ರಿಗಳೊಂದಿಗೆ ತಮ್ಮ ಚೇಂಬರ್‌ಗೆ ಪ್ರವೇಶಿಸಿದರು. ಮುಖ್ಯಸ್ಥರ ಕಣ್ಣು ಸನ್ನೆಯನ್ನು ಅರಿತುಕೊಂಡ ಒಂದಷ್ಟು ಜನ ನಾಲ್ಕೂ ಅಂತಸ್ತುಗಳಲ್ಲಿ ಗಡಿಬಿಡಿಯಿಂದ ನಡೆದಾಡಿದರು. ಮೂವತ್ತೆರಡೂ ವಾರ್ಡುಗಳಲ್ಲಿ ಎಂದಿಲ್ಲದ ಎಲ್ಲಿಲ್ಲದ ಶಿಸ್ತು, ಮೌನ, ಕಾರ್ಯತತ್ಪರತೆ!

ಮಂತ್ರಿಗಳು ಅತ್ತ ವಾರ್ಡುಗಳ ರೌಂಡ್‌ಗೆ ಹೋದಾಗ ಇತ್ತ ಕೆಲವು ಸಿಬ್ಬಂದಿಯವರು ತಂತಮ್ಮಲ್ಲೆ ಮಾತಾಡುತ್ತ ಕುಳಿತಿದ್ದರು.

"ಅಲ್ಲಾ, ಯಾಕೆ ಮಿನಿಸ್ಟರ್ ಸಾಹೇಬ್ರು ಅಂಗೆ 'ಸರ್‌ಪ್ರೈಸ್ ವಿಜಿಟ್' ಮಾಡಿದ್ದು?" ಒಬ್ಬ ಪ್ರಶ್ನೆಯೆಸೆದ.

ಯಾಕಂದ್ರೇನು? ಮಂತ್ರಿಗಳು ಅಂದ್ಮೇಲೆ ಹೀಗೆ ಮಾಡ್ಲೇಬೇಕು, ಮಾಡ್ತಾರೆ." ಇನ್ನೊಬ್ಬ ನಗೆಯಾಡಿದ.

"ಅದು ಸರಿ, ಆದ್ರೆ ಮೊದ್ಲೇ ತಿಳಿಸಿ 'ಸರ್‌ಪ್ರೈಸ್ ವಿಜಿಟ್' ಮಾಡಿದ್ರೆ ಚೆನ್ನಾಗಿರುತ್ತಲ್ಲ ಅಂತ...." ಮೊದಲಿನಾತ ತೊಂದರೆ ತೋಡಿಕೊಂಡ.

"ಹೂಂ. ನೀವ್ಹೇಳೋದ್ರಲ್ಲೂ ಪೈಂಟಿದೆ," ಎನ್ನುವಷ್ಟರಲ್ಲೇ ಮತ್ತೊಬ್ಬ "ಸಾಕಿನ್ನು" ಎಂಬಂತೆ ಸನ್ನೆ ಮಾಡಿದ.

ತಂಪು ಪಾನೀಯ ಹೀರಿದ ಮಂತ್ರಿಮಾನ್ಯರು ಒಂದೊಂದೇ ವಾರ್ಡನ್ನು ಹೊಕ್ಕು, ರೋಗಿಗಳೆಲ್ಲರ ಸ್ಥಿತಿಗತಿಯನ್ನು ಕಣ್ಣಾರೆ ಕಂಡು, ನಾಲ್ಕನೆಯ ಮಹಡಿಯ ಲಿಫ್ಟ್‌ನಿಂದ ನೆಲಕ್ಕಿಳಿಯುತ್ತ ತಮ್ಮ ಕೈ ಕುಲುಕಿ, "ವಾಹವ್ವಾ. ನಿಜಕ್ಕೂ ಒಳ್ಳೆಯ ವ್ಯವಸ್ಥೆ. ನಿಮ್ಮ ಪ್ರಮೋಶನ್ನಿಗೆ ರೆಕಮೆಂಡ್ ಮಾಡುತ್ತೇನೆ," ಎಂದಾಗಲಂತೂ ಆಸ್ಪತ್ರೆಯ ಮುಖ್ಯಸ್ಥರು ಅವರ ಕಾಲಿಗೆರಗಿದರೆಂಬ ಸುದ್ದಿ ನಂತರ ಲಿಫ್ಟ್ ಆಪರೇಟರ್‌ನಿಂದ ಹಬ್ಬಿಹೋಯಿತು.

ಇಷ್ಟೆಲ್ಲಾ 'ಸರ್‌ಪ್ರೈಸ್ ವಿಜಿಟ್'ನ ಸಡಗರದ ನಡುವೆ, ಮಂತ್ರಿಗಳು ಬಂದಿದ್ದ ಉದ್ದೇಶವೇ ಬೇರೆಯಾಗಿತ್ತೆಂದೂ, ಅವರ 'ಆಪ್ತ'ಳೊಬ್ಬಳಿಗೆ ಇದ್ದ 'ತೊಂದರೆ'ಯ ನಿವಾರಣೆಗಾಗಿ ಅವರು ಧಾವಿಸಿದ್ದರೆಂದೂ ತಿಳಿದಿದ್ದು ಕೆಲವೇ ಸಿಬ್ಬಂದಿಗೆ ಮಾತ್ರ.

## ದಾರಿ ಯಾವುದಯ್ಯ?

• ಯಲ್ಲೂರು ಪ್ರಭು

"ಮೀನಾಕ್ಷಿ!.... ಹೋಗಿ ವನಜಾನ ಕರಕೊಂಡು ಬಾರೇ!" ಶ್ರೀಕಂಠಯ್ಯನವರು ಪತ್ನಿಗೆ ಆದೇಶಿಸಿದರು.

ಭಾವಿ ಬೀಗಿತ್ತಿಯೊಂದಿಗೆ ಮಾತಿನಲ್ಲಿ ಮಗ್ನರಾಗಿದ್ದ ಮೀನಾಕ್ಷಿ ಗಕ್ಕನೇ ಎದ್ದು ಕೋಣೆಯ ಬಳಿಗೆ ಧಾವಿಸಿ "ಲೇ.... ವನಜಾ.... ನಿನ್ನ ಶೃಂಗಾರ ಆಯ್ತೇನೇ? ಬಾರೇ ಬೇಗ, ಎಲ್ಲರೂ ಹೊರಗೆ ಕಾಯ್ತಾ ಇದ್ದಾರೆ," ಎಂದು ಅಲವತ್ತುಕೊಂಡರು.

"ಇಗೋಮ್ಮಾ!.... ಬಂದೆ..." ಎನ್ನುತ್ತಾ ಸರ್ವಾಲಂಕಾರಭೂಷಿತಳಾದ ವನಜಾಕ್ಷಿ ಕೋಣೆಯಿಂದ ಹೊರಕ್ಕೆ ಬಂದು, ತಾಯಿಯೊಂದಿಗೆ ಮೆಲ್ಲಗೆ ಹೆಜ್ಜೆ ಹಾಕುತ್ತಾ ಬಂದು ತಂದೆಯವರ ಪಕ್ಕದಲ್ಲೇ ಕುಳಿತಳು.

ಕರಾರುವಾಕ್ಕಾಗಿ ಕುಶಲ ಸಮಾಚಾರ, ಸೌಹಾರ್ದ ಮಾತುಕತೆ, ತಿಂಡಿ-ಕಾಫಿ ಕಾರ್ಯಕ್ರಮಗಳೆಲ್ಲಾ ಮುಗಿದಿದ್ದವು.

ಸ್ವಲ್ಪ ಸಮಯ ಕಳೆದಿತ್ತು.

"ನಾನು ಹುಡುಗಿಯೊಂದಿಗೆ ಸ್ವಲ್ಪ ಪರ್ಸನಲ್ಲಾಗಿ ಮಾತಾಡಬಹುದೇ?" ಗಂಡು ಸುಧಾಕರ, ಶ್ರೀಕಂತಯ್ಯನವರ ಕಡೆಗೆ ಎವೆಯಿಕ್ಕದೇ ನೋಡುತ್ತಾ ಪ್ರಶ್ನಿಸಿದ.

ಮಂದಸ್ಮಿತರಾದ ಶ್ರೀಕಂತಯ್ಯನವರು, "ಆಗತ್ಯವಾಗಿ ಮಾತಾಡಿ! ಟೆರೇಸ್ ಮೇಲೆ ತಣ್ಣಗೆ ಗಾಳಿ ಬರುತ್ತೆ, ಹೋಗಮ್ಮ ವನಜಾ!... ಅವರನ್ನು ಮೇಲಕ್ಕೆ ಕರೆದುಕೊಂಡು ಹೋಗು," ಎಂದು ಪಕ್ಕದಲ್ಲೇ ಕುಳಿತಿದ್ದ ಮಗಳಿಗೆ ಹೇಳಿದರು.

ಸುಧಾಕರ್, ವನಜಾಕ್ಷಿ ಇಬ್ಬರೂ ಸ್ಟೇರ್‌ಕೇಸ್ ಹತ್ತಿ ಟೆರೇಸ್ ಮೇಲಕ್ಕೆ ಬಂದರು.

"ನೀವು ವಿದ್ಯಾಭ್ಯಾಸ ಎಲ್ಲಿ ಮಾಡಿದಿರಿ? ಎಷ್ಟರವರೆಗೂ ಓದಿದ್ದೀರಾ?" ಸುಧಾಕರ ಮೊದಲ ಪ್ರಶ್ನೆ ಹಾಕಿದ.

"ನ್ಯಾನು ಓದಿದೆಲ್ಲಾ ಶಿವಮೊಗ್ಗೇಲಿ. ಬಿ.ಎ. ಕಂಪ್ಲೀಟ್ ಆಗಿದೆ. ಅಬ್ಬಾ.... ಕಾಲೇಜ್ ಡೇಸಲ್ಲಿ ಎಷ್ಟು ಖುಷಿಯಾಗಿದ್ವಿ! ಎಷ್ಟೊಂದು ಫ್ರೆಂಡ್ಸ್! ಎಂಥ ಎಂಜಾಯ್‌ಮೆಂಟ್ಸ್! ಸ್ವೀಟ್ ಮೆಮರೀಸ್! ಅದೆಲ್ಲಾ ಮತ್ತೆ ಬರುತ್ತಾ ಮಿ. ಸುಧಾಕರ್?" ಟೇಪ್‌ರೆಕಾರ್ಡರಿನಂತೆ ಒಂದೇ ಉಸುರಿಗೆ ಒದರಿದಳು ವನಜಾಕ್ಷಿ.

ತಲೆ ತೂಗಿದ ಸುಧಾಕರ್, "ನಿಮಗೆ ಏನೆಂದರೆ ಇಷ್ಟ?" ಎಂದ.

"ಒಂದೇನು... ನನಗೆ ನೂರಾರು ಇಷ್ಟಗಳಿವೆ. ಹೂವುಗಳಲ್ಲಿ ಮಲ್ಲಿಗೆ, ಕಾವ್ಯಗಳಲ್ಲಿ ಕುವೆಂಪು ಅವರದ್ದು, ಸ್ವಿಟ್ಸ್‌ನಲ್ಲಿ ಗುಲಾಬ್ ಜಾಮೂನ್, ಸಿನಿಮಾ ಹೀರೋಗಳಲ್ಲಿ ಡಾ. ರಾಜ್‌ಕುಮಾರ್, ಹೀರೋಯಿನ್‌ಗಳಲ್ಲಿ ಮಾಧುರಿ ದೀಕ್ಷಿತ್, ಆಟಗಳಲ್ಲಿ ಫುಟ್‌ಬಾಲ್, ರಾಜಕೀಯ ನಾಯಕರಲ್ಲಿ ರಾಜೀವ್ ಗಾಂಧಿ.... ಹೀಗೇ ಹೇಳುತ್ತಾ ಹೋದರೆ ಹನುಮಂತನ ಬಾಲದಷ್ಟು ಉದ್ದ ಬೆಳೆದು ಬಿಡುತ್ತದೆ," ಪಟಪಟನೆ ಹೇಳಿದಳು ವನಜಾಕ್ಷಿ.

ಹೀಗೆ ಸುಧಾಕರನ ಅನೇಕ ಪ್ರಶ್ನೆಗಳಿಗೆ ವನಜಾಕ್ಷಿ ಮಾತಿನ ಮಲ್ಲಿಯಂತೆ ಉತ್ತರಿಸಿದಳು.

ಎಲ್ಲಾ ಕಾರ್ಯಗಳು ಮುಗಿದಿತ್ತು. ಸುಧಾಕರ್ ಹಾಗೂ ಅವನ ತಂದೆ ತಾಯಿಗಳು ಮೂವರೂ ಅಲ್ಲಿಂದ ವಿದಾಯ ಪಡೆದರು.

ಎಂಟು ದಿನಗಳ ಅನಂತರ ಶ್ರೀಕಂತಯ್ಯನವರಿಗೆ ಸುಧಾಕರನಿಂದ ಒಂದು ಪತ್ರ ಬಂದಿತು. ಅದರ ಒಕ್ಕಣೆ ಹೀಗಿತ್ತು: "ನಿಮ್ಮ ವನಜಾಕ್ಷೀನ ನಾನು ಮೆಚ್ಚಿದೆ. ಆದರೆ ಅಗತ್ಯಕ್ಕಿಂತ ಹೆಚ್ಚು ಮಾತಾಡುವ ಅವಳ ಅಭ್ಯಾಸ, ಹವ್ಯಾಸ ನನಗೆ ಹಿಡಿಸಲಿಲ್ಲ. ನಾಳೆ ನಮ್ಮ ಮನೆಗೆ ಬಂದಾಗ ಅವಳು ನನ್ನ ಫ್ರೆಂಡ್ಸ್ ಮುಂದೆ ಏನಾದರೂ ಈ ರೀತಿ ಮಾತಾಡಿದರೆ ಅವರು ಏನಂದುಕೊಂಡಾರು? ನನ್ನ ಮಾನ ಏನಾಗಬೇಕು! ನನಗೆ ರಿಜರ್ವ್ಡ್ ನೇಚರ್ ಇರುವಂತ ಹುಡುಗಿ ಆಗಬೇಕು. ಕ್ಷಮಿಸಿ ಈ ಸಂಬಂಧ ನನಗಿಷ್ಟವಿಲ್ಲ!"



ಮೂರು ತಿಂಗಳ ನಂತರ

ವನಜಾಕ್ಷಿಗೆ ಮತ್ತೊಂದು ಸಂಬಂಧ ಬಂದಿತು. ಎಲ್ಲಾ ಕಾರ್ಯಗಳೂ ಮಾಮೂಲಿ



## ಐದು ಮಿನಿ ಕಥೆಗಳು

ನಂತೆ ನಡೆದವು. ಗಂಡು ರಮಾಕಾಂತ್ ವನಜಾಕ್ಷಿಯನ್ನು ಏಕಾಂತದಲ್ಲಿ ಮಾತಾಡಿಸಲು ಟೆರೇಸ್ ಮೇಲಕ್ಕೆ ಕರೆದುಕೊಂಡು ಹೋದ.

"ಏನ್ ಓದಿದ್ದೀರಾ?" ರಮಾಕಾಂತ್ ಉತ್ಸುಕನಾಗಿ ಪ್ರಶ್ನಿಸಿದ.

"ಬಿ.ಎ." ಉತ್ತರಿಸಿ ಮೌನವಾದಳು ವನಜಾಕ್ಷಿ.

"ಎಲ್ಲಿ.... ನೀವು ವಿದ್ಯಾಭ್ಯಾಸ ಮಾಡಿದ್ದು?"

"ಶಿವಮೊಗ್ಗೇಲಿ"

"ನಿಮ್ಮ ಹಾಬೀಸ್?"

"ಕಾದಂಬರಿಗಳನ್ನು ಓದೋದು?"

.... ಹೀಗೆ ರಮಾಕಾಂತನ ಹಲವಾರು ಪ್ರಶ್ನೆಗಳಿಗೆ ವನಜಾಕ್ಷಿ ಚುಟುಕು, ನೇರ ಉತ್ತರಗಳನ್ನು ಕೊಟ್ಟಳು. ರಿಜಲ್ಟ್ ಪತ್ರದ ಮೂಲಕ ತಿಳಿಸುವುದಾಗಿ ಹೇಳಿ ರಮಾಕಾಂತ, ಅವನ ತಂದೆ-ತಾಯಿಗಳು ಹೊರಟು ಹೋದರು.

ಎಂಟು ದಿನಗಳ ನಂತರ ಶ್ರೀಕಂಠಯ್ಯನವರಿಗೆ ರಮಾಕಾಂತನಿಂದ ಒಂದು ಪತ್ರ ಬಂದಿತು. ಅದರ ಒಕ್ಕಣೆ ಹೀಗಿತ್ತು: "ನಿಮ್ಮ ವನಜಾಕ್ಷಿಯನ್ನು ನಾನು ಮೆಚ್ಚಿದೆ. ಆದರೆ ಪ್ರಶ್ನೆಗೆ ಉತ್ತರವಷ್ಟನ್ನೇ ಹೇಳುವ ಅವಳ 'ರೀಜರ್ವ್ಡ್ ನೇಚರ್' ನನಗೆ ಹಿಡಿಸಲಿಲ್ಲ. ನಾಳೆ ನಮ್ಮ ಮನೆಗೆ ಬಂದಾಗ ಅವಳು ನನ್ನ ಫ್ರೆಂಡ್ಸ್ ಮುಂದೆ ಇಷ್ಟು ರಿಜರ್ವ್ಡ್ ಆಗಿದ್ದರೆ ಅವರು ಏನೆಂದುಕೊಂಡಾರು? ನನ್ನ ಮಾನ ಏನಾಗಬೇಕು? ನನಗೆ ಫ್ರೆಂಡ್ಲಿಯಾಗಿರೋ ಹುಡುಗಿ ಆಗಬೇಕು? ಕ್ಷಮಿಸಿ, ಈ ಸಂಬಂಧ ನನಗಿಷ್ಟವಿಲ್ಲ!"

ಶ್ರೀಕಂಠಯ್ಯನವರು ಹಣೆ ಹಣೆ ಚಚ್ಚಿಕೊಂಡರು.

●

# ಆಕೆ.....

● ವಿನಾಯಕ ಭಟ್, ಹಾಸಣಗಿ

**ಮೂ**ಡು ಸಂಜೆಯ ಹೊತ್ತಿನಲ್ಲಿ ಮಳೆ ಹೊಯ್ದದ್ದರಿಂದಲೋ ಏನೋ ಜನರ ತಿರುಗಾಟ ಆ ರಸ್ತೆಯಲ್ಲಿ ಇಲ್ಲವಾಗಿತ್ತು. ಸರ್ವೆಸಾಮಾನ್ಯವಾಗಿ ಆ ರಸ್ತೆ ಸಂಜೆಯಾಗುತ್ತಲೆ ಬಹುತೇಕ ನಿರ್ಜನವಾಗಿಯೇ ಇರುತ್ತದೆ. ಅಲ್ಲೊಂದು ಇಲ್ಲೊಂದು ದಾರಿದೀಪ ಉರಿಯುತ್ತಿರುವುದು ಬಿಟ್ಟರೆ ಕತ್ತಲು ಮುಸುಕಿರುತ್ತದೆ. ಜತೆಗೆ ಸ್ಮಶಾನಮೌನ ಬೇರೆ. ಮಧ್ಯಮ ವರ್ಗದವರೆ ತುಂಬಿರುವ ಪ್ರದೇಶ ಅದು.

ಎರಡು ಸಲ ಆ ರಸ್ತೆಯ ಆ ತುದಿಯಿಂದ ಈ ತುದಿಯ ವರೆಗೂ ಹೋಗಿ ತಿರುಗಿ ಬಂದೆ. ನನಗೆ ಬೇಕಾದ ವಿಳಾಸದ ಮನೆ ಸಿಕ್ಕಲಿಲ್ಲ. ಇದೇ ಕೊನೆಯ ಬಾರಿ ಅಂತ ಮತ್ತೊಮ್ಮೆ ತಿರುಗಿ ಹೊರಟೆ. ಐದಾರು ಮನೆಯ ಕಂಪೌಂಡ್ ದಾಟಿ ಮುಂದಾದೆ. ಅದೇ ಆ ಮುಂದಿನ ಮನೆಯ ಕಂಪೌಂಡಿನ ಗೇಟಿನ ಹತ್ತಿರದ ಕತ್ತಲಿನಿಂದ ಹೆಣ್ಣೊಬ್ಬಳು ನನ್ನತ್ತ ಬಗಲು ಪ್ರಾರಂಭಿಸಿದಳು. ನನ್ನ ಕಾಲುಗಳು ನಿಧಾನವಾದವು. ಅವಳು ನನ್ನ ಎದುರೇ ಬಂದು ನಿಂತಳು, ಮಾತನಾಡಲಿಲ್ಲ. ಏನು ಹೇಳಬೇಕೆಂದು ಗೊತ್ತಾಗಲಿಲ್ಲ ನನಗೆ. ಆದರೂ ಸುಧಾರಿಸಿಕೊಂಡು, "ನಾರಾಯಣ ರಾವ್, ರಿಟೈರ್ಡ್ ರೈಲ್ವೆ ಆಫೀಸರ್, ಡೋರ್ ನಂ. ೨೨೦, ಅವರ ಮನೆ ಎಲ್ಲಿ ಬರುತ್ತೆ?" ಅಂತ ಕೇಳಿದೆ. ಅವಳು ಒಮ್ಮೆಲೆ "ಹುಶ್" ಎಂದು ಕೈಯನ್ನೆತ್ತಿ ತನ್ನ ಬಾಯಿಯ ಮೇಲಿಟ್ಟಳು. ಕತ್ತಲಲ್ಲಿ ಅವಳ ಮುಖ ಕಾಣಲಿಲ್ಲ. ನಾನು ನಿಧಾನವಾಗಿ ಮುಂದೆ ಸಾಗಲು ಪ್ರಾರಂಭಿಸಿದೆ. ಅವಳು ನನ್ನೊಟ್ಟಿಗೆ ಬರಲು ಪ್ರಾರಂಭಿಸಿದಳು. ಕ್ರಮೇಣ ನನ್ನ ಭುಜಕ್ಕೆ ತನ್ನ ಭುಜ ತಾಗಿಸಿಯೇ ಹೆಜ್ಜೆ ಇಟ್ಟಳು. ಹೀಗೆ ಅಪರಿಚಿತರೊಟ್ಟಿಗೆ ದಿಢೀರನೆ ಹೊಂದಿಕೊಳ್ಳುವುದೆಂದರೆ? ಇವಳು ಬೀದಿ ಸೂಳೆಯೆ ಇರಬೇಕು. ತನ್ನ ಈ ದಿನದ ಬದುಕಿನ ತುತ್ತಿಗೆ ನನ್ನನ್ನು ಕರೆಯುತಿದ್ದಾಳೋ ಏನೋ ಎಂದು ಮನಸ್ಸಿನಲ್ಲಿ

ಅಂದುಕೊಳ್ಳುತ್ತ ಮುಂದೆ ಸಾಗುತ್ತಲಿದ್ದೆ.

ಒಮ್ಮೆಲೆ ನಿಂತು ನಿಧಾನವಾಗಿ ಸಿಗರೇಟು ಹೊತ್ತಿಸಿದೆ. ಅಷ್ಟೇನೂ ವಿಕಾರವಲ್ಲದ ಮುಖ. ಮಂದವಾದ ನಗು. ನನ್ನನ್ನೇ ನೋಡುತ್ತಿದ್ದ ಆಕೆ ಕೇಳಿದಳು- "ನೀವು ನಾರಾಯಣರಾವ್ ಅವರ ದೂರದ ಸಂಬಂಧಿ, ಇಲ್ಲೆ ಜಯಲಕ್ಷ್ಮಿಪುರಂನಲ್ಲಿ ಬಾಡಿಗೆ ಮನೆಯಲ್ಲಿದ್ದು ಖಾಸಗಿ ಕಾರಖಾನೆಗೆ ಕೆಲಸಕ್ಕೆ ಹೋಗುತ್ತಿದ್ದೀರಿ, ಅಲ್ವಾ?"

ನಾನು ಹೌದೆಂದು ಸುಮ್ಮನಾದೆ. ಮತ್ತೆ ಮೌನ ಆವರಿಸಿತು, ಎಷ್ಟೋ ಹೊತ್ತಿನ ತನಕ....

ಆ ಬೀದಿಯ ಕೊನೆಗೆ ಬಂದಾಗ ಮತ್ತೆ ಹೇಳಿದಳು- "ಬಹುಶಃ ಮಳೆ ಇನ್ನು ಪ್ರಾರಂಭವಾಗಬಹುದು. ತಣ್ಣನೆಯಗಾಳಿ ಬೀಸುತ್ತಿದೆ. ನಮ್ಮ ಮನೆಯಲ್ಲಿ ರಾತ್ರಿ ಕಳೆದು ನಾಳೆ ಅವರಲ್ಲಿಗೆ ಹೋಗಬಹುದಲ್ಲ? ನಾಳೆ ನಾನೇ ಅವರ ಮನೆ ತೋರಿಸುತ್ತೇನೆ. ದೂರವೇನಿಲ್ಲ, ಇಲ್ಲಿಂದ ಒಂದೂವರೆ ಕಿಲೋಮೀಟರ್ ಅಷ್ಟೇ. ಇನ್ನರ್ಧ ಗಂಟೆಯಲ್ಲಿ ಈ ಬೀದಿಯ ದಾರಿ ದೀಪಗಳೆಲ್ಲ ಆರಿಬಿಡುತ್ತವೆ." ಇವಳ್ಯಾಕೆ ಹೀಗೆ ನನ್ನ ಬೆನ್ನು ಹತ್ತಿದ್ದಾಳೆ? ಯಾಕೆ ನನ್ನನ್ನು ಒತ್ತಾಯಿಸುತ್ತಿದ್ದಾಳೆ? ಯಾರಾದರೂ ನೋಡಿದರೆ ಏನೆಂದಾರು? ಅಂತೆಲ್ಲಾ ನನ್ನ ಮನಸ್ಸಿನ ಮಾತು ಅವಳಿಗೆ ಹೇಗೆ ಕೇಳಿಸಬೇಕು?



"ನಿನ್ನ ಅಪ್ಪ ಅಮ್ಮ ಮನೆಮಂದಿ, ನನ್ನನ್ನು ಈ ಹೊತ್ತಿನಲ್ಲಿ ನೀನು ಮನೆಗೆ ಕರೆದೊಯ್ದರೆ ಏನೂ ಹೇಳುವುದಿಲ್ಲವಾ?" ಅಂದೆ.

"ಅವರೆಲ್ಲ ದೂರದ ಹಳ್ಳಿಯಲ್ಲಿದ್ದಾರೆ. ನಾನೊಬ್ಬಳೆ ಇರೋದು ಮನೆಯಲ್ಲಿ. ಯಾಕೆ, ನನ್ನ ಮಾತಿನಲ್ಲಿ ನಂಬಿಕೆ ಇಲ್ಲವಾ?" ಎಂದಾಕೆ ಒಂದೆಡೆ ಕೈತೋರಿಸಿ "ಇದೇ ನನ್ನ ಮನೆ, ಬನ್ನಿ" ಅಂತ ಗೇಟನ್ನು ತೆರೆದಳು. ನಾನು ಅಂಜುತ್ತಲೇ ಆ ಮನೆಯ ಕಂಪೌಂಡಿನ ಒಳಗೆ ಕಾಲಿಟ್ಟೆ. ನನಗೇನು ಗ್ರಹಚಾರ ಕಾದಿದೆಯೋ? ನಾಳೆ ಇಷ್ಟು ಹೊತ್ತಿನಲ್ಲಿ ಯಾವ ಆಸ್ಪತ್ರೆಯ ಒಳರೋಗಿಯೋ ಹೊರರೋಗಿಯೋ ಆಗಲು ಈಗ ವೀಳ್ಯ ತೆಗೆದುಕೊಳ್ಳಲು ಹೊರಟಿದ್ದೇನೆಯೋ ಎಂದು ಒಳಗೊಳಗೇ ಭಯಗೊಂಡೆ. ಅಂಜಂಜುತ್ತಲೇ ಒಳಗೆ ಕಾಲಿಟ್ಟೆ.

ವಿಶಾಲವಾದ ಮನೆ. ಆಗಲೇ ಕರೆಂಟು ಹೋಗಿತ್ತು. "ಇಲ್ಲೆ, ನಿಲ್ಲಿ ಮೋಂಬತ್ತಿ ಹಚ್ಚಿ ತರುತ್ತೇನೆ" ಅಂತ ನನ್ನನ್ನು ಬಾಗಿಲಲ್ಲೆ ನಿಲ್ಲಿಸಿ ದಡದಡನೆ ಒಳಗೆ ಹೋಗಿ ದೀಪ ತಂದಳು. ಆಗ ಅವಳ ಮುಖ ನೋಡಿದೆ. ಎಣ್ಣೆಗಪ್ಪು ಬಣ್ಣ ೨೬ ರಿಂದ ೨೮ರ ನಡುವಿನ ಪ್ರಾಯ. "ಬನ್ನಿ" ಎನ್ನುತ್ತ ತಾನು ಮುಂದಾದಳು. ಮುಂದೆ ಹೋಗುತ್ತಿರುವಾಗ ಪಕ್ಕದ ಗೋಡೆಯ ಮೇಲೆ ಕಣ್ಣಾಡಿಸಿದೆ. ಗಾಂಧಿ, ಅಂಬೇಡ್ಕರ್, ಲೆನಿನ್, ಚಾಪ್ಲಿನ್, ಏಸು, ಶಂಕರಾಚಾರ್ಯರ ಫೋಟೋಗಳು. ಇಂಥ ತಿಳುವಳಿಕಸ್ಥ ಈ ಯುವತಿ ಈ ರೀತಿ ಏಕಾಏಕಿ ನನ್ನಂಥ ಅಪರಿಚಿತ ಗಂಡನ್ನು ತನ್ನ ಮನೆಯೊಳಗೆ ಮನದೊಳಗೆ ಯಾಕೆ ಇಟ್ಟುಕೊಂಡಳು ಎನ್ನುವುದು ಗೊತ್ತಾಗಲೇ ಇಲ್ಲ.

ದೊಡ್ಡ ಹಾಲ್‌ನಲ್ಲಿ ಜೋಡು ಮಂಚ ತೋರಿಸಿ, "ನೀವಿಲ್ಲಿ ಕುಳಿತಿರಿ. ಈಗ ಬರುತ್ತೇನೆ" ಅಂದವಳೆ ಒಂದೈದು ನಿಮಿಷದಲ್ಲಿ ನೈಟಿ ಧರಿಸಿ, ನನ್ನತ್ತ ಬಂದಳು. "ನಿಮಗೆ ಊಟವಾಗಿಲ್ಲ ಅಲ್ವಾ? ಕುಳಿತಿರಿ, ಊಟ ತರುತ್ತೇನೆ" ಎಂದು

# ಐದು ಮಿನಿ ಕಥೆಗಳು

ಎದ್ದು ಹೋಗಿ ಎರಡು ಪ್ಲೇಟುಗಳಲ್ಲಿ ಊಟ ತಂದಳು. ನನ್ನನ್ನು ನಾನೇ ನಂಬದಾದೆ. ಊಟ ಮಾಡುತ್ತಾ ತನ್ನ ಹಿಂದಿನ ಕಥೆಯನ್ನು ಇನ್ನೊಂದು ಹೆಣ್ಣಿನ ಕಥೆಯೇನೋ ಎಂಬಂತೆ ಹೇಳುತ್ತಿದ್ದಳು. ಒಮ್ಮೊಮ್ಮೆ ಅವಳ ಕಣ್ಣಿನ ಹೊಳಪು ನನ್ನನ್ನು ತನ್ನತ್ತ ಸೆಳೆದು ಮೂಕವಾಗಿ ಕುಳಿತಿರುವಂತೆ ಮಾಡುತ್ತಿತ್ತು. ಕಥೆ ಕೇಳುತ್ತ ಊಟ ಮರೆತ ನನ್ನನ್ನು ಆಗಾಗ ವಾಸ್ತವಕ್ಕೆ ತರುತ್ತಿದ್ದಳು. ಚೆನ್ನಾಗಿಯೆ ಊಟ ಮಾಡಿದೆ.



ಫಕ್ಕನೆ ಎಚ್ಚರವಾಗಿ ವಾಚನ್ನೊಮ್ಮೆ ನೋಡಿದಾಗ ಗಂಟೆ ಬೆಳಗಿನ ಐದರ ಹತ್ತಿರ ಬರುತ್ತಿದೆ. ಅವಳೆಲ್ಲಿ? ಎಂದುಕೊಂಡು ಎದ್ದು ಸಿಗರೇಟ್ ಹೊತ್ತಿಸಿ ಆಚೆ ಈಚೆ ನೋಡಿ ನಿಧಾನವಾಗಿ ಕಿಟಕಿಯ ಹತ್ತಿರ ಬಂದು ನಿಂತೆ. ಕಂಪೌಂಡಿನ ಹತ್ತಿರದ ಬಯಲಿಗೆ ಕಣ್ಣಾಡಿಸಿದಾಗ ಅವಳು ಬಂದು ಹೂವಿನ ಗಿಡದ ಹತ್ತಿರ ಉದ್ದಕ್ಕೆ ಸೊಂಪಾಗಿ ಬೆಳೆದಿದ್ದ ಹುಲ್ಲಿನೊಳಕ್ಕೆ ತನ್ನ ಬೆತ್ತಲೆ ಕಾಲುಗಳನ್ನು ತೂರಿಸಿ ಕಪ್ಪಾಗುತ್ತಿದ್ದ ಆಕಾಶದಲ್ಲಿ ಇನ್ನೂ ಕಾಣಿಸಿಕೊಳ್ಳುತ್ತಿದ್ದ ನಕ್ಷತ್ರವನ್ನು ನೋಡುತ್ತಿದ್ದಳು. ನಿಧಾನವಾಗಿ ಕೆಮ್ಮಿದೆ. ಒಮ್ಮೆಲೆ ಬೆಚ್ಚಿದವಳಂತೆ ಕತ್ತೆತ್ತಿ ನನ್ನತ್ತ ನೋಡಿ ಮುಗುಳ್ನಕ್ಕು ನಿಧಾನವಾಗಿ ಮನೆಯತ್ತ ಬಂದಳು.

ಆದಾಗಲೇ ನಾನು ಬೆಳಕು ಹರಿಯುವ ಮೊದಲೆ ಹೊರಡಲು ಸಿದ್ಧವಾಗಿ ನಿಂತಿದ್ದೆ. ಬಂದವಳಿಗೆ ಅರ್ಥವಾಯ್ತು. "ನಿಲ್ಲಿ, ಟೀ ತರುತ್ತೇನೆ" ಅಂದವಳೆ ಒಳಗೆ ಹೋದಳು. ಹಾಲ್‌ನಲ್ಲಿ ನಿಂತಿದ್ದ ನನಗೆ ಈ ಮನೆಯಲ್ಲಿ ಇನ್ನೇನೇನಿದೆ ಅನ್ನುವ ಕುತೂಹಲ. ಪಕ್ಕದ ಕೋಣೆಯ ಬಾಗಿಲನ್ನು ನಿಧಾನವಾಗಿ ನೂಕಿದೆ. ಅದು ಸ್ವಲ್ಪವೆ ತೆರೆಯಿತು. ಒಂದು ಮುದಿಜೀವ ತನ್ನ ಕೊನೆಯ ಘಟ್ಟದಲ್ಲಿ ಹೊಯ್ದಾಡುತ್ತಿತ್ತು. ಇನ್ನೊಂದು ಹೆಜ್ಜೆ ಮುಂದೆ ಹಾಕಿದೆ. ತನ್ನ ಬದುಕಿನ ಕೊನೆ ಉಸಿರಿನೊಂದಿಗೆ ಹೋರಾಡುತ್ತಿದ್ದ ೫೮ ವರ್ಷದ ರೋಗಪೀಡಿತ ವ್ಯಕ್ತಿ. ಈ ಮುಖವನ್ನು ಎಲ್ಲೋ ನೋಡಿದ್ದೇನೆ. ಎಲ್ಲಿ? ಊಹುಂ, ಹೊಳೆಯಲಿಲ್ಲ. ಅಷ್ಟರಲ್ಲಿ ಹೆಜ್ಜೆ ಸಪ್ಪಳ ಕೇಳಿ ಆ ಬಾಗಿಲಿಂದ ದೂರ ಸರಿದೆ.

"ಬನ್ನಿ, ಟೀ ಕುಡಿಯಿರಿ, ಆರಿಹೋಗುತ್ತದೆ. ಸಕ್ಕರೆ ಸ್ವಲ್ಪ ಜಾಸ್ತಿ ಹಾಕಿದ್ದೀನಿ. ನಿಮ್ಮ ರುಚಿ ನನಗಿನ್ನೂ ಗೊತ್ತಾಗಿಲ್ಲ. ಏನೂಂತ ನಿಮಗೆ ಈಗಾಗಲೆ ಅರಿವಾಗಿರಬಹುದು," ಅನ್ನುತ್ತ ನನ್ನ ಕೈಗೆ ಟೀಕೊಟ್ಟು ಕೆನ್ನೆಗೆ ಮೃದುವಾಗಿ ತಟ್ಟಿದಳು. ನಾನು ಮೂಕನಾಗಿದ್ದೆ. "ಇನ್ನು ನಾಲ್ಕು ದಿನ ಬಿಟ್ಟು ಬನ್ನಿ, ಕಾದಿರುತ್ತೇನೆ," ಎಂಬ ಆಹ್ವಾನ ಬೇರೆ.

ಅವಳನ್ನೊಮ್ಮೆ ನೋಡಿದೆ. ರಾತ್ರಿ ತುಳಿಯಲ್ಪಟ್ಟ ಹಸಿರು ಹುಲ್ಲು ಮುಂಜಾನೆಯ ಮಂಜಿನಲ್ಲಿ ತನ್ನ ಹೊಸ ಬದುಕಿನ ಆಕಾಂಕ್ಷೆಯಿಂದ ಕಿರಣದತ್ತ ತಲೆಯೆತ್ತಿ ನಳನಳಿಸಿ ಮುಗುಳ್ನಕ್ಕ ಹಾಗೆ ಕಂಡಳು.

ಹೊರಡಲನುವಾಗಿ ಬಾಗಿಲಿಗೆ ಬಂದಾಗ ಅವಳು ಕಂಬನಿದುಂಬಿ "ಇದೂ ಒಂದು ಬದುಕು" ಎಂದು ತನ್ನತ್ತ ಬೆರಳು ತೋರಿಸಿಕೊಂಡಳು. ನಿಧಾನವಾಗಿ ಗೇಟನ್ನು ದಾಟುವಾಗ ಅವಳನ್ನೊಮ್ಮೆ ನೋಡಿದೆ. ಸೆರಗಿನಿಂದ ಕಣ್ಣೀರೊರೆಸಿಕೊಂಡ ಆಕೆಯ ಪಕ್ಕದ ಡೋರ್ ನಂಬರ್ ಗಮನಿಸಿದೆ.

ಅರೆ! ಅದೇ ಡೋರ್ ನಂ. ೨೨೦! ಅಂದರೆ ನಾನಿದ್ದದ್ದು ನಾರಾಯಣರಾವ್ ಮನೆಯಲ್ಲೇ?! ಆ ರೂಮಿನಲ್ಲಿ ಜೀವನ್ಮರಣಗಳ ಮಧ್ಯೆ ತೂಗಾಡುತ್ತಿರುವ ವ್ಯಕ್ತಿಯೆ ನಾರಾಯಣರಾವೆ? ಈಕೆ.... ಈಕೆ? ನಾರಾಯಣರಾವ್ ತನ್ನ ಮನೆಯಾಕೆ ಕೈಕೊಟ್ಟು ಓಡಿಹೋದ ಮೇಲೆ ತಾನು ಮನೆಗೆಲಸಕ್ಕೆ ಅಂತ ಇಟ್ಟುಕೊಂಡಿದ್ದವಳನ್ನೇ ಕಟ್ಟಿಕೊಂಡರು ಎಂಬ ಸುದ್ದಿ ಗೊತ್ತಿತ್ತು. ಹಾಗಾದರೆ ರಾತ್ರಿ ನನ್ನೊಟ್ಟಿಗಿದ್ದವಳು ನಾರಾಯಣರಾವ್ ಹೆಂಡತಿಯೆ?

ಒಂದು ಕ್ಷಣ ದಿಗ್ಭ್ರಮೆಯಿಂದ ದಾರಿಯಲ್ಲೇ ನಿಂತುಬಿಟ್ಟೆ. ●

# ನಿರೀಕ್ಷೆ

● ಕೆ. ಶಾಂತಾಮಣಿ

ಬೆಳಿಗ್ಗೆ ಸರಿಯಾಗಿ ಒಂಭತ್ತು ಗಂಟೆಗೆ ಆತ ಬರುತ್ತಿದ್ದ. ಬಿಳಿಯ ಪಂಜೆ, ಕರಿಯ ಟೋಪಿ, ಮೂಗಿನ ಮೇಲಿಂದ ಜಾರುವ ಕನ್ನಡಕ, ಸೊರಗಿದ ಮುಖ, ತೆಳುವಾದ ಉದ್ದನೆಯ ಶರೀರ, ಸುಮಾರು ಅರವತ್ತೈದು-ಎಪ್ಪತ್ತು ವರುಷದ ಆತ ಕೈಯಲ್ಲೊಂದು ಕೋಲು ಹಿಡಿದು ನಿಧಾನವಾಗಿ ಪೋಸ್ಟ್ ಆಫೀಸಿನ ಮೆಟ್ಟಿಲುಗಳನ್ನೇರುತ್ತಿದ್ದ. ಹಣೆಯ ಮೇಲಿಂದ ಬರುತ್ತಿದ್ದ ಬೆವರನ್ನು ತನ್ನ ಶಲ್ಯದಿಂದ ಒರೆಸಿಕೊಳ್ಳುತ್ತಾ, ಒಮ್ಮೊಮ್ಮೆ ನೇರವಾಗಿ ನಿಂತು ಸೊಂಟದ ಮೇಲೆ ಕೈಯಾಡಿಸುತ್ತಾ 'ಉಸ್' ಎಂದು ಆಫೀಸಿನ ಜಗಲಿಯ ಮೇಲೆ ಕುಳಿತುಕೊಳ್ಳುತ್ತಿದ್ದ. ನಾನು ಆ ಶಾಖೆಗೆ ವರ್ಗವಾಗಿ ಬಂದ ಎರಡು ತಿಂಗಳಿಂದಲೂ ಆತನನ್ನು ನೋಡುತ್ತಿದ್ದೆ. ಆಫೀಸಿನ ಕಿಟಕಿಯ ಹತ್ತಿರವೇ ನಾನು ಕುಳಿತುಕೊಳ್ಳುತ್ತಿದ್ದುದರಿಂದ ಹೊರಗೆ ಜನರ ಓಡಾಟ ಚೆನ್ನಾಗಿ ಕಾಣಿಸುತ್ತಿತ್ತು.

ಅಂಚೆಯಾಳು ಕಾಗದಗಳನ್ನು ಜೋಡಿಸಿಕೊಂಡು ಹೊರಗೆ ಬರುವುದನ್ನು ಆ ವೃದ್ಧ ಕಾಯುತ್ತಿದ್ದ. ಅವನು ಹೊರಬಂದ ಕೂಡಲೇ,

"ಕಾಗದವಿದೆಯೇ?" ಆತನ ಪ್ರಶ್ನೆಗೆ "ಇಲ್ಲ" ಎಂದು ಅಂಚೆಯವನ ಮಾಮೂಲಿ ಉತ್ತರ.

ಮುಖದಲ್ಲಿ ನಿರಾಶೆಯ ಛಾಯೆ ಮೂಡುತ್ತಿತ್ತು.

"ಮನಿ ಆರ್ಡರ್?"

"ಕಾಗದವೇ ಇಲ್ಲ, ಇನ್ನು ಮನಿಆರ್ಡರ್ ಎಲ್ಲಿ ಬಂತು?" ಅಂಚೆಯಾತ ಬೇಸರಿಸಿ ಉತ್ತರಿಸುತ್ತಿದ್ದ.

"ಸರಿಯಾಗಿ ನೋಡಪ್ಪ, ಕಾಗದದ ಮಧ್ಯದಲ್ಲಿ...."

"ನನಗೇನು ಕಣ್ಣಿಲ್ಲವಾ?" ಅಂಚೆಯವ ಒಮ್ಮೊಮ್ಮೆ ರೇಗಿಬಿಡುತ್ತಿದ್ದ.

"ಬೇಜಾರು ಮಾಡಿಕೋಬೇಡಪ್ಪ. ಏನೋ ನನ್ನ ಭ್ರಾಂತಿ."



"ಇದ್ರೆ ನಾನೇ ಮನೆಗೆ ತಂದು ಕೊಡ್ತೀನಿ. ನೀವು ಇಲ್ಲೀವರೆಗೆ ಏಕೆ ಬರ್ತೀರಿ?"

"ನೀನು ಬರೋದು ತಡವಾಗುತ್ತಪ್ಪಾ, ಅಲ್ಲಿವರ್ಗೆ ಕಾಯೋ ಶಕ್ತಿ ನನಗಿಲ್ಲ," ಆತನ ವಿವರಣೆ.

ಎಷ್ಟೋ ಸಲ ಬೇಸತ್ತ ಅಂಚೆಯವ ಕಾಗದಗಳ ಕಂತೆಯನ್ನೇ ಅವರ ಮುಂದಿಟ್ಟು "ನೀವೇ ನೋಡಿ" ಎಂದಾಗ ಆ ವೃದ್ಧ ಅಮೂಲ್ಯ ವಜ್ರವನ್ನು ಹುಡುಕುವಂತೆ ಕೆದಕಿ ಕೆದಕಿ ನೋಡುತ್ತಿದ್ದ. ಒಂದು ದಿನ ನಾನು ತದೇಕಚಿತ್ತಳಾಗಿ ಅವರನ್ನು ನೋಡುತ್ತಾ ಕುಳಿತು ಬಿಟ್ಟಾಗ ಪಕ್ಕದ ಟೇಬಲ್‌ನ ಕೃಷ್ಣಯ್ಯಂಗಾರ್ "ಏನ್ ಮೇಡಂ, ಹೀಗೇ ಕುಳಿತುಬಿಟ್ಟರಿ, ಕಾಫಿಗೆ ಬರೋಲ್ವಾ?" ಎಂದಾಗ ಎಚ್ಚೆತ್ತು

"ಈ ಮುದುಕ ಯಾರು ಸರ್?" ಎಂದೆ.

"ಅವರಾ.... ಅವರೊಬ್ಬ ರಿಟೈರ್ಡ್ ಟೀಚರ್. ಕಷ್ಟಪಟ್ಟು ಎಲ್ಲ ಹಣ ಹಾಕಿ ಮಗನನ್ನು ಇಂಜಿನಿಯರಿಂಗ್ ಓದಿಸಿದ. ಆದರೆ ಅವನೋ ಕೃತಘ್ನ. ಡೆಲ್ಲಿಯಲ್ಲಿದ್ದಾನೆ. ಒಂದು ಕಾಗದ ಕೂಡ ಬರೋಯೋದಿಲ್ಲ. ಈತ ದಿನಾ ಇಲ್ಲಿಗೆ ಬಂದು

## ಐದು ಮಿನಿ ಕಥೆಗಳು

ಹೋಗ್ತಾರೆ. ಅವನು ಕಾಗದ ಬರೀಲಿಲ್ಲ, ಇವರು ತಗೋಳ್ಳಿಲ್ಲ. ಏಳಿ, ಕಾಫಿಗೆ ಹೋಗೋಣ." ಕೃಷ್ಣಯ್ಯಂಗಾರ್ ಕುರ್ಚಿ ತಳ್ಳಿ ಎದ್ದು ಹೊರಟರು.

ಕೃಷ್ಣಯ್ಯಂಗಾರ್ ಹೇಳಿದ ಘಟನೆಯಿಂದ ನನ್ನ ಮನಸ್ಸು ವಿಚಲಿತವಾಯಿತು. ತನ್ನ ತಂದೆಯೂ ಇವರಂತೆ ಅದೆಷ್ಟು ಬಾರಿ ಅಣ್ಣನ ಕಾಗದಕ್ಕಾಗಿ ಪೋಸ್ಟ್ ಆಫೀಸಿನವರೆಗೂ ಹೋಗಿ ಬಂದದ್ದಿಲ್ಲ! ತನ್ನ ಮದುವೆಗೆ ಅದೆಷ್ಟು ದಿನ ಅವನಿಂದ ಹಣದ ನಿರೀಕ್ಷೆ ಮಾಡಿದ್ದಿಲ್ಲ!.....

"ಮೇಡಂ, ನಮ್ಮದು ಕಾಫಿ ಆಯ್ತು" ಎಂದು ಕೃಷ್ಣಯ್ಯಂಗಾರ್ ಹೇಳಿದಾಗ ನಾನೂ ಎದ್ದು ಹೊರಟೆ.



ಮತ್ತೊಂದು ದಿನ ಆ ವೃದ್ಧ ಬಂದ. ಏನೋ ಅನಾಹುತ ಆದವರಂತೆ ಮುಖ ಗಾಬರಿಯಿಂದ ಕೂಡಿತ್ತು. ನೋಡಿದ ಕೂಡಲೆ ಪೋಸ್ಟ್ ಮ್ಯಾನ್, "ಏನಿಲ್ಲ" ಎಂದು ಕೈ ಅಲ್ಲಾಡಿಸಿದ.

"ಇವತ್ತೂ ಇಲ್ವಾ?" ಆತ ತಲೆಯ ಮೇಲೆ ಕೈ ಹೊತ್ತು ದೊಪ್ಪನೆ ಜಗುಲಿಯ ಮೇಲೆ ಕುಳಿತು ಬಿಟ್ಟ.

ಮನಸ್ಸು ತಡೆಯಲಾರದೆ ನಾನೇ ಹೋದೆ. "ನಿಮಗೆ ಕಾಗದ ಬರುವುದಿತ್ತಾ?" ಎಂದೆ.

ಒಮ್ಮೆ ಆತ ಕತ್ತೆತ್ತಿ ನನ್ನನ್ನು ನೋಡಿದ. ಅವರ ಕಣ್ಣುಗಳಲ್ಲಿ ನೀರು ತುಂಬಿತ್ತು. ನನ್ನ ಕಣ್ಣುಗಳೂ ಹನಿಗೂಡಿದವು.

"ಹೌದು, ನನ್ನ ಮಗನಿಂದ ಬರಬೇಕಾಗಿತ್ತು. ನನ್ನ ಹೆಂಡತಿಗೆ ಹುಷಾರಿಲ್ಲ, ಇನ್ನೂರು ರೂಪಾಯಿಗೆ ಬರೆದಿದ್ದೆ...." ಆತ ಶಲ್ಯದಿಂದ ಕಣ್ಣೊರೆಸಿಕೊಂಡ.

"ಬರುತ್ತೆ ಬಿಡಿ, ಏನೋ ಕೆಲಸ ಇರಬೇಕು. ಗಡಿಬಿಡಿಯಲ್ಲಿ ಸಮಯ ಸಿಗದೆ ಇರಬಹುದು. ನಾಳೆ ನಾಡಿದ್ದರಲ್ಲಿ ಖಂಡಿತ ಬರುತ್ತೆ."

"ಅದೆಲ್ಲ ನನ್ನ ಸಮಾಧಾನಕ್ಕೆ ಹೇಳೋ




ಸವಿತಾಳನ್ನು ಮೆಚ್ಚಿ ಮದುವೆಯಾಗಲು ನಿರ್ಧರಿಸಿದ್ದ ಗಿರೀಶನಿಗೆ ನೇರವಾಗಿ ಅವಳೊಂದಿಗೆ ಮದುವೆಯ ಪ್ರಸ್ತಾಪ ಮಾಡಲು ಯಾಕೋ ಹಿಂಜರಿಕೆ. ಅವಳೋ ಮೊದಲೇ ಶ್ರೀಮದ್ಗಾಂಭೀರ್ಯದ ಹುಡುಗಿ. ಗಿರೀಶ ಸದಸ್ಯನಾಗಿರುವ 'ಅರುಣ ಸರ್ಕ್ಯುಲೇಟಿಂಗ್ ಲೈಬ್ರರಿ'ಯಲ್ಲಿ ರಿಸೆಪ್ಷನಿಸ್ಟ್ ಆಗಿರುವವಳು. ಉಳಿದ ಸದಸ್ಯರೊಂದಿಗೆ ವ್ಯವಹರಿಸುವಂತೆಯೇ ಗಿರೀಶನೊಂದಿಗೂ ವರ್ತಿಸುತ್ತಾಳೆ. ಈ ಎರಡು ವರ್ಷಗಳಲ್ಲಿ ಗಿರೀಶ್ ಅವಳೊಂದಿಗೆ ಮಾತನಾಡಿರುವುದೇ ಕಡಿಮೆ. ಹೀಗೇ ಕಾಲ ಕಳೆದರೆ ಹುಡುಗಿ ಕೈತಪ್ಪಿ ಹೋದಾಳೆಂದುಕೊಂಡು ಗಿರೀಶ ಲೈಬ್ರರಿಯ ಮಾಲಿಕ-ಕಂ-ಗ್ಯಾಸ್ ಕಂಟ್ರಾಕ್ಟರ್ ನರೇಂದ್ರ ಭಾಟಿಯಾನೊಂದಿಗೆ ಈ ಕುರಿತು ಮಾತನಾಡಲು ನಿರ್ಧರಿಸಿದ. ಅತಿ ಸರಳನಂತೆ ಕಾಣುವ ಭಾಟಿಯಾ ಗಿರೀಶನನ್ನು ಹೋಟಲೊಂದಕ್ಕೆ ಕರೆದೊಯ್ದು, ಇವನ 'ಪ್ರೇಮ ಸಂಕಟ'ವನ್ನು ಕೇಳಿಕೊಂಡ ನಂತರ ಅನುತಾಪದಿಂದ ನುಡಿದ "ಐಯಾಂ ಸಾರಿ ಗಿರೀಶ್‌ಜೀ, ನಿಮ್ಮ ಆಯ್ಕೆ ಸರಿಯಾಗಿಲ್ಲ."

ಗಿರೀಶ್ ಹೌಹಾರಿದ. "ಏಕೆ?"

"ಏಕೆಂದರೆ ಸವಿತಾ ಹೃದ್ರೋಗಿ. ಕೆಲಸಕ್ಕೆ ಸೇರುವಾಗಲೇ ಈ ವಿಷಯ ನನ್ನ ಬಳಿ ಹೇಳಿದ್ದಾಳೆ. ಆಕೆ ದಾಂಪತ್ಯ ಜೀವನ ನಡೆಸಲೇ ಅನರ್ಹ

ಮಾತು. ಇಂಥ ಮಕ್ಕಳು ಏಕೆ ಬೇಕು? ಎಲ್ಲ ನಮ್ಮ ಕರ್ಮ.... ಅವರ ಸುಖದಲ್ಲಿ ನಮ್ಮ ನೆನಪೂ ಅವರಿಗೆ ಬರೋದಿಲ್ಲ.... ಹುಂ.... ಎಲ್ಲಾದ್ರೂ ಸುಖವಾಗಿರಲಿ...." ಆತ ಮೆಲ್ಲಗೆ ಎದ್ದು ಹೊರ ಡತೊಡಗಿದ. ನಾನು ಮತ್ತೊಮ್ಮೆ ಹೇಳಿದೆ. "ಬೇಜಾರು ಮಾಡಿಕೋಬೇಡಿ. ಖಂಡಿತ ನಾಳೆ ನಾಡಿದ್ದರಲ್ಲಿ ನಿಮಗೆ ಎಂ.ಓ.-ಕಾಗದ ಎಲ್ಲ ಬರುತ್ತೆ. ನನ್ನ ಮನಸ್ಸು ಹಾಗೆ ಹಾರೈಸಿದೆ."

ನನ್ನ ಮಾತು ಕೇಳಿದ ಆತನ ಮುಖದಲ್ಲಿ ಸಮಾಧಾನದ ಛಾಯೆ ಕಾಣಿಸಿತು.

"ಹಾಗೇ ಆಗಲಿ ತಾಯಿ. ನಿನ್ನ ಮಾತು ನಿಜವಾಗಲಿ" ಮತ್ತೊಮ್ಮೆ ಆಸೆಯ ಬುತ್ತಿ ಹೊತ್ತು ಮನೆ ಕಡೆಗೆ ಹೊರಟ.



ಎರಡು ದಿನಗಳು ಕಳೆದರೂ ಆತನ ಸುಳಿವಿಲ್ಲ. ಮನಸ್ಸು ಏನೇನೋ ಚಿಂತಿಸಿ, "ಹಾಗಾಗದಿರಲಿ" ಎಂದು ದೇವರನ್ನು ಪ್ರಾರ್ಥಿಸಿತು. ಮನೆಗೆ ಹೋಗಿ ನೋಡಿ ಬರೋಣವೆಂದರೆ ವಿಳಾಸ ತಿಳಿಯದು. ಬೇರೆಯವರನ್ನು ಕೇಳಲು ಸಂಕೋಚ. ಎರಡು ದಿನ ಊಟವೂ ಸೇರಲಿಲ್ಲ.

ಮೂರನೆಯ ದಿನ ಆತ ಬರುವುದು ಕಾಣಿಸಿತು. ಮನಸ್ಸು ನೆಮ್ಮದಿ ಹೊಂದಿತು. ಬಾಗಿಲಲ್ಲೇ ಅವರನ್ನು ಕಾಯತೊಡಗಿದೆ. ಬಂದ ಕೂಡಲೇ "ನಿಮಗೊಂದು ಕಾಗದ, ಮನಿಆರ್ಡರ್ ಇದೆ" ಎಂದೆ. ಆತನಿಗೆ ನಂಬಲಾಗಲಿಲ್ಲ.

"ನಿಜವಾಗಿಯೂ" ಆಶ್ಚರ್ಯದಿಂದ ಕೇಳಿದ. ಕಣ್ಣುಗಳಿಂದ ಆನಂದಾಶ್ರು ಹರಿಯಿತು. ಪೋಸ್ಟ್ ಮ್ಯಾನ್‌ನಿಂದ ಕಾಗದ ತೆಗೆದುಕೊಳ್ಳುವಾಗಲೂ ಅವರ ಕೈ ಕಂಪಿಸತೊಡಗಿತು. ಕಾಗದವನ್ನು ತೆಗೆದುಕೊಂಡು "ನೀನು ಹೇಳಿದ್ದು ನಿಜವಾಯಿತಮ್ಮ ಎಷ್ಟಾದರೂ ಮಗ ಅಲ್ಲವೆ? ಆತುರದಲ್ಲಿ ಏನೇನೋ ಮಾತಾಡಿದೆ. ತಂದೆಗೆ ಮಗ ಆಗದೆ ಇನ್ಯಾರು ಆಗುತ್ತಾರೆ ಪಾಪ, ಕೆಲಸದ ಗಡಿಬಿಡಿ ಊರೂರು ಸುತ್ತಬೇಕಂತೆ. ನನ್ನ ಕಾಗದ ತಲುಪಿತೋ ಇಲ್ಲವೋ" ಕನ್ನಡಕ ತೆಗೆದು ಕಣ್ಣೊರೆಸಿಕೊಂಡು "ಪ್ರತಿ ತಿಂಗಳೂ ಇನ್ನೂರು ಕಳಿಸ್ತಾನಂತೆ" ಎಂದು ಹಿಗ್ಗಿನಿಂದ ಹೇಳಿದರು. ಅಂದಿನಿಂದ ಇಂದಿನವರೆಗೆ ಪ್ರತಿ ತಿಂಗಳೂ ೨೦೦ ರೂ. ಮನಿಆರ್ಡರ್ ಕಳಿಸುತ್ತಲೇ ಇದ್ದೇನೆ. ●

---

ಳಂತೆ."

ಗಿರೀಶ್ ಈ ಪೆಟ್ಟಿನಿಂದ ತತ್ತರಿಸಿದ. ಲೈಬ್ರರಿಯತ್ತ ಸುಳಿಯುವುದನ್ನೇ ನಿಲ್ಲಿಸಿದರೂ ಸವಿತಳ ಮುದ್ದುಮುಖ ಕುಳಿತಲ್ಲಿ ನಿಂತಲ್ಲಿ ಅವನನ್ನು ಬೇಟೆಯಾಡತೊಡಗಿತು. ಆರು ತಿಂಗಳು ಸರಿಯಿತು. ಅದೊಂದು ಸಂಜೆ ಪೇಟೆಯಲ್ಲಿ ಅವನಿಗೆದುರಾದ ಸವಿತ ತಾನಾಗಿಯೇ ಮಾತನಾಡಿದಳು, "ಆರೋಗ್ಯವಾಗಿದೀರಾ ಗಿರೀಶ್? ಲೈಬ್ರರಿ ಕಡೇ ಬರಲೇ ಇಲ್ಲವಲ್ಲ!" ಕಂದುಕೆಂಪು ಮಿಶ್ರಿತ ಸೀರೆಯಲ್ಲಿ ಅರಳಿದ ಹೂವಿನಂತಿರುವ ಈ ಹುಡುಗಿ ಹೃದ್ರೋಗಿ! ಎಂಥ ವಿಪರ್ಯಾಸ! "ನನ್ನ ಆರೋಗ್ಯ ಇರಲಿ ಮಿಸ್. ಸವಿತ. ನೀವು ಹೇಗಿರುವಿರಿ? ನಿಮ್ಮ ಹೃದಯದ ತೊಂದರೆಗೆ ಚಿಕಿತ್ಸೆಯೇ ಇಲ್ಲವೆ?" ಕೇಳಿಬಿಟ್ಟ.

ಒಂದು ಕ್ಷಣ ಸ್ತಂಭಿತಳಾದಂತೆ ಕಂಡ ಸವಿತಾ ಮರುಗಳಿಗೆ ಕಿಲಕಿಲನೆ ನಕ್ಕಳು "ಮೈ ಗಾಡ್! ನನಗೆ ಹೃದಯದ ತೊಂದರೆಯೇ? ಓ ಇದನ್ನು ನಮ್ಮ ಬಾಸ್ ಹೇಳಿರಬೇಕಲ್ಲ?"

"ಹೌದು. ಹಾಗೇಕೆ ನಗುತ್ತೀರಿ? ನಾನು ನಿಮ್ಮನ್ನು ಮದುವೆಯಾಗಬಯಸಿ ಅವರಲ್ಲಿ ವಿಚಾರಿಸಿದ್ದೆ..."

ಸವಿತಳ ತಲೆ ತಗ್ಗಿತು. "ಗಿರೀಶ್‌ಜೀ. ಗುಟ್ಟು ನಿಮ್ಮಲ್ಲೇ ಇರಲಿ. ನನಗೆ ತಂದೆ ಇಲ್ಲ. ನಾನು ದುಡಿದು ಅಮ್ಮನಿಗೆ ಆಧಾರವಾಗಬೇಕು. ಹೆಚ್ಚು ಓದಿಲ್ಲದ ನನಗೆ ಲಂಚ ತೆರುವಷ್ಟು ತಾಖತ್ತು ಇಲ್ಲ. ಭಾಟಿಯಾ ನನಗೆ ಸುಲಭವಾಗಿ ಕೆಲಸ ಕೊಟ್ಟರು. ಆತ ಮಹಾಲಂಪಟ ಎಂದು ಗಾಳಿ ಸುದ್ದಿ ಕೇಳಿದ್ದೆ. ಅವರು ನನ್ನನ್ನು ಒತ್ತಾಯದಿಂದ ಬಯಸಿದಾಗ ದಿಕ್ಕು ತೋಚದಂತಾಗಿ, ದಿಢೀರ್ ಸ್ಫೂರ್ತಿಯಿಂದ ನಾನು 'ಹೃದ್ರೋಗಿ' ಎಂದು ಕಥೆ ಕಟ್ಟಿ ಪಾರಾದೆ. ನನ್ನ ಸ್ಥಿತಿಯಲ್ಲಿ...." ಸವಿತಳ ಗಂಟಲು ಬಿಗಿದು ಕಂಬನಿ ತುಳುಕಿದಾಗ ಗಿರೀಶ್ ಸುತ್ತಲ ಜನರನ್ನು ಮರೆತು ಅವಳ ಕೈ ಹಿಡಿದು ಮುಂದೆ ಹೆಜ್ಜೆ ಹಾಕಿದ. ●

# ನಮ್ಮ ಊರಿನ ಪುಣ್ಯ ಜೀವಿಗಳು

## ಸೌಹಾರ್ದ ಮೂರ್ತಿ

**ಕೋ**ಮು ಗಲಭೆಗಳಿಂದ ಬೆಂದುರಿಯುತ್ತಿದ್ದ ಭದ್ರಾವತಿಗೆ ಸಹೃದಯತೆಯ ಸಿಂಚನಗೈದು ಎಲ್ಲ ಕೋಮಿನವರೂ ಒಂದಾಗಿ ಬಾಳುವ ವಾತಾವರಣವನ್ನು ನಿರ್ಮಿಸಿದವರು ಪಾದ್ರಿ ಪೌಲ್ ಡಿ' ಕೋನ ಅವರು.

ಅವರು ಸಾಗರದಿಂದ ಭದ್ರಾವತಿಯ ಹಳೇ ನಗರದ ಚರ್ಚಿಗೆ ಆರು ವರ್ಷಗಳ ಹಿಂದೆ ಧರ್ಮಗುರುವಾಗಿ ಬಂದರು. ಈ ಅವಧಿಯಲ್ಲಿ ಅವರು ಅಕ್ಷರಶಃ ಹಗಲಿರುಳು ಮನುಷ್ಯ-ಮನುಷ್ಯನ ನಡುವೆ ಪ್ರೀತಿಯ ಬೆಸುಗೆ ಹಾಕಲು ಶ್ರಮಿಸಿದ್ದಾರೆ.

ಮಿತಭಾಷಿ-ಹಸನ್ಮುಖಿ ಪೌಲ್ ಡಿ 'ಕೋನ. ಇಲ್ಲಿಯ 'ಗೆಳೆಯರ ಬಳಗ'ವೆಂಬ ಸಮಾಜ ಸುಧಾರಕ ಸಂಸ್ಥೆಯೊಂದಿಗೆ ಬೆರೆತು ಹಿಂದು-ಮುಸ್ಲಿಂ-ಕ್ರಿಶ್ಚಿಯನ್ ಧರ್ಮದ ಮುಂದಾಳುಗಳೊಂದಿಗೆ ಆಗಾಗ ಸಭೆ ನಡೆಸಲಾರಂಭಿಸಿದರು. ಕೋಮು ಸೌಹಾರ್ದ ಸಭೆಗಳನ್ನು ಏರ್ಪಡಿಸಿ ಒಮ್ಮೊಮ್ಮೆ ಒಬ್ಬೊಬ್ಬ ಹಿರಿಯನನ್ನು ಆ ಸಭೆಯ ಅಧ್ಯಕ್ಷತೆ ವಹಿಸುವಂತೆ ಕೇಳಿಕೊಳ್ಳುತ್ತಿದ್ದರು. ಎಲ್ಲ ಮತಬಾಂಧವರಲ್ಲೂ ಸೋದರಭಾವ ಜಾಗ್ರತಗೊಳಿಸುವುದೇ ಇವರ ಉದ್ದೇಶ. ಇವರೊಂದಿಗೆ ಈ ದಿಶೆಯಲ್ಲಿ ಹೆಜ್ಜೆ ಹಾಕಿದ ಇನ್ನೊಬ್ಬರೆಂದರೆ 'ಗೆಳೆಯರ ಬಳಗ'ದ ಹಿರಿಯ ಗುಂಡೂರಾಯರು.

ಚರ್ಚಿನಲ್ಲಿ ದೀಪಾವಳಿ ಹಬ್ಬವನ್ನೂ, ದೇವಾಲಯಗಳಲ್ಲಿ ಮುಸ್ಲಿಮರ ಹಬ್ಬಗಳನ್ನೂ, ಮಸೀದೆಯಲ್ಲಿ ಕ್ರಿಸ್‌ಮಸ್ ಹಬ್ಬವನ್ನೂ ಆಚರಿಸುತ್ತಾ ಬಂದಿರುವುದು ಇವರು ಭಾವೈಕ್ಯ ಸಾಧನೆಗಾಗಿ ಕೈಕೊಂಡ ಮಹತ್ಕಾರ್ಯ. ಆಯುಧ ಪೂಜೆಯನ್ನು ಧರ್ಮದ ಚೌಕಟ್ಟಿನಿಂದ ಹೊರತಂದು ಭಾರತೀಯ ಸಂಸ್ಕೃತಿಯ ಪ್ರತೀಕವಾಗಿ ಆಚರಿಸಬೇಕೆಂಬುದು ಇವರ ಆಶಯ.

ಇದೀಗ ತೀರ್ಥಹಳ್ಳಿ ತಾಲ್ಲೂಕಿಗೆ ವರ್ಗವಾಗಿ ಹೋದರೂ ಪೌಲ್ ಡಿ' ಕೋನ ಅವರನ್ನು ಭದ್ರಾವತಿಯ ಜನ ಸದಾ ನೆನೆಯುತ್ತಾರೆ.

• ಡನ್‌ಕಿನ್ ಜಳಕಿ

## ಸರಳ-ಸಜ್ಜನ-ಪಂಡಿತ

**ಇ**ವರನ್ನು ನಾವೆಲ್ಲ ಕರೆಯುವದು ಶಿರಹಟ್ಟಿಯ "ಲಾಲಬಹದ್ದೂರ ಶಾಸ್ತ್ರೀಜಿ" ಎಂದೇ. ಬಿಳಿ ಖಾದಿಯ ಧೋತರ, ಖಾದಿಯ ಅಂಗಿ, ಅದರ ಮೇಲೊಂದು ಕರಿಯ ಕೋಟು, ತಲೆಯ ಮೇಲೆ ಬಿಳಿ ಖಾದಿಯ ಟೊಪ್ಪಿಗೆ, ಲಾಲಬಹದ್ದೂರರಷ್ಟೆ ಸರಳ-ಸ್ವಚ್ಛ-ಆದರ್ಶ ವ್ಯಕ್ತಿ ಡಿ. ಆರ್. ದೇಶಪಾಂಡೆಯವರು.

ತೊಂಬತ್ತೂರು ವಯಸ್ಸಿನ ಇವರು (ಜನನ: ೧೯೦೨) ಅಪ್ರತಿಮ ಮೇಧಾವಿ ವಕೀಲರೆನಿಸಿಕೊಂಡವರು. ಶಿರಹಟ್ಟಿ ಸಾಂಗ್ಲಿ ಸಂಸ್ಥಾನದ ಅಧೀನದಲ್ಲಿದ್ದು ಮರಾಠಿ ಪ್ರಭಾವಕ್ಕೆ ಒಳಗಾದ ದಿನಗಳಲ್ಲೂ ಮನೆಯಲ್ಲಿ ಮತ್ತು ಹೊರಗಡೆ ಅಚ್ಚ ಕನ್ನಡದಲ್ಲೇ ಮಾತನಾಡಿ ಮಾತೃ ಭಾಷೆಗೆ ಗೌರವ ತಂದು

ಕೊಟ್ಟವರು. ಹಾಗೆಯೆ ಕರ್ನಾಟಕ ಏಕೀಕರಣ ಚಳವಳಿಗೆ ಕಾಯಾ-ವಾಚಾ-ಮನಸಾ ದುಡಿದವರು. ಇವರ ಪಾಂಡಿತ್ಯ ಕಾರ್ಯತತ್ಪರತೆ ಮತ್ತು ಶಿಕ್ಷಣದ ಬಗೆಗಿನ ಕಾಳಜಿಗಳನ್ನು ಗಮನಿಸಿದ ಅಂದಿನ ಸಾಂಗ್ಲಿ ಸಂಸ್ಥಾನದ ಮುಖ್ಯ ಮಂತ್ರಿಗಳು ಡಿ. ಆರ್. ದೇಶಪಾಂಡೆಯವರನ್ನು ೧೯೪೬ರಲ್ಲಿ ಆ ಸಂಸ್ಥಾನದ ಶಿಕ್ಷಣ ಮಂತ್ರಿಯನ್ನಾಗಿ ನೇಮಿಸಿದರು. ಮುಂದೆ ೧೯೪೮ರ



ವರೆಗೆ ಶಿಕ್ಷಣ ಮಂತ್ರಿಗಳಾಗಿ ತಮ್ಮ ಖಾತೆಯಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಅಂದ ಹಾಗೆ ಡಾ. ವಿ.ಕೃ. ಗೋಕಾಕರು ಸವಣೂರಿನಲ್ಲಿ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅಲ್ಲಿಯೇ ದೇಶಪಾಂಡೆಯವರು ಒಂದೆರಡು ವರ್ಷ ಮುಂದಿದ್ದರು.

ಸಂಸ್ಕೃತ ಇವರಿಗೆ ಕರತಲಾಮಲಕ. ಭಾಷಣ ಮಾಡುವಾಗ ವಿಷಯಕ್ಕೆ ಸಂಬಂಧಪಟ್ಟಂತೆ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ಅರ್ಥ ಪೂರ್ಣ ರೀತಿಯಲ್ಲಿ ವಿವರಿಸಿ ಹೇಳುವುದು ಇವರ ವೈಶಿಷ್ಟ್ಯ. ಇತಿಹಾಸದಿಂದ ಹಿಡಿದು ಇಂದಿನ ಎಲ್ಲ ವಿದ್ಯಮಾನಗಳ ಭಾಂಡಾರವೇ ಇವರಾಗಿದ್ದಾರೆ. ಒಂದು ರೀತಿಯಲ್ಲಿ ಇವರು "ನಡೆದಾಡುವ ವಿಶ್ವಕೋಶ"ವೇ. ಊರಿನ ಯಾವುದೇ ಸಮಾರಂಭವಿರಲಿ ದೇಶಪಾಂಡೆಯವರು ಅಲ್ಲಿರುತ್ತಾರೆ. ಪ್ರತಿ ಶನಿವಾರ ಶಿರಹಟ್ಟಿಯ 'ಥಿಂಕರ್ಸ್ ಫೋರಂ'ನಲ್ಲಿ ಅವರದೇ ಅಧ್ಯಕ್ಷತೆ. ಅಂದಿನ ಚರ್ಚೆಯಲ್ಲಿ ಅವರಿರದಿದ್ದರೆ ಕಳೆಯೆ ಇರುವುದಿಲ್ಲ. ಈ ವಯಸ್ಸಿನಲ್ಲೂ ಇಂದಿಗೂ ಒಂದೂವರೆಯಿಂದ ಎರಡು ಕಿಲೋ ಮೀಟರ್ ಬೆಳಗಿನ ವಾಕಿಂಗ್ ಆಗಲೇಬೇಕು. ಕಣ್ಣು-ಕಿವಿಗಳು, ಸ್ಪಷ್ಟವಾಗಿ ನೆನಪೂ ಚುರುಕಾಗಿದೆ. ಸದ್ಯ ಶಿರಹಟ್ಟಿಯ ಶಿಕ್ಷಣ ಸಮಿತಿ ಚೇರಮನ್ನರಾಗಿ ಕೆಲಸ ಮಾಡುತ್ತಿದ್ದಾರೆ. ಇವರ ಕೋಣೆಯೆಂದರೆ ಸರಳವಾದ ಮಿನಿ ವಾಚನಾಲಯ. ಅವರು ಕೂಡುವದು ಓದುವದು ಮಲಗುವುದೆಲ್ಲ ಒಂದು ಜಮಖಾನೆಯ ಮೇಲೆ ಹಾಸಿದ ತೆಳ್ಳನೆ ಗಾದಿಯ ಮೇಲೆ. ಮಕ್ಕಳಿಗೂ ಅದೇ ಸರಳತೆಯ ಪಾಠ ಹೇಳಿಕೊಟ್ಟಿದ್ದಾರೆ. ಅವರೆಲ್ಲ ಸಂಸ್ಕೃತಿಪ್ರಿಯರು. ದೊಡ್ಡ ಸಾಧನೆಗಳನ್ನು ಮಾಡಿದವರು. ಆದರೆ ದೇಶಪಾಂಡೆಯವರು ಶಿರಹಟ್ಟಿಯ ಮೇಲಿನ ಪ್ರೀತಿಯಿಂದ ಇಲ್ಲೇ ಉಳಿದಿದ್ದಾರೆ. ಇದು ನಮ್ಮ ಊರಿನ ಪುಣ್ಯ.

• ರಾಜು ಉಮರ್ಜಿ

---

**ಬೇಟೆ**ಗಾರರು ಜಿಂಕೆಯ ಬೆನ್ನು ಹತ್ತಿದಾಗ ಅದು ತನ್ನೊಟ್ಟಿಗೆ ಇತರ ಜಿಂಕೆಗಳಿವೆಯೆ? ಎಂದು ನೋಡುವುದಿಲ್ಲ; ಎಷ್ಟು ಜನ ಬೆನ್ನು ಹತ್ತಿದ್ದಾರೆ ಎನ್ನುವುದನ್ನು ನೋಡುವುದಿಲ್ಲ. ಬದಲು, ವೇಗವಾಗಿ ಓಡಿ, ನೇರವಾಗಿ ನೆಗೆದು ಅಪಾಯದಿಂದ ಪಾರಾಗುತ್ತದೆ. ಅದೇ ಪ್ರಕಾರ ಭಗವಾನ್ ಬುದ್ಧನಿಗೆ ತನ್ನನ್ನೇ ಸಮರ್ಪಿಸಿಕೊಂಡು ಏಕಚಿತ್ತದಿಂದ ಆಧ್ಯಾತ್ಮ ಮಾರ್ಗದಲ್ಲಿ ಮುನ್ನಡೆಯುವಾತ ಪವಿತ್ರ ಲೋಕವನ್ನು ತಲುಪುತ್ತಾನೆ.

• ಹೋರೆನ್ ಶೋರೆನ್

# ...ದು ಕಲೆ

ಪಯಣದ ಗುರಿ ಗೊತ್ತಿರದೆ
ಸುತ್ತಲಿನ ಕತ್ತಲಿನಲಿ ಕಣ್ಣು ಕಾಣದೆ
ದಾರಿಯ ಎಡರು–ತೊಡರುಗಳ ನಡುವೆ
ಎಡತಾಕುತ, ತಡಕಾಡುತ, ಕಲೆಗಾರ
ಸುತ್ತುತ್ತಿರುವನು ಈ ವರೆಗೂ, ಪರಿಚಿತ ವೃತ್ತದಲಿ.

ಪರಿಧಿಯ ಸಿಲುಕಿನಲಿ ಸಿಕ್ಕ ಮೇಲೊಮ್ಮೆ
ಒಳಗೂ ಬಾರದೆ ಹೊರಗೆ ಹೋಗಲಾರದೆ
ಸೀಮಿತ ಜಾಗದಲ್ಲಿ ಉಸಿರುಗಟ್ಟಿದರೂ ನಗುತ್ತ
ಕಲೆ ಕೊಲ್ಲುವ ಸಮೂಹದಲ್ಲಿ ಒಂಟಿಯಾಗಿಹನು.

ಹಿಂದಿನದನ್ನು ಬೈದು ಹೊಸಬರಾದವೆಂದು ಹಿಗ್ಗಿ
ತನಗೂ ತಿಳಿಯದಂತೆ ಬರೆದು, ನಕ್ಕು
ರಕ್ತ, ಕ್ರಾಂತಿ, ಯುದ್ಧಗಳಂಥ ಎರವಲುಗಳನ್ನು ಹಿಡಿದು
ಸಂಸ್ಕೃತಿ, ಪರಂಪರೆಯನು ಹರಿದೊಗೆದು.....
ಪಕ್ಷಿಯೊಂದರ ಚಿತ್ರ ತೆಗೆದು, ಅಡಿಯಲ್ಲಿ
'ಪಾರಿವಾಳ' ಎಂದು ಬರೆದು,
“ತಿಳಿದಿರಲಿಲ್ಲವಲ್ಲವೆ ಪಾರಿವಾಳವಿದೆಂದು?
ಇದಕ್ಕೇ 'ಹೊಸ ಕಲೆ' ಎನ್ನುವುದು”
ಎಂದು ಹೇಳಿ 'ವಿಶಿಷ್ಟ' ನಗೆ ನಕ್ಕು
ಗದ್ದ ನೀವುವ ಕಲೆಗೆ ರಾಷ್ಟ್ರ ಪ್ರಶಸ್ತಿ.
ಪ್ರಶಸ್ತಿ ಪ್ರದಾನ ಸಮಾರಂಭದ ಅದ್ದೂರಿಯಲಿ
ಮಾನ್ಯ ವಿಮರ್ಶಕರು ಮೈಕಿನಲಿ:
“ಪಾರಿವಾಳದ ಚಿತ್ರ ಪಾರಿವಾಳದ್ದೇ ಎಂದು
ತಿಳಿಯಲಿಲ್ಲ ದಿಗ್ಗಜರಿಗೂ, ಸಾಮಾನ್ಯರಿಗೂ.
ಏನು ಕಲೆ! ಎಂಥ ತಲೆ!.....!.....!”

ಗಡಚಿಕ್ಕುವ ಚಪ್ಪಾಳೆ – ಕಿವಿ ಕಿವುಡಾಗಿಸುವಷ್ಟು;
ಫೋಟೋಗಳ ಫ್ಲಾಷು – ಕಣ್ಣು ಕುರುಡಾಗುವಷ್ಟು;
ಕಿಕ್ಕಿರಿದ ಜನಸಾಗರದ ಮಧ್ಯ ಕಲೆಗಾರ,
ಮೂಲೆ ಅಲಂಕರಿಸಿದ ತನ್ನ ಚಿತ್ರದ 'ಭಾಗ್ಯ' ನೋಡಿ
ತೂತಿರುವ ತನ್ನ 'ಕಿಸೆ' ಮುಟ್ಟಿ ಅತ್ತದ್ದು, ಬಿಕ್ಕಿದ್ದು,
ಯಾರಿಗೂ ಕೇಳಿಸದಷ್ಟು, ಕಾಣಿಸದಷ್ಟು....

• ಅಮರ ಸದರಜೋಶಿ

ಅಂತಾರಾಷ್ಟ್ರೀಯ ಖ್ಯಾತಿಯ ಕನ್ನಡಿಗ

# 'ರಬ್ಬರ್ ಸುದ್ದಿ'ಯ ಧರ್ಮರಾಜರು....

• ಜಿ.ವಿ. ಕುಲಕರ್ಣಿ

ಇತ್ತೀಚಿನ ವರ್ಷಗಳಲ್ಲಿ ಕನ್ನಡಿಗರ ಪಾಲಿಗೆ ರಾಷ್ಟ್ರೀಯ, ಅಂತಾರಾಷ್ಟ್ರೀಯ ಪ್ರಶಸ್ತಿಗಳ ಸುರಿಮಳೆಯೇ ಆಗಿದೆ. ರಂಗಭೂಮಿಯ ಕೆ.ವಿ. ಸುಬ್ಬಣ್ಣ ಮೆಗಸಸೆ ಪ್ರಶಸ್ತಿಗೆ ಪಾತ್ರರಾದರೆ ಡಾ. ಸುದರ್ಶನರಿಗೆ ರೈಟ್ ಲೈವ್ಲಿ ಹುಡ್ ಪ್ರಶಸ್ತಿ. ಕೆ.ಕೆ. ಹೆಬ್ಬಾರ, ಬಿ.ವಿ. ಕಾರಂತ, ಡಾ. ಅನಂತಮೂರ್ತಿ, ಏಣಗಿ ಬಾಳಪ್ಪ ಹೀಗೆಯೇ ಬೆಳೆಯುತ್ತದೆ ಪ್ರಶಸ್ತಿ ಪಾತ್ರರ ಪಟ್ಟಿ. ಈ ಸಾಲಿಗೆ ಮೊನ್ನೆಯಷ್ಟೆ ಸೇರಿದವರು 'ರಬ್ಬರ್ ಸುದ್ದಿ' ಹೇಳುವ ಧರ್ಮರಾಜ ಕುಲಕರ್ಣಿಯವರು. ಸಿಂಥೆಟಿಕ್ ಆ್ಯಂಡ್ ಕೆಮಿಕಲ್ಸ್ ಲಿಮಿಟೆಡ್‌ನ ಸಂಸ್ಥಾಪಕ ಅಧ್ಯಕ್ಷ ಹಾಗೂ ಭಾರತೀಯ ರಬ್ಬರ್ ಉದ್ಯಮದ ಜನಕನೆಂದು ಖ್ಯಾತಿ ಪಡೆದ ದಿ. ತುಲಸಿದಾಸ ಕಿಲಾಚಂದ ಅವರ ಸ್ಮರಣಾರ್ಥವಾಗಿ ಪ್ರತಿ ಎರಡು ವರ್ಷಕ್ಕೊಮ್ಮೆ ನೀಡಲ್ಪಡುವ ರಾಷ್ಟ್ರೀಯ ಪುರಸ್ಕಾರವನ್ನು ಪಡೆಯುವಲ್ಲಿ ಮೊದಲಿಗರಾಗಿದ್ದಾರೆ ನಮ್ಮ ಧರ್ಮರಾಜ ಕುಲಕರ್ಣಿಯವರು. ಈ ಪ್ರಶಸ್ತಿಯ ಜೊತೆಗೆ ಒಂದು ಲಕ್ಷ ಐವತ್ತೊಂದು ಸಾವಿರ ರೂಪಾಯಿಗಳ ನಗದು ಬಹುಮಾನ, ಸುವರ್ಣ ಪದಕ ಹಾಗೂ ಮಾನಪತ್ರಗಳನ್ನು ದಿಲ್ಲಿಯಲ್ಲಿ ನಡೆದ ವಿಶೇಷ ಸಮಾರಂಭವೊಂದರಲ್ಲಿ ಧರ್ಮರಾಜ ಕುಲಕರ್ಣಿಯವರು ಮಾಜಿ ಪ್ರಧಾನಿ ಚಂದ್ರಶೇಖರ್ ಅವರಿಂದ ಸ್ವೀಕರಿಸಿದರು.

ಧರ್ಮರಾಜರದು ಬೆಳಗಾವಿ ಜಿಲ್ಲೆಯ ಸತ್ತಿ ಗ್ರಾಮದ ಮನೆತನ. ರಾಷ್ಟ್ರೀಯ ಮನೋಭಾವದ ಆ ಕುಟುಂಬ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮುನ್ನುಗ್ಗಿ ಜೇಲು ಸೇರುವುದರಲ್ಲಿ ಅಗ್ರಗಣ್ಯ ಎನ್ನಿಸಿತ್ತು. ತಾಯಿ ಗೋದಾವರಿಬಾಯಿ (ಭಾಗೀರಥಿ) ಸಂಸ್ಕೃತ ಹಾಗೂ ವೇದ ಪಾಂಡಿತ್ಯಕ್ಕೆ ಹೆಸರಾದ ಅಗರಖೇಡ ಜಹಗೀರದಾರರ ಮನೆಯ ಮಗಳು. ಮುತ್ತಜ್ಜ (ಅಂದರೆ ತಾಯಿಯ ಅಜ್ಜ) ಸೀತಾರಾಮಾಚಾರ್ಯರು 'ತರ್ಕ ಮಹಾರ್ಣವ'ರೆಂದೇ ಖ್ಯಾತರಾಗಿದ್ದವರು. ಆ ಕಾಲದಲ್ಲಿ ಗುರುಕುಲವೊಂದನ್ನು ನಡೆಸುತ್ತ ೩೦೦ ಜನ ವಿದ್ಯಾರ್ಥಿಗಳಿಗೆ ಉಚಿತ ಊಟ-ವಸ್ತ್ರ ನೀಡಿ, ಸಂಸ್ಕೃತ ಹಾಗೂ ವೇದ ಪಾಠ ಹೇಳಿ ಕೊಡುತ್ತಿದ್ದರವರು. ಶ್ರೀ ಶ್ರೀ ಸತ್ಯಧ್ಯಾನ ತೀರ್ಥರ ಗುರುಗಳಾಗಿದ್ದರು ಈ ಸೀತಾರಾಮಾಚಾ



ರ್ಯರು.

ಆ ಮನೆತನಕ್ಕೆ ಜಹಗೀರದಾರರೆಂಬ ಹೆಸರು ಬಂದುದರ ಹಿಂದೆಯೂ ಒಂದು ಆಚ್ಚರಿಯ ಕತೆ ಅಡಗಿದೆ. ಸೀತಾರಾಮಾಚಾರ್ಯರ ಸಿದ್ಧಿಯೇ ಅಂಥದ್ದು. ಅವರ ಪಾಂಡಿತ್ಯ ಮತ್ತು ಸಿದ್ಧಿಗಳಿಗೆ ಮಾರುಹೋಗಿ ಪೇಶ್ವೆಯವರು ಐದು ಗ್ರಾಮಗಳ ಜಾಗೀರು ಹಾಕಿಕೊಟ್ಟರಂತೆ. ಹೀಗೆ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಭೀಮಾತೀರದ ಪಂಚಗ್ರಾಮ (ಅಗರಖೇಡ, ಭುಯ್ಯಾರ, ಚಿಕ್ಕಮಣ್ಣೂರು, ಹಿರೇಮಣ್ಣೂರು ಮುಂತಾದವು)ಗಳ ಜಹಗೀರದಾರರಾದರು. ಮಣ್ಣೂರಲ್ಲಿ ಅವರು ಪೂಜಿಸಿದ ಕೇಶವದೇವರ ಗುಡಿ ಇಂದಿಗೂ ಇದೆ. ಒಟ್ಟು ೧೭೦೦ ಎಕರೆ ಜಮೀನು ಅವರ ಪಾಲಿಗೆ. ಸಂಸ್ಕೃತ ಅವರ ಮನೆಯಲ್ಲಿ ನಿತ್ಯ ಆಡುವ ಭಾಷೆಯೇ ಆಗಿಬಿಟ್ಟಿತ್ತು. ಮನೆಯ ಆಳುಗಳೂ ರೈತರೂ ಆಚಾರ್ಯರೊಡನೆ ಸಂಸ್ಕೃತದಲ್ಲಿಯೇ ಸಂಭಾಷಿಸುತ್ತಿದ್ದರಂತೆ.

ವಿಜಾಪುರದ ಪಿಡಿಜೆ ಹೈಸ್ಕೂಲಿನಲ್ಲಿ ಮೆಟ್ರಿಕ್ ಮುಗಿಸಿದ ನಂತರ ಮುಂಬಯಿಯ ಸಿಡೆನ್‌ಹ್ಯಾಂ ಕಾಲೇಜು ಸೇರಿದ ಧರ್ಮರಾಜರನ್ನು ಸ್ವಾತಂತ್ರ್ಯ ಸಂಗ್ರಾಮ ಸೆಳೆಯುತ್ತಲೇ ಇತ್ತು. ಇಲ್ಲಿ ಮನೆಯಲ್ಲಿ ಚಿಕ್ಕಪ್ಪ ಜೇಲು ಸೇರಿದ್ದರು. ತಾಯಿ ಗೋದಾವರಿ ಬಾಯಿ ಖಾದಿ ಸೀರೆಯುಟ್ಟು ತಮ್ಮ ರಾಷ್ಟ್ರೀಯ ಪ್ರವೃತ್ತಿಯನ್ನು ವ್ಯಕ್ತಪಡಿಸುತ್ತಿದ್ದರು. ಧರ್ಮರಾಜರು ಮುಂಬಯಿ ಸೇರಿದಾಗಲೇ (ಮುಂದೆ ರೇಲ್ವೆ ಮಂತ್ರಿಯಾದ) ಎಸ್.ಕೆ. ಪಾಟೀಲರ ಸಹವಾಸ ಭಾಗ್ಯ ದೊರೆಯಿತು. ೧೯೪೨ರ 'ಚಲೇಜಾವ್' ಚಳವಳಿಯಲ್ಲಿ ಧುಮುಕಿದ ಧರ್ಮರಾಜರು ಕರ್ನಾಟಕಕ್ಕೆ ಬಂದು ಪಿಕೆಟಿಂಗ್ ಪ್ರಾರಂಭಿಸಿದರು. 'ಕಂಡಲ್ಲಿ ಗುಂಡಿಕ್ಕು'ವ ಆದೇಶಕ್ಕೂ ಇವರು ಪಾತ್ರರಾಗಬೇಕಾಯಿತು. ಸಂಗಡಿಗರೆಲ್ಲ ಜೇಲು ಸೇರಿದರೂ ಇವರು, ವಾರಂಟ್ ಇದ್ದಾಗಲೂ, ಪೊಲೀಸರಿಗೆ ಸಿಂಹಸ್ವಪ್ನವಾಗಿ ಸುತ್ತಾಡುತ್ತಲೇ ಇದ್ದರು. ಸರದಾರ ವಲ್ಲಭಭಾಯಿ ಪಟೇಲರೊಂದಿಗೆ ಕೆಲವು ವರ್ಷ ಕೆಲಸ ಮಾಡುವ ಸದವಕಾಶವೂ ಇವರಿಗೆ ಪ್ರಾಪ್ತವಾಯಿತು.

ಇಂಥದರಲ್ಲೂ ಹಲವಾರು ಹವ್ಯಾಸಗಳಲ್ಲಿ ತೊಡಗಿಕೊಂಡಿದ್ದ ಧರ್ಮರಾಜರು ರಂಗಭೂಮಿ ಚಟುವಟಿಕೆಗಳಲ್ಲಿ ಅಗ್ರಮಾನ್ಯ ಹೆಸರೆನಿಸಿದರು.

ಅವರು ಹೇಳುತ್ತಾರೆ: "ಇಂಡಿಯನ್ ನ್ಯಾಶನಲ್ ಥೇಟರ್ ೧೯೪೫ರಲ್ಲಿ ಪ್ರಾರಂಭವಾದಾಗ ನಾನು ಅದರ ಪ್ರಥಮ ಕಾರ್ಯದರ್ಶಿಯಾಗಿದ್ದೆ. ಕಮಲಾದೇವಿ ಚಟ್ಟೋಪಾಧ್ಯಾಯ ಅಧ್ಯಕ್ಷೆ ಆಗಿದ್ದರು. ಕನ್ನಡಿಗ ಶಾಂತೇಶ ಪಾಟೀಲ ಉಪಾಧ್ಯಕ್ಷರಾಗಿದ್ದರು. ಆತ್ಮಾರಾಮ ಭೇಂಡೆ (ಮರಾಠಿ), ದಾಮೂ ಝುವೇರಿ, ಯೋಗೇಶ ದೇಸಾಯಿ (ಗುಜರಾತಿ), ವರದರಾಜ ಆದ್ಯ (ಕನ್ನಡ) ಇವರೆಲ್ಲ ಬೇರೆ ಭಾಷಾವಿಭಾಗ ನೋಡಿಕೊಂಡಿದ್ದರು. ೧೯೪೭ರಲ್ಲಿ ಜವಹರಲಾಲರ 'ಡಿಸ್ಕವರಿ ಆಫ್ ಇಂಡಿಯಾ' ನೃತ್ಯ ನಾಟಕವನ್ನು ನಾವು ಪ್ರದರ್ಶಿಸಿ ಅಪಾರ ಕೀರ್ತಿ ಗಳಿಸಿದೆವು. ಇದರ ಮೊದಲನೆಯ ಪ್ರಯೋಗವನ್ನು ನೋಡಿ, ಪಂ.ಜವಾಹರಲಾಲರು ನನ್ನನ್ನು ಎತ್ತಿಕೊಂಡು 'Dharmaraj, the ballet is better than my book' ("ಧರ್ಮರಾಜ, ನನ್ನ ಪುಸ್ತಕಕ್ಕಿಂತಲೂ ನಿಮ್ಮ ನೃತ್ಯ ನಾಟಕ ಪರಿಣಾಮಕಾರಿಯಾಗಿದೆ") ಎಂಬ ಉದ್ಗಾರ ತೆಗೆದಿದ್ದರು. ಮರುದಿನ ಅವರ ಉದ್ಗಾರ ಆಂಗ್ಲ ಪತ್ರಿಕೆಗಳ ಮುಖಪುಟವನ್ನೇ ಅಲಂಕರಿಸಿತು. ರವಿಶಂಕರ, ರಾಜೇಂದ್ರ ಶಂಕರ, ಸಚಿನ್ ಶಂಕರ್ ಇವರೆಲ್ಲ ನಮ್ಮೊಡನೇ ಇದ್ದರು."

ಧರ್ಮರಾಜರು ರಾಜಕೀಯ ಕ್ಷೇತ್ರವನ್ನು ನಂತರ ಯಾಕೆ ಬಿಟ್ಟರು?

"ನಾನು ಮೊದಲು ರಾಜಕೀಯ ಕ್ಷೇತ್ರದಲ್ಲಿ ಬಹಳೇ ಕ್ರಿಯಾಶೀಲನಾಗಿದ್ದೆ. ಬಿ.ಜಿ. ಗೋಖಲೆಯವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ನಾನು ಯುಥ್ ಕಾಂಗ್ರೆಸ್‌ನ ಕಾರ್ಯದರ್ಶಿಯಾಗಿದ್ದೆ. ಎಸ್.ಕೆ. ಪಾಟೀಲ್ ಚೇರ್‌ಮನ್ ಆಗಿದ್ದಾಗ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿದ್ದೆ. ೧೯೪೪ರ ಅಧಿವೇಶನದಲ್ಲಿ ದುಡಿದೆ. ಕಾಂಗ್ರೆಸ್ ಟಿಕೆಟ್ ಪಡೆದ ನಾನು ಚುನಾವಣೆಯ ಕಣಕ್ಕೆ ಇಳಿಯುವವನಿದ್ದೆ. ಆದರೆ ನನ್ನ ಅತ್ಯಂತ ಪ್ರಿಯರೂ ಮಾರ್ಗದರ್ಶಕರೂ ಆಗಿದ್ದ ಸರ್ದಾರ್ ಪಟೇಲರು ನನಗೆ ರಾಜಕಾರಣದಿಂದ ದೂರ ಸರಿದು ಆರ್ಥಿಕಕ್ಷೇತ್ರ ಪ್ರವೇಶಿಸಲು ಸಲಹೆ ನೀಡಿದರು. ಡಾ. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಿಗೆ



ದಿ. ತುಲಸಿದಾಸ ಕಿಲಾಚಂದ್ ಭಾರತದ ಕೆಲವೇ ಶ್ರೇಷ್ಠ ಉದ್ಯಮಿಗಳಲ್ಲಿ ಅತ್ಯಪರೂಪದ ವ್ಯಕ್ತಿತ್ವ ಪಡೆದವರು. ದೇಶಾಭಿಮಾನಿ, ದಾನಿ. ರಾಜಕಾರಣದಲ್ಲಿಯೂ ವಿಶಿಷ್ಟ ಪಾತ್ರವಹಿಸಿದವರು. ಪ್ರಜ್ಞಾವಂತ ಸಂಸತ್ಸದಸ್ಯರಾಗಿದ್ದ ಅವರು 'ಸಿಂಥೆಟಿಕ್ಸ್ ಆ್ಯಂಡ್ ಕೆಮಿಕಲ್ಸ್ ಲಿಮಿಟೆಡ್'ನ ಸಂಸ್ಥಾಪಕರು. ಸುಯೋಜಕ ದೃಷ್ಟಿಯ ಅವರು ಭಾರತದ ರಬ್ಬರ್ ಉದ್ಯಮದ ಉತ್ಕರ್ಷಕ್ಕೆ ತಮ್ಮದೇ ಆದ ಕೊಡುಗೆಯನ್ನಿತ್ತಿದ್ದಾರೆ. ಅವರ ಸ್ಮರಣಾರ್ಥ ಕೊಡಮಾಡುವ, 'ತುಲಸಿದಾಸ ಕಿಲಾಚಂದ್ ರಾಷ್ಟ್ರೀಯ ಪ್ರಶಸ್ತಿ' ಮೊದಲ ಬಾರಿಗೆ ಇದೇ ವರ್ಷ ಜನವರಿ ೧೬ ರಂದು ದಿಲ್ಲಿಯಲ್ಲಿ ಧರ್ಮರಾಜ ಕುಲಕರ್ಣಿಯವರಿಗೆ ನೀಡಲ್ಪಟ್ಟಿತು.

ನನ್ನ ಪರಿಚಯ ಮಾಡಿಕೊಟ್ಟರು. ಡಾ. ವಿಶ್ವೇಶ್ವರಯ್ಯನವರ ಶಿಫಾರಸು ಪತ್ರದಿಂದಾಗಿ ನನಗೆ 'ಆಲ್ ಇಂಡಿಯಾ ಮ್ಯಾನ್ಯುಫ್ಯಾಕ್ಚರರ್ಸ್ ಆರ್ಗನೈಸೇಶನ್'ದ ಉಪ ಕಾರ್ಯದರ್ಶಿ ಕೆಲಸ ದೊರೆಯಿತು. ಎರಡು ವರ್ಷಗಳ ತರುವಾಯ ಮಿತ್ರ ಲಲಿತ ಮೋಪನ ಜಮನಾದಾಸ್ ಅವರು ಆಲ್ ಇಂಡಿಯಾ ರಬ್ಬರ್ ಇಂಡಸ್ಟ್ರೀಜ್ ಅಸೋಸಿಯೇಶನ್ನಿನ ಪ್ರಧಾನ ಕಾರ್ಯದರ್ಶಿ ಪದವಿ ನೀಡಿದರು. ಎಂಟು ವರ್ಷ ದುಡಿದ ಮೇಲೆ ನನ್ನದೇ ಆದ ಪತ್ರಿಕೆ 'ರಬ್ಬರ್ ನ್ಯೂಸ್' ಪ್ರಾರಂಭಿಸಿದೆ. ಕಳೆದ ೩೪ ವರ್ಷಗಳಿಂದ ಅದನ್ನು ಮುಂದುವರೆಸಿಕೊಂಡು ಬಂದಿರುವೆ," ಎನ್ನುತ್ತಾರೆ ಅವರು.

ಹಾಗೆ ನೋಡಿದರೆ ಧರ್ಮರಾಜ ಕುಲಕರ್ಣಿಯವರು ರಬ್ಬರ್ ಉತ್ಪಾದಕರಲ್ಲ, ಮಾರಾಟಗಾರರಲ್ಲ, ರಬ್ಬರ್ ಪ್ಲಾಂಟೇಶನ್ ಮಾಲೀಕರೂ ಅಲ್ಲ. ಆದರೆ ಭಾರತೀಯ ರಬ್ಬರ್ ಉದ್ಯಮದಲ್ಲಿ ದೊಡ್ಡ ಹೆಸರಾಗಿರುವಂತೆಯೇ ಆ ಉದ್ಯಮದ 'ನಡೆದಾಡುವ ವಿಶ್ವಕೋಶ'ವೆಂದೇ ಗೌರವ ಪಡೆದವರು. ಇವರ 'ರಬ್ಬರ ನ್ಯೂಸ್' ಆ ಇಡೀ ಉದ್ಯಮಕ್ಕೆ ಮಾರ್ಗದರ್ಶನ ನೀಡುವ ಪತ್ರಿಕೆಯಾಗಿದೆ. ಕಳೆದ ೩೪ ವರ್ಷಗಳಲ್ಲಿ ಕುಲಕರ್ಣಿಯವರು ಬರೆದ ೪೦೦ ಸಂಪಾದಕೀಯ ಲೇಖನಗಳು ರಬ್ಬರ್ ಉದ್ಯಮದ ದಿಶೆಯನ್ನೇ ಬದಲಾಯಿಸಿವೆ. ಪಿ.ಎಸ್. ಹಬೀಬ ಎಂಬ ಐ.ಎ.ಎಸ್. ಅಧಿಕಾರಿಗೆ ಇವರ ಒಂದು ಅಗ್ರಲೇಖದ ಟೀಕೆಯಿಂದಾಗಿ ಹಿಂಬಡತಿ ಹಾಗೂ ವರ್ಗಾವಣೆಯೂ ಆಯಿತಂತೆ. ಅದು ರಬ್ಬರ್ ಉದ್ಯಮದಲ್ಲೇ ಬಹಳ ದೊಡ್ಡ ಸುದ್ದಿ ಮಾಡಿತ್ತು. ಇವರ ವಿದ್ವತ್ಪೂರ್ಣ ಲೇಖನಗಳು ರಬ್ಬರ್ ಉತ್ಪಾದಕರನ್ನು ಆತ್ಮ ನಿರೀಕ್ಷಣೆ ಮಾಡಿಕೊಳ್ಳಲು ಪ್ರಚೋದಿಸಿವೆ. ಹೊಸದಾರಿ ತುಳಿಯಲು ಪ್ರೇರಣೆ ನೀಡಿವೆ. ತಮ್ಮ ಪತ್ರಿಕೆಯಲ್ಲದೆ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಪತ್ರಿಕೆಗಳಿಗೆ ಟೆಕ್ನಿಕಲ್ ಹಾಗೂ ಟ್ರೇಡ್ ಜರ್ನಲ್‌ಗಳಿಗೆ ನೂರಾರು ಅಭ್ಯಾಸಪೂರ್ಣ ಲೇಖನಗಳನ್ನೂ ಬರೆದಿದ್ದಾರೆ. ರಬ್ಬರ್ ಉದ್ಯಮದ ಮಹತ್ವದ ಸಮಸ್ಯೆಗಳಿಗೆ ಕನ್ನಡಿ ಹಿಡಿದಿದ್ದಾರೆ. ಆ ಉದ್ಯಮಕ್ಕೆ ಸಂಬಂಧಿಸಿದ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಮ್ಮೇಳನ, ವಿಚಾರಗೋಷ್ಠಿ ಸೆಮಿನಾರ್

ಗಳಲ್ಲಿ ೫೦ಕ್ಕಿಂತ ಹೆಚ್ಚು ಪ್ರಬಂಧಗಳನ್ನು ಮಂಡಿಸಿದ್ದಾರೆ.

ಅಂತಾರಾಷ್ಟ್ರೀಯ ರಬ್ಬರ್ ಉದ್ಯಮದ ವಾರ್ಷಿಕ ಸಭೆಗಳಲ್ಲಿ ಭಾರತ ಸರಕಾರದ ಪ್ರತಿನಿಧಿಯಾಗಿ ಮಲೇಶಿಯಾ, ಮೆಕ್ಸಿಕೋ ಮತ್ತು ಒಟ್ಟಾವಾಗಳಲ್ಲಿ ಭಾರತೀಯ ವಕ್ತಾರರಾಗಿ ಕೆಲಸ ಮಾಡಿದ್ದಾರೆ. ಅಲ್ಲದೆ ತಾಂತ್ರಿಕ ವಿನಿಮಯ, ಸಂಶೋಧನೆಯ ಸಹಕಾರಕ್ಕೆ ದೊಡ್ಡ ಕೊಡುಗೆ ನೀಡಿದ್ದಾರೆ.

ಈ ಪ್ರಶಸ್ತಿಗಾಗಿ ನೇಮಕಗೊಂಡಿದ್ದ ಆಯ್ಕೆ ಸಮಿತಿಯಲ್ಲಿ ಪ್ರಸಿದ್ಧ ವ್ಯಕ್ತಿಗಳಿದ್ದಾರೆ. (ದಿಲ್ಲಿಯ ಲೆಫ್ಟಿನಂಟ್ ಗವರ್ನರ್‌ರಾದ ಪಿ.ಕೆ. ದವೆ, ರಬ್ಬರ್ ತಂತ್ರಜ್ಞಾನದಲ್ಲಿ ಅನೇಕ ಪದವಿಗಳನ್ನು ಪಡೆದ ಕೈಗಾರಿಕಾ ಅಭಿವೃದ್ಧಿ ಸಚಿವಾಲಯದ ಡೆಪ್ಯುಟಿ ಡೈರೆಕ್ಟರ್ ಜನರಲ್ ಆಗಿದ್ದ ಡಾ. ಎನ್.ವಿ.ಸಿ.ರಾವ್, ಆಲ್ ಇಂಡಿಯಾ ರಬ್ಬರ್ ಇಂಡಸ್ಟ್ರೀಜ್ ಅಸೋಸಿಯೇಶನ್‌ನ ಮಾಜಿ ಅಧ್ಯಕ್ಷ ಡಾ. ಎಮ್.ಕೆ. ಕಪೂರ್ ಹಾಗೂ ಜೆ.ಕೆ. ಇಂಡಸ್ಟ್ರೀಜ್ ಲಿಮಿಟೆಡ್‌ನ ಮ್ಯಾನೆಜಿಂಗ್ ಡೈರೆಕ್ಟರ್ ಆಗಿರುವ ಎಫ್.ಪಿ.ಸಿಂಘಾನಿಯಾ)

೧೯೪೭ರಲ್ಲಿ 'ಜಾಗ್ರತಿ ಎಂಬ ಕನ್ನಡ ವಾರಪತ್ರಿಕೆಯನ್ನು ಪ್ರಾರಂಭಿಸಿದ್ದ ಧರ್ಮರಾಜರು ಅದರ ವ್ಯವಸ್ಥಾಪಕ ಸಂಪಾದಕರಾಗಿದ್ದರು. ಖಾದ್ರಿ ಶಾಮಣ್ಣ ಸಂಪಾದಕರಾಗಿದ್ದರು. ಅದನ್ನು ಪ್ರಕಟಿಸುತ್ತಿದ್ದ ಕರ್ನಾಟಕ ಪ್ರಿಂಟರ್ಸ್ ಅಂಡ್ ಪಬ್ಲಿಶಿಂಗ್ ಕಂ. ಪ್ರೈ. ಲಿ. ಇದರ ಡೈರೆಕ್ಟರರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ, ನಾರಾಯಣಸ್ವಾಮಿ, ಶ್ರೀನಿವಾಸ ಮಲ್ಯ ಪ್ರಮುಖರಾಗಿದ್ದರು. ಈ ಪತ್ರಿಕೆ ಒಂದೂವರೆ ವರ್ಷ ಮಾತ್ರ ನಡೆಯಿತು.

ಶ್ರೀಮತಿ ಮೀರಾ ಧರ್ಮರಾಜ ಕುಲಕರ್ಣಿಯವರು ತಮ್ಮ ಪತಿಯಿಂದ ಸಾರ್ವಜನಿಕ ಸೇವೆಯ ದೀಕ್ಷೆಪಡೆದಿದ್ದಾರೆ. 'ಕನ್ನಡ ವನಿತಾ ಸಮಾಜ'ದ ಅಧ್ಯಕ್ಷೆಯಾಗಿದ್ದಾರೆ.

ಧರ್ಮರಾಜರಿಗೆ ಈಗ ೭೪ ವರ್ಷ ( ಜನನ: ೩೧-ಅಗಸ್ಟ್ ೧೯೨೨). ಇನ್ನೂ ತರುಣರ ಉತ್ಸಾಹ ಅವರಲ್ಲಿದೆ. ಪತ್ರಿಕೆಯೊಂದಿಗೆ ಮುಂಬಯಿಯ ಅನೇಕ ಸಂಘ-ಸಂಸ್ಥೆಗಳ ಪದಾಧಿಕಾರಿಯಾಗಿರುವ ಅವರು ಅಲ್ಲಿಯ ಶ್ರೀ ಸತ್ಯಧ್ಯಾನ ವಿದ್ಯಾಪೀಠದ ಉಪಾಧ್ಯಕ್ಷರೂ ಆಗಿದ್ದಾರೆ. ●



# ಸಾವನ್ನು ಸ್ವಾಗತಿಸಿದವರು

• ಕೆ. ವೆಂಕಣ್ಣಾಚಾರ್

ಹೇಡಿಗಳು ಬದುಕಿನಲಿ
ಅಡಿಗಡಿಗೂ ಸಾಯುವರು
ಒಂದಲ್ಲ ನೂರು ಬಾರಿ....
ವೀರನಿಗೊ ಒಮ್ಮೆ ಮರಣ,
ಸತ್ತ ಮೇಲೂ 'ಇರುವವನೆ' ಶರಣ...

ಎಲ್ಲ ಭಯಕ್ಕಿಂತ ಮರಣ ಭಯ ಅತ್ಯಂತ ಭೀಕರ. ಆದರೆ ಸಾವನ್ನು ಅತ್ಯಂತ ಸಮಾಧಾನದಿಂದ ಸ್ವಾಗತಿಸಿದ ಕೆಲವು 'ಸಜ್ಜನರ ಆದರ್ಶ ನಿದರ್ಶನಗಳು ಇಲ್ಲಿವೆ.

ಕ್ರಿಸ್ತಶಕ ೧೯೧೨ರಲ್ಲಿ ವಿಶ್ವ ವಿಖ್ಯಾತವಾಗಿದ್ದ ಟೈಟಾನಿಕ್ ಎಂಬ ಹಡಗು ಸಮುದ್ರದ ಮಧ್ಯೆ ಅಪಘಾತಕ್ಕೀಡಾಗಿ ಮುಳುಗತೊಡಗಿತು. ಆಗ ಕೆಲವು ಪ್ರಮುಖರಿಗೆ ಲೈಫ್‌ಬೋಟಿನಲ್ಲಿ ಸ್ಥಳಾವಕಾಶ ಮಾಡಿಕೊಡಲಾಯಿತು. ಇನ್ನು ಕೆಲವರಿಗೆ ಲೈಫ್ ಬೆಲ್ಟ್ ಮತ್ತು ಲೈಫ್ ಜಾಕೆಟ್ಟುಗಳನ್ನು ದೊರಕಿಸಲಾಯಿತು. ಇವ್ಯಾವುದೂ ದೊರಕದವರು ಮುಳುಗುತ್ತಿದ್ದ ಹಡಗಿನೊಂದಿಗೆ ಸಮುದ್ರದ ಪಾಲಾಗಬೇಕು ಎಂಬುದು ನಿರ್ಧಾರವಾದಂತೇ ಇತ್ತು. ಈ ವಿಚಾರ ತಿಳಿದ ಒಬ್ಬಾಕೆಯಂತೂ ಭೋರಾಡಿ ಅಳಹತ್ತಿದಳು. ಇದನ್ನು ಕಂಡು ಲೈಫ್ ಜಾಕೆಟ್ ಹಾಗೂ ಲೈಫ್ ಬೆಲ್ಟ್‌ಗಳನ್ನು ಪಡೆದಿದ್ದ ಮಿ. ಬೆಂಜಮಿನ್ ಗೋಗೆನ್ ಹಿಲಿ ಎಂಬ ಸಹೃದಯಿ ಕರಗಿ ಹೋದರು. ಕೂಡಲೇ ತಾವು ತೊಟ್ಟಿದ್ದ ಜೀವರಕ್ಷಕ ಪರಿಕರಗಳನ್ನು ಬಿಚ್ಚಿ ಆಕೆಗೆ ಸರಿಯಾಗಿ ತೊಡಿಸಿ ಏನು ಮಾಡಬೇಕು ಎಂಬುದನ್ನೂ ತಿಳಿಸಿದರು. ಅನಂತರ ಸಮಾಧಾನದಿಂದಲೇ ಅವರು ತಮ್ಮ ಕ್ಯಾಬಿನ್ನಿಗೆ ತೆರಳಿ ಉತ್ತಮ ಸೂಟನ್ನೂ ಬಿಳಿಯ ಟೈಯನ್ನೂ ಧರಿಸಿ ನಸುನಗುತ್ತಾ ಸಮುದ್ರದ ಪಾಲಾಗಬೇಕಾದವರ ಸಾಲಿನಲ್ಲಿ ಮೊದಲಿಗರಾಗಿ ನಿಂತರು.

ಸುಪ್ರಸಿದ್ಧ ಭೂ ಸಂಶೋಧಕ ರಾಬರ್ಟ್ ಸ್ಕಾಟ್ ದಕ್ಷಿಣ ಧ್ರುವದ ಸಂಶೋಧನೆಗೆಂದು ಹೊರಟಾಗ ಅವರ ತಂಡದಲ್ಲಿ ಲಾರೆನ್ಸ್ ಓಟ್ಸ್

ಎಂಬೊಬ್ಬ ಸದಸ್ಯರಿದ್ದರು. ದುರದೃಷ್ಟವಶಾತ್ ಇವರು ತಲುಪುವುದಕ್ಕೆ ಮೊದಲೇ ನಿಶ್ಚಿತ ಸ್ಥಾನದಲ್ಲಿ ಬೇರೊಂದು ದೇಶದವರು ಬಂದು ಹೋದ ಕುರುಹನ್ನು ಕಂಡ ತಂಡಕ್ಕೆಲ್ಲ ನಿರಾಶೆಯಾಯಿತು. ಆದರೆ ಹಿಂತಿರುಗುವ ಹಾದಿಯಲ್ಲಿ ಈ ತಂಡ ಎದುರಿಸಿದ್ದು ಸಾಲು ಸಾಲು ವಿಪತ್ತನ್ನ. ಈ ಮಧ್ಯೆ ಲಾರೆನ್ಸ್ ಓಟ್ಸರಿಗೆ ಹಿಮದ ಕಡಿತದಿಂದಾಗಿ ಮೈತುಂಬಾ ವ್ರಣಗಳ ಕಾಟ. ಹೆಜ್ಜೆಯಿಡುವುದೂ ಕಷ್ಟ. ಆದರೆ ಬಗೆಬಗೆಯ ಕಷ್ಟಕೋಟಲೆಗಳಿಂದ ನರಳುತ್ತಿದ್ದ ಸಂಗಾತಿಗಳಿಗೆ ತಾವೊಂದು ಹೊರೆ ಎಂದು ಓಟ್ಸರಿಗೆ ಅನಿಸಿತು. ಅಂದಿನ ರಾತ್ರಿ ಭೀಕರವಾದ ಹಿಮದ ಮಳೆ, ಕೊರೆವ ಚಳಿ ಹಾಗೂ ತೂಫಾನುಗಳ ನಡುವೆಯೇ ಮಿತ್ರರಿಗೆ, "ಇದೀಗ ಬಂದೆ" ಎಂದು ಹೇಳಿ ಡೇರೆಯಿಂದ ಹೊರನಡೆದವರು ನಡೆಯುತ್ತಲೇ ಹೋದರು, ಎಂದೆಂದಿಗೂ ಹಿಂದಿರುಗಿ ಬಾರದಿರುವ ನಿರ್ಧಾರದೊಂದಿಗೆ....

ಚಾರಲ್ಸ್ ಲಿಂಡ್‌ಬರ್ಗ್ ಎಂಬುವವರು ಮಹಾ ಧೈರ್ಯಶಾಲಿ, ದೃಢ ಮನಸ್ಕ. ಇನ್ನೂ ಯುವಕರಾಗಿದ್ದ ಅವರನ್ನು ಒಮ್ಮೆ ತಪಾಸಿಸಿದ ಡಾಕ್ಟರು ಅವರಿಗೆ ಕ್ಯಾನ್ಸರ್ ಕಾಹಿಲೆಯಿದೆಯೆಂದೂ ಅದು ಕೊನೆಯ ಹಂತವನ್ನು ತಲುಪಿದೆಯೆಂದೂ ಅದರಿಂದ ಪಾರಾಗುವುದು ಅಸಾಧ್ಯವೆಂದೂ ತಿಳಿಸಿದಾಗ ಚಾರಲ್ಸ್‌ರು ಕೊಂಚವೂ ಅಧೀರರಾಗಲಿಲ್ಲ. ತಮ್ಮ ಬದುಕಿನ ಉಳಿದ ಕೆಲವೇ ದಿನಗಳನ್ನೂ ಉಪಯುಕ್ತವಾಗಿ ಕಳೆಯಲು ನಿರ್ಧರಿಸಿ ಜೀವನ ವಿಧಾನವನ್ನೇ ಬದಲಿಸಿಕೊಂಡರು. ಪ್ರಶಾಂತವಾದ ವನ್ಯ ಪ್ರದೇಶವೊಂದಕ್ಕೆ ತೆರಳಿ ಅಲ್ಲಿ ಅತ್ಯಂತ ಸರಳವಾಗಿ ಬದುಕುತ್ತ, ಸ್ವಂತದ ಔಷಧೋಪಚಾರಗಳನ್ನು ನಿಲ್ಲಿಸಿ, ಅಲ್ಲಿರುವ ಜನಕ್ಕೆ ಉಪಕಾರಿಯಾಗಿ ನಿಂತರು. ತಮ್ಮ ಅಂತ್ಯವನ್ನು ಎದುರು ನೋಡುತ್ತ, ಒಂದು ಸಂಜೆ, ಸೂರ್ಯ ಮುಳುಗುವ ಹೊತ್ತಿಗೆ ಶಾಂತರಾಗಿ ಕೊನೆಯುಸಿರು ಎಳೆದರಂತೆ ಚಾರಲ್ಸ್.

ಆಧುನಿಕ ವಿದ್ಯುತ್ ಯುಗದ ಪ್ರವರ್ತಕರಲ್ಲಿ ಒಬ್ಬನೆನಿಸಿದ ಮೈಕೆಲ್ ಫ್ಯಾರಡೆ ಅಸಾಧಾರಣ ಸಂಶೋಧನೆಗಳನ್ನು ಮಾಡಿದ ವಿನೀತ ವ್ಯಕ್ತಿ. ಇಂಗ್ಲೆಂಡಿನ ಬಡ ಕಮ್ಮಾರನೊಬ್ಬನ ಮಗನಾಗಿ ಹುಟ್ಟಿ ಸಾಮಾನ್ಯ ಶಿಕ್ಷಣ ಪಡೆಯುವುದಕ್ಕೂ ಗತಿ ಇರದೆ, ಪುಸ್ತಕಗಳಿಗೆ ರಟ್ಟು ಕಟ್ಟುವವರ ಸಹಾಯಕನಾಗಿ ಹಾಗೆಯೇ ಓದಿನ ಗೀಳು ಬೆಳೆಸಿಕೊಂಡವನು. ಅಕಸ್ಮಾತ್ ಖ್ಯಾತ ವಿಜ್ಞಾನಿ ಸರ್ ಹಂಫ್ರಿ ಡೇವಿ ಅವರ ದೃಷ್ಟಿಗೆ ಬಿದ್ದು ಸಂಶೋಧನಾ ಸಹಾಯಕನಾದ. ಸ್ಟೇನ್‌ಲೆಸ್ ಸ್ಟೀಲ್, ಬೆಂಜೆನ್, ವಿದ್ಯುಜ್ಜನಕ ಮೊದಲಾದುವುಗಳ ಬಗ್ಗೆ ಸಂಶೋಧನೆ ನಡೆಸಿದ. ಇಂಗ್ಲೆಂಡಿನ ರಾಯಲ್ ಸೊಸೈಟಿಯ ನಿರ್ದೇಶಕನೂ ಆದ. ರಸಾಯನ ಶಾಸ್ತ್ರದ ಅಧ್ಯಾಪಕನಲ್ಲದೆ ವಿಶ್ವವಿಖ್ಯಾತ ಸಂಶೋಧಕನೆನಿಸಿದ. ಆದರೆ ಇವಾವುದರಿಂದಲೂ ಅವನ ತಲೆ ತಿರುಗಲಿಲ್ಲ. "ಸಂಪತ್ತಿನ ಸಂಗ್ರಹವೇ ಸಮಸ್ತ ಅನ್ಯಾಯ ಹಾಗೂ ಅಕ್ರಮಗಳಿಗೆ ಕಾರಣ" ಎನ್ನುತ್ತಿದ್ದ ಸಾಂಡೆಮಿಯನ್ ಎಂಬ ಧಾರ್ಮಿಕ ಪಂಥದ ಅನುಯಾಯಿಯಾದ. ಪ್ರಚಾರ, ಖ್ಯಾತಿ ಹಾಗೂ ಹಣದ ಹಂಬಲಗಳು ವೈಜ್ಞಾನಿಕ ನಿಷ್ಠೆಗೆ ಮಾರಕ ಎಂಬುದು ಆತನ ದೃಢ ನಿಲುವಾಗಿತ್ತು. ಆತ ರಾಯಲ್ ಸೊಸೈಟಿಯ ಅಧ್ಯಕ್ಷತೆ, ನೈಟ್ ಹುಡ್ ಮೊದಲಾದುವುಗಳನ್ನು ನಿರಾಕರಿಸಿದ. ತನ್ನ ಸಂಶೋಧನೆಗಳಿಗೆ ಪೇಟೆಂಟ್ ಕೂಡಾ ಮಾಡಿಸಲಿಲ್ಲ. ಮರಣ ಸಮಯ ಬಂದಾಗಲೂ ಆತ ಅವಿಚಲನಾಗಿದ್ದ. ತಾನು ಸತ್ತ ಮೇಲೆ ಅತ್ಯಂತ ಸರಳವಾಗಿ ಸಂಸ್ಕಾರ ಮಾಡಬೇಕೆಂದೂ ಗೋರಿಯ ಮೇಲೆ ಸಾಮಾನ್ಯ ಕಲ್ಲೊಂದನ್ನು ನೆಡಿಸಬೇಕು ಎಂದೂ ಹೇಳಿ ಪರಮ ಶಾಂತಿಯಿಂದ ದೇವರೆಡೆಗೆ ನಡೆದನಂತೆ.

ಇಂಗ್ಲೆಂಡಿನ ಒಂದು ಸುಪ್ರಸಿದ್ಧ ಮನೆತನದಲ್ಲಿ ಜನಿಸಿ, ಅಲ್ಲಿನ ಪ್ರಸಿದ್ಧ ಮಹಾವಿದ್ಯಾಲಯಗಳಲ್ಲಿ ಅಧ್ಯಯನ ಅಧ್ಯಾಪನಗಳನ್ನು ಮಾಡಿ, ಅಂತಾರಾಷ್ಟ್ರೀಯ ಖ್ಯಾತಿಯ ಸಂಶೋಧಕರೆನಿಸಿದ ಪ್ರೊ. ಜೆ.ಬಿ.ಎಸ್. ಹಾಲ್ಡೇನರು ಪಂಡಿತ ನೆಹರು, ವಿ.ಕೆ. ಕೃಷ್ಣ ಮೆನನ್ ಹಾಗೂ ಭಾರತದ ಮೇಲಣ ಅಕ್ಕರೆಗಳಿಂದ ಪ್ರೇರಿತರಾಗಿ ತಮ್ಮ ಪದವಿ ಸಂಪತ್ತು ಕೀರ್ತಿ ಹಾಗೂ ಭವ್ಯ ಭವಿಷ್ಯತ್ತುಗಳನ್ನು ಕಡೆಗಣಿಸಿ ಭಾರತಕ್ಕೆ ಬಂದರು. ಭಾರತೀಯರ ಬದುಕನ್ನು ಹಸನುಗೊಳಿಸುವಂಥ ಹಲವಾರು ಸಂಶೋಧನೆಗಳನ್ನು ಮಾಡಿದರು. ಅನೇಕ ವಿದ್ಯಾರ್ಥಿಗಳನ್ನು ತರಬೇತುಗೊಳಿಸಿದರು. ಎಲ್ಲಕ್ಕೂ ಮಿಗಿಲಾಗಿ

ಭಾರತದ ಜೀವನ ಪದ್ಧತಿಗೆ ಒಗ್ಗಿಕೊಂಡು ಸಸ್ಯಾಹಾರಿಯಾಗಿ ಹಿಂದೂ ಸನ್ಯಾಸಿಯಂತೆ ಬದುಕತೊಡಗಿದರು. ವಿಶ್ವದ ಬೇರೆ ಬೇರೆ ದೇಶಗಳಿಂದ ಆಹ್ವಾನಗಳು ಬಂದರೂ ವಿನಯದಿಂದಲೇ ನಿರಾಕರಿಸಿಬಿಟ್ಟರು. ಇಲ್ಲಿನ ಹಲವಾರು ವಿಜ್ಞಾನಿಗಳು, ರಾಜಕಾರಣಿಗಳು ಹಾಗೂ ಅಧಿಕಾರಿ ವರ್ಗದವರು ಅವರನ್ನು ಪರಿಪರಿಯಿಂದ ಪೀಡಿಸಿದರೂ ಹಾಲ್ಡೇನ್ ಭಾರತವನ್ನು ಬಿಟ್ಟು ಹೋಗುವ ವಿಚಾರವನ್ನು ಕನಸಿನಲ್ಲೂ ಮಾಡಲಿಲ್ಲ. ಇಲ್ಲಿಯ ಪೌರತ್ವವನ್ನು ಪಡೆಯಲು ಅವರು ಬಹುವಾಗಿ ಪ್ರಯತ್ನಿಸಿದರು. ನಿಧಾನವಾಗಿ ವೃದ್ಧಾಪ್ಯದತ್ತ ಸಾಗುತ್ತಿದ್ದ ಹಾಲ್ಡೇನ್ ತಮಗೆ ಆಸನದಲ್ಲಿ ಕ್ಯಾನ್ಸರ್ ಆಗಿರುವ ವಿಚಾರ ತಿಳಿದಾಗ ಮಾಡಿದ್ದೇನು ಗೊತ್ತೆ? ಅದರ ಬಗ್ಗೆಯೇ ಲೇವಡಿ ಮಾಡಿ ಪದ್ಯವನ್ನು ಬರೆದುಬಿಟ್ಟರು. ರೋಗವನ್ನು ಅದರ ಪಾಡಿಗೆ ಬಿಟ್ಟು ತಮ್ಮ ಕೆಲಸಗಳನ್ನು ಹೆಚ್ಚಿಸಿಕೊಂಡರು. ಅಂತ್ಯ ಸಮೀಪಿಸಿದಾಗ ತಮ್ಮಲ್ಲಿದ್ದ ಹಣವನ್ನು ತಮ್ಮ ಸೇವಕರು, ವಿದ್ಯಾರ್ಥಿಗಳು, ಸೇವಾಸಂಸ್ಥೆಗಳ ಹೆಸರಿಗೆ ಬರೆದರು. ಮರಣಾನಂತರ ತಮ್ಮ ದೇಹವನ್ನು ವೈದ್ಯಕೀಯ ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ ಪುಣೆಯ ಮೆಡಿಕಲ್ ಕಾಲೇಜಿಗೆ ನೀಡಬೇಕೆಂದು ಸೂಚನೆಯಿತ್ತು ನಿರುಮ್ಮಳವಾಗಿ ಕಣ್ಣು ಮುಚ್ಚಿದರು.

ಅತ್ಯಧಿಕ ಜನರ ಅತ್ಯಧಿಕ ಸುಖ ಸರಕಾರದ ಗುರಿಯಾಗಬೇಕು. ಕಾರಾಗೃಹಗಳ ಸುಧಾರಣೆಯಾಗಬೇಕು. ಗುಲಾಮಗಿರಿ ತೊಲಗಬೇಕು. ಅಂತಾರಾಷ್ಟ್ರೀಯ ಸೌಹಾರ್ದ ಬೆಳೆಯಬೇಕು ಎಂದೆಲ್ಲಾ ಚಳವಳಿ ಮಾಡಿದ, ಉಪಯುಕ್ತವಾದದ ವಕ್ತಾರ ಜೆರಿಮಿ ಬೆಂಥಾಂ ೧೮೩೨ರ ಜೂನ್ ೬ ರಂದು ಲಂಡನ್ನಿನಲ್ಲಿ ಕಣ್ಣುಮುಚ್ಚಿದರು. ಸಾಯುವವರೆಗೂ ತಮ್ಮ ಇಷ್ಟಮಿತ್ರರೊಡನೆ ಶಾಂತ ಚಿತ್ತದಿಂದ ಮಾತಾಡುತ್ತಿದ್ದ ಬೆಂಥಾಂ, "ನಾನು ಕೊನೆಯುಸಿರೆಳೆದ ಮೇಲೆ ಈ ದೇಹವನ್ನು ವೈದ್ಯಕೀಯ ವಿದ್ಯಾರ್ಥಿಗಳು ನಿಮ್ಮ ಎದುರಿನಲ್ಲಿಯೇ ಛೇದಿಸಿ ಅಧ್ಯಯನ ನಡೆಸಬೇಕು" ಎಂದು ಹೇಳಿದರು. ಅವರ ಇಚ್ಛೆಯಂತೆಯೆ ದೇಹವನ್ನು ಕತ್ತರಿಸಿ ಅಭ್ಯಾಸ ಮಾಡಿದ ವಿದ್ಯಾರ್ಥಿಗಳು ಅವರ ಅಸ್ಥಿಪಂಜರ ಹಾಗೂ ಶಿರವನ್ನು ಸಂಸ್ಕರಿಸಿ ಅದಕ್ಕೆ ಉಡುಪುತೊಡಿಸಿ ಲಂಡನ್ ವಿಶ್ವವಿದ್ಯಾನಿಲಯದ ಸಂಗ್ರಹಾಲಯದಲ್ಲಿ ಕುರ್ಚಿಯೊಂದರ ಮೇಲೆ ಕೂರಿಸಿದರಂತೆ. ಅದು ಇಂದಿಗೂ ಹಾಗೆಯೇ ಇದೆಯಂತೆ. ●

(ವಿವಿಧ ಮೂಲಗಳಿಂದ)

## ಮದುವೆಯ ಷರತ್ತು

ಫಿಲಿಪ್ಪೈನ್ಸ್ ರಾಜಧಾನಿ ಮನಿಲಾದಿಂದ ಸುಮಾರು ೩೦೦ ಕಿಲೋಮೀಟರ್ ಉತ್ತರದಲ್ಲಿರುವ ಅಬರಾ ಪ್ರಾಂತದಲ್ಲಿ ಮದುವೆ ಮಾಡಿಕೊಳ್ಳಲಿಚ್ಛಿಸುವ ಪ್ರತಿಯೊಂದು ಜೋಡಿಯೂ ಅತ್ಯಂತ ಕಡಿಮೆ ಎಂದರೆ ಹತ್ತು ಗಿಡಗಳನ್ನಾದರೂ ನೆಟ್ಟು ಅವುಗಳನ್ನು ಚೆನ್ನಾಗಿ ಪೋಷಿಸಿ ಬೆಳೆಸುವ ಷರತ್ತನ್ನು ಪೂರ್ಣಗೊಳಿಸಬೇಕಾಗುತ್ತದೆ.

ಕಳೆದೆರಡು ವರ್ಷಗಳಲ್ಲಿ ಅಲ್ಲಿ ಸಾವಿರಾರು ಗಿಡಗಳನ್ನು ನೆಡಲಾಗಿದೆ. ಅವುಗಳನ್ನು ಪೋಷಿಸಿ ರಕ್ಷಿಸುವ ಕೆಲಸವನ್ನೂ ವಿವಾಹಿತ ಜೋಡಿಗಳು ಅತ್ಯಂತ ತನ್ಮಯತೆಯಿಂದ ಮಾಡುತ್ತಾ ಇದ್ದಾರೆ.

● **ವೆಂಕಟೇಶ ಗಂಗಾವತಿ**

### ನರಳುವಿಕೆ?

ಅಧ್ಯಯನವೊಂದರ ಫಲಿತಾಂಶವೇನು ಗೊತ್ತೆ? ರೋಗಪೀಡಿತರಲ್ಲಿ ನರಳುವಿಕೆ ಮತ್ತು ನಿಟ್ಟುಸಿರು ಬಿಡುವಂಥವರು ಮೌನದಿಂದ ಆ ತಾಪ-ಬಾಧೆಯನ್ನು ನುಂಗಿಕೊಳ್ಳುವವರಿಗಿಂತ ಹೆಚ್ಚು ಶೀಘ್ರವಾಗಿ ಗುಣಹೊಂದುತ್ತಾರೆ.

• ಪ್ರೊ. ಎನ್.ಆರ್. ಆಡೂರ

# ನಾನು 'ಆನಾತ್ಮ ವಶ'ನಾಗಿದ್ದೆ....

ಮಹಾವಿದ್ಯಾಲಯವೊಂದರಲ್ಲಿ ಸಾಮಾನ್ಯ ಉಪನ್ಯಾಸಕನಾಗಿದ್ದರೂ ಅದೇ ತಾನೆ ವಯಸ್ಸಿನ ಇಪ್ಪತ್ನಾಲ್ಕನೆಯ ಅಂಚನ್ನು ಮುಟ್ಟುತ್ತಿದ್ದ ನಾನು ಪುರಂದರಗಢದ ಎನ್.ಸಿ.ಸಿ. ಅಕ್ಯಾಡೆಮಿಯಿಂದ 'ಕಮೀಶನ್ಡ್ ಯಂಗ್ ಆಫೀಸರ್' ಎಂದು ಹೊರ ಬಂದಿದ್ದೆ. ತರಬೇತಿಯ ಸಮಯದಲ್ಲಿ ಭಾರತೀಯ ಸೈನ್ಯಪಡೆಯ ಅಧಿಕಾರಿ ವರ್ಗದವರು ಎಲ್ಲಿಲ್ಲದ ಧೈರ್ಯ-ಸಾಹಸಗುಣಗಳನ್ನು ನನ್ನಲ್ಲಿ ತುಂಬಿ ಕಳಿಸಿದ್ದರು. ಆದಾಗಲೇ ಖರೀದಿಸಿದ್ದ ಮೋಟಾರ್ ಸೈಕಲ್ ಮೇಲೆ ದೂರದವರೆಗೆ ಪ್ರಯಾಣ ಹೋಗುವ ತವಕ ನನ್ನದು. ಇದೇ ಸಮಯದಲ್ಲಿಯೇ ಡೆಹ್ರಾಡೂನಿನಲ್ಲಿ ತರಬೇತಿ ಮುಗಿಸಿಕೊಂಡು ಪಣಜಿಯಲ್ಲಿ ಪ್ರೊಬೇಶನರಿ ಅರಣ್ಯಾಧಿಕಾರಿಯಾಗಿ ಸೇರಿದ್ದ ನನ್ನ ಪರಮಮಿತ್ರ "ಡಿಕಿ" (ಮಿ.ಡಿಕಾಸ್ಟಾ)ಯ ಆಮಂತ್ರಣ ಬಂದೊಡನೆಯೇ ಮೋಟಾರ್ ಸೈಕಲ್ಲನ್ನು ಪಣಜಿಯವರೆಗೂ ಓಡಿಸಲು ನಿರ್ಧರಿಸಿಯೇ ಬಿಟ್ಟೆ.

ಗೋವೆ ಸ್ವತಂತ್ರ ಭಾರತದಲ್ಲಿ ವಿಲೀನಗೊಂಡು ಅದೇ ತಾನೇ ಮೂರು ವರ್ಷಗಳು ಕಳೆದಿದ್ದವು. ಅದುವರೆಗೆ ಪೋರ್ತುಗೀಜರಿಗೇ ಮೀಸಲಾಗಿದ್ದ ಗೋವೆಯನ್ನು ನೋಡುವ ಇಚ್ಛೆ ಕೂಡ ಬಲವಾಗಿತ್ತು. ಖಾನಾಪುರ-ಲೋಂಡಾ ಮಾರ್ಗವಾಗಿ ಅನಮೋಡ ಘಟ್ಟವನ್ನಿಳಿದರೆ ಗೋವಾದ ಗಡಿ ಪ್ರವೇಶಿಸಿದಂತೆಯೇ. ಮಧ್ಯಾಹ್ನ ಊಟ ಮುಗಿಸಿ ಸ್ವಲ್ಪ ನಿದ್ರೆ ಮಾಡಿ ಟೀ ಕುಡಕೊಂಡು ಮೂರು-ಮೂರುವರೆ ಗಂಟೆಗೆ ಮೋಟಾರ್ ಸೈಕಲ್ಲಿಗೆ ಕಿಕ್ ಹೊಡೆದರೆ ಸಾಯಂಕಾಲ ಏಳು ಗಂಟೆಗೆ "ಡಿಕಿ"ಯ ಎದುರಿಗೆ ನಿಲ್ಲಬಹುದೆಂಬ ಅಂದಾಜಿನಿಂದ ಕಿಟ್‌ಬ್ಯಾಗ್ ತುಂಬಿಕೊಂಡೆ. ಕಣ್ಣಿಗೊಂದು ಗಾಗಲ್, ತಲೆಯ ಮೇಲೊಂದು ಹೆಲ್ಮೆಟ್, ಕೈ ಮುಚ್ಚುವಂತೆ ಗ್ಲೌಜ್ ಧರಿಸಿ ಸಜ್ಜಾಗಿ ನಿಂತದ್ದನ್ನು ಪಕ್ಕದ ಮನೆಯ ಪದ್ಮಾ ಆಂಟೀ ನೋಡೇಬಿಟ್ಟರು. "ಮಳೆಗಾಳಿ ದಿನಗಳಪ್ಪಾ, ಘಟಘಟಿ ಮ್ಯಾಲೆ ದೂರ ಪ್ರವಾಸ ಮಾಡಬೇಡಾ" ಅಂತ ಹಿತೋಪದೇಶ ಮಾಡಿದರು. ಆದರೆ ನನ್ನ ನಿಶ್ಚಯ ಬದಲಾಗಲಿಲ್ಲ. ಕಿಕ್ ಹೊಡೆದಾಗಲೇ ನಾಲ್ಕೂ ಕಾಲು ಗಂಟೆಯಾಗಿತ್ತು. ನನ್ನ ರಿಸ್ಟ್‌ವಾಚ್‌ನಲ್ಲಿ ಗೋವಾದ ಸ್ಟೇಟ್ ಹೈವೇಗೆ ಬಂದೊಡನೆ ಪೆಟ್ರೋಲ್ ತುಂಬಿಸಬೇಕೆಂದು ಬಂಕೊಂದರ ಮುಂದೆ ನಿಂತೆ. "ಐದು ಲೀಟರ್" ಎಂದೊಡನೆಯೇ ಪಕ್ಕದಲ್ಲಿದ್ದವ "ಏನು; ಗೋವಾ ಟ್ರಿಪ್ ಅಂತ ಕಾಣುತ್ತೆ," ಅಂದ. ಕಣ್ಣೆತ್ತಿ ನೋಡಿದೆ. ಧನಂಜಯ! ಕಾಲೇಜು ಸಹಪಾಠಿ. ಕೆಡೆಟ್ ಅಂಡರ್ ಆಫೀಸರ್‌ನೂ ಆಗಿದ್ದವ. ಹಿಮಾಲಯದಲ್ಲಿ ಟ್ರೆಕಿಂಗ್ ಮೌಂಟನಿಯರಿಂಗ್ ಮಾಡಿ ಬಂದಿದ್ದ ಧೀರ ಆತ. "ಹೌದು ಗೋವಾಕ್ಕೆ ಹೊರಟಿದೀನಿ, ಸಂಜೆ ಏಳೂವರೆಗಂಟೆಗೆ ಪಣಜಿ ತಲುಪಿದರಾಯಿತು," ಅಂದೆ.

"ಹೇಗೆ? ಖಾನಾಪೂರ ಲೊಂಡಾ ಮೇಲಿಂದನಾ?"

"ಹೌದು."

"ಅಲ್ಲಿಯವರೆಗೂ ಯಾಕೊ, ಇಲ್ಲೇ ಪೀರನವಾಡಿಯಿಂದ ಡೈವರ್‌ಶನ್ ತಗೊಂಡ್ರೆ ಕಣಕುಂಬಿ ಮಾರ್ಗವಾಗಿ ಚೋರ್ಲಾ ಘಟ್ಟ ಇಳಿದರೆ ಗೋವಾ ಬಾರ್ಡರು ಬಂದೇ ಬಿಡುತ್ತದೆ. ೪೫ ಕಿಲೋಮೀಟರ್ ಕಡಿಮೆಯಾಗುತ್ತದೆ. ಅಲ್ಲದೇ ಎವರ್‌ಗ್ರೀನ್ ಜಂಗಲ್ಲಿನ ಸೊಬಗನ್ನೂ ಸವಿಯಬಹುದು," ಎಂದ. (ರಾಜ್ಯ ಸರಕಾರ ಈ ರಸ್ತೆಯ

ಕಾರ್ಯವನ್ನು ೧೯೯೨ರಲ್ಲಿ ಕೈಗೆತ್ತಿಕೊಂಡಿದೆ.)

ಅವನಿಗೆ ಧನ್ಯವಾದಗಳನ್ನು ಹೇಳುತ್ತಾ ಕಣಕುಂಬಿಯ ಮಾರ್ಗವನ್ನೇ ಹಿಡಿದೆ. ಮೂರು ನಾಲ್ಕು ಚಿಕ್ಕ ಹಳ್ಳಿಗಳನ್ನು ದಾಟಿದೆ. ಆಕಾಶದಲ್ಲೆಲ್ಲ ಆಗಲೇ ಕಾರ್ಮೋಡಗಳು ಕಾಣಿಸತೊಡಗಿದ್ದವು. ಕಿವಿ ಗಡಚಿಕ್ಕುವಂಥ ಗುಡುಗು-ಕಣ್ಣು ಕುಕ್ಕಿಸುವ ಮಿಂಚುಗಳು ನಾಲ್ಕೂ ದಿಕ್ಕಿನಿಂದಲೂ ಮುತ್ತತೊಡಗಿದವು. ಹನಿಯೊಡೆದೇ ಬಿಟ್ಟಿತು. ಹಲೆಟ್ಟಿಗೆ ಆಣೆಕಲ್ಲೊಂದು ಬಡಿಯಿತು. ಭರಣಿ ನಕ್ಷತ್ರದ ಮಳೆಯ ವರ್ಣನೆಯನ್ನು ಸಾಹಿತ್ಯದಲ್ಲಿ ಮಾತ್ರ ಓದಿದ್ದು ಮಳೆಯ ಆರ್ಭಟವನ್ನು ಮನೆಯಂಗಳದಲ್ಲಿಯೇ ನಿಂತು ನೋಡಿ ತೋಯಿಸಿಕೊಂಡು ಕುಣಿದಾಡಿದ್ದು ನೆನಪಿಗೆ ಬಂದು ಹರ್ಷವಾಯಿತು. ಆದರೀಗ? ಅದೇ ಭಯಂಕರವಾಗಿ ತೋರತೊಡಗಿತು. ಖಡ್.... ಖಡ್..... ಖಡ್..... ಸಿಡಿಲೊಂದು ಸಮೀಪದಲ್ಲಿಯೇ ಸಿಡಿದಾಗಂತೂ ಗಾಬರಿಯಾಯಿತು. ತೊಯ್ದು ತಪ್ಪಡಿಯಾದೆ. ಪದ್ಮಾ ಆಂಟಿಯ ಎಚ್ಚರಿಕೆ ಮಾತು ನೆನಪಿಗೆ ಬಂತು.

ಆದರೂ ವಾಹನವನ್ನು ಓಡಿಸುತ್ತಲೇ ಇದ್ದ ನಾನು ಬೇರೊಂದು ತಪ್ಪು ಹಾದಿಯಲ್ಲಿ ಹೋದೇನೆಂಬ ಭಯದಿಂದ ನಿಲ್ಲಿಸಿಯೇ ಬಿಟ್ಟೆ. ಮಳೆಯ ಆರ್ಭಟ ಹೆಚ್ಚುತ್ತಲೇ ಹೋಯಿತು. ಸುರಿಯುತ್ತಿರುವ ನೀರು ಹಳ್ಳವಾಗಿ ಕಾಲ್ಕೆಳಗೇ ಹರಿಯತೊಡಗಿತು. ಕತ್ತಲಾಯಿತು. ಮಳೆ ನಿಲ್ಲಲಿಲ್ಲ. ಅದೇ ರಾತ್ರಿ ಪಣಜಿ ಮುಟ್ಟುವ ಸಂಭವವಂತೂ ಎಳಷ್ಟೂ ಇರಲಿಲ್ಲ. ಪ್ರಯಾಣ ಮುಂದುವರಿಸುವುದು ಸರಿಕಾಣಲಿಲ್ಲ. ತಿರುಗಿ ಮನೆಕಾಣುವುದು ನನ್ನ ಹುಮ್ಮಸ್ಸಿಗೆ ಅವಮಾನ. ಆದರೆ ರಾತ್ರಿ ಕಳೆಯುವದೆಂತು? ಅದೇ ದೊಡ್ಡ ಪ್ರಶ್ನೆ. ದಿಕ್ಕು ತೋಚದಾಯಿತು.

ಸುತ್ತಮುತ್ತಲಿನ ನೀರು ತುಂಬಿದ ತಗ್ಗು-ಹಳ್ಳಗಳಲ್ಲಿ ಬರಿ ಕಪ್ಪೆಗಳ ಕೋರಸ್. ಗಂಟೆ ರಾತ್ರಿ ಒಂಭತ್ತೂಕಾಲು! ಮಳೆ ನಿಲ್ಲುವ ಲಕ್ಷಣಗಳು ಕಂಡುಬರತೊಡಗಿದವು. ದೆಸೆಗಾಣದೇ ಸುತ್ತಮುತ್ತ ಅತ್ತಿತ್ತ ತಿರುಗಾಡಿ ಪುನಃ ಮೋಟಾರ್‌ಸೈಕಲ್ ಬಳಿಗೇ ಬಂದೆ. ಅದರ ಮೇಲೆ ಉದ್ದವಾಗಿ ಮೈಚಾಚಿ ಮಲಗಿದೆ. ನಿದ್ರೆಯಂತೂ ಸಮೀಪಕ್ಕೇ ಬರಲಿಲ್ಲ. ಬದಲಾಗಿ ಇನ್ನಷ್ಟು ಮೈಕೈ ಸುಗ್ಗಾದವಷ್ಟೇ. ಎದ್ದು ಕುಳಿತುಕೊಂಡೆ. ದೂರದಿಂದ ಏನೋ ಬೆಳಕು ನನ್ನೆಡೆ ಬರುತ್ತಿದ್ದಂತೆ ಕಂಡಿತು. ಕಣ್ಣುಜ್ಜಿಕೊಂಡು ನೋಡಿದೆ. ಹೌದು, ನನ್ನೆಡೆಗೇ ಬರುತ್ತಿದೆ. ಮನಸ್ಸಿಗೆ ತುಸು ಧೈರ್ಯ ಬಂದಂತಾಯಿತು.. ಸಮೀಪದಲ್ಲೆಲ್ಲಾದರೂ ಮನೆಗಳಿರಬೇಕೆಂದು ತರ್ಕಿಸಿದೆ.

ಟಾರ್ಚ್ ಹೊತ್ತಿಸಿ ಎರಡೆಜ್ಜೆ ಮುಂದಾದೆ. ಬೆಳಕು ಬರುತ್ತಿರುವ ಸ್ಥಳ ನನ್ನಿಂದ ಬಹಳ ದೂರವೇನೂ ಇರಲಿಲ್ಲ. ಸ್ವತಃ ಮುಂದೆ ಸಾಗಿ ನಿಜಸ್ಥಿತಿಯನ್ನು ಕಂಡುಕೊಳ್ಳಬೇಕೆನಿಸಿತು. ಮುಂದೊಂದು ಒಬ್ಬರೇ ನಡೆದು ಹೋಗುವಷ್ಟು ಚಿಕ್ಕ ಕಾಲ್ದಾರಿ. ಬಹುಶಃ ಇದು ಆ ಬೆಳಕಿನವರೆಗೆ

**“ನನ್ನ ಬಟ್ಟೆ ಬದಲಾಗಿತ್ತು, ವಾಚು ಹಳೆಯ ಕಾಲದ್ದಾಗಿತ್ತು, ಧ್ವನಿ-ಹಾವಭಾವಗಳೆಲ್ಲ ನನ್ನವಲ್ಲ ಎನ್ನಿಸುವಷ್ಟು ಮಟ್ಟಿಗೆ ಬೇರೆಯೇ ಆಗಿದ್ದವು!”**

ಹೋಗುತ್ತಿರಬಹುದು. ಮುಂದೆ ಅದೇ ದೊಡ್ಡ ರಸ್ತೆಗೂ ಕೂಡಿಕೊಳ್ಳುತ್ತದೆ ಎಂದೆನಿಸಿತು. ಕಾಲ್ದಾರಿಯ ಸುತ್ತಲೂ ಎತ್ತರವಾಗಿ ಬೆಳೆದು ನಿಂತ ಮರಗಳು ಕಂಟಿಗಳು, ಕೆಳಗೆ ಹಸಿಹುಲ್ಲು, ಇವುಗಳೊಟ್ಟಿಗೆ ಬಿದಿರುಗಳ ಕೊಂಪೆಗಳು ಮುಂದೆ ಹೆಜ್ಜೆಯನ್ನಿಡದಂತಿವೆ. ಧೈರ್ಯ ತಂದುಕೊಂಡು ಮುಂದೆ ನಡೆದೆ. ಮೊಳಕಾಲವರೆಗೆ ಹರಿಯುತ್ತಿರುವ ನೀರನ್ನು ಪಚಪಚ ತುಳಿಯುತ್ತಲೇ ಪಾರಾಗಿ ಮುಂದಿನದೊಂದು ದಿಬ್ಬವನ್ನೇರಿ ನಡೆದೆ. ಕೊನೆಗೂ ಒಂದು ಮನೆ ಕಂಡಿತು. ಅದಕ್ಕೆ ಮನೆ ಎಂದರೆ ತಪ್ಪಾದೀತು. ಕಂಪು ಮಣ್ಣಿನ ದೊಡ್ಡ ದೊಡ್ಡ ಹೆಂಟೆಗಳನ್ನು ಜೋಡಿಸಿ ಮೇಲೊಂದೆರಡು ತಗಡು ಹೊದಿಸಿದ ಮಾಳಿಗೆಯಂಥದನ್ನು

ಬಾಗಿಲು ಅರ್ಧಮರ್ಧ ತೆರೆದಂತಿದೆ. ಒಳಗೊಂದು ಕಂದೀಲು ಉರಿಯುತ್ತಿದೆ. ಸಮೀಪದಲ್ಲೊಂದು ಹೊರಸು. ಆದರೆ ನಿಶ್ಶಬ್ದ.

"ಯಾರಾದ್ರೂ ಇದ್ದೀರಾ?" ಟಾರ್ಚನ್ನು ಅದೇ ದಿಶೆಗೆ ಬೆಳಗಿಸುತ್ತ ಕೂಗಿಕೊಂಡೆ. ಕೆಲಕ್ಷಣಗಳ ನಂತರ ನೀಳ ಗಡ್ಡ-ಮೀಸೆಯ ವ್ಯಕ್ತಿಯೊಬ್ಬ ಟಾರ್ಚಿನ ಬೆಳಕಿಗೆ ಎದುರಾಗಿ ಬಂದ. ಟಾರ್ಚಿನ ಬೆಳಕನ್ನು ಕೆಳಗೆ ಮಾಡಿದೆ.

"ಎಲ್ಲಿಂದ ಬಂದಿರಿ ಅಣ್ಣಾ ಅವರೇ?"

ನನಗಾದ ದುರ್ದೆಶೆಯನ್ನೆಲ್ಲ ಸಂಕ್ಷಿಪ್ತದಲ್ಲಿ ತೋಡಿಕೊಂಡೆ.

"ಇಲ್ಲಿ ಸಮೀಪದಲ್ಲೆಲ್ಲಾದ್ರೂ ಇದೊಂದು ರಾತ್ರಿ ಕಳೆಯಲು ಏನಾದ್ರೂ ಅನುಕೂಲ ಉಂಟೆ? ಬೇಕೆಂದಷ್ಟು ದುಡ್ಡು ಕೊಡಲೂ ಸಿದ್ಧನಿರುವೆ?" ಎಂದೆ.

"ಬಂಗ್ಲೆಯಲ್ಲುಳಿದುಕೊಳ್ಳುವಿರಾ?"

'ಬಂಗ್ಲೆ? ಎಲ್ಲುಂಟು?' ಎಂದು ಅತ್ತಿತ್ತ ನೋಡಿದೆ.

ಇದುವರೆಗೂ ಕಂದೀಲಿನ ಮಂದ ಪ್ರಕಾಶ ಹಾಗೂ ಟಾರ್ಚಿನಿಂದ ಒಂದೇ ನಿಟ್ಟಿನಲ್ಲಿ ಬರುವ ಪ್ರಕಾಶಕಂಬಗಳೆರಡನ್ನೇ ಕಾಣುತ್ತ ನಿಂತಿದ್ದ ನಾನು ಅದನ್ನು ಕಂಡಿರಲೇ ಇಲ್ಲ. ಪಕ್ಕದಲ್ಲಿಯೇ ಬ್ರಿಟಿಶರ ಕಾಲದಲ್ಲಿ ನಿರ್ಮಿತಗೊಂಡ ಭವ್ಯವಾದ ಹಳೆಯದೊಂದು ಬಂಗ್ಲೆ ಕಂಡುಬಂತು. ಅದನ್ನೇ ನೋಡುತ್ತ ನಿಂತು, "ಇದೇನಾ ಬಂಗ್ಲೆ?" ಎಂದೆ.

"ಹೌದ್ರಣ್ಣ; ಆದ್ರೆ ಹಾಸಿಗೆ-ಗೀಸಿಗೆ ಏನೂ ಇರಾಕಿಲ್ಲ!"

"ಪರವಾಗಿಲ್ಲ! ಮಂಚವೊಂದು ಸಿಕ್ಕರೆ ಒಳ್ಳೆಯದು."

"ಅಷ್ಟಿದೆ."

"ನಿನ್ನ ಮನೆಯಲ್ಲಿ ಅಡಿಗೆ ಮಾಡಿರಬಹುದಲ್ಲಾ?" ಅಂದೆ, ಹೊಟ್ಟೆಯ ಮೇಲೆ ಕೈ ಆಡಿಸಿಕೊಂಡು. ಆ ಮನುಷ್ಯ ನಕ್ಕು "ಒಣ ರೊಟ್ಟಿ-ಬ್ಯಾಳೀ ಪಲ್ಲೆ-ಈರುಳ್ಳಿ ಮಾತ್ರ ಇದೆ ಅಣ್ಣಾ ಬೇಕಾದ್ರೆ..."

"ಆಯ್ತು, ರೊಟ್ಟೀನೇ ಅಲ್ಲವಾ! ತಿಂತೀನಿ. ಬ್ಯಾಳೀ ಪಲ್ಲೆ ಅಂತೂ ತುಂಬಾ ಇಷ್ಟ ನನಗೆ."

ಮೊದಲಿನ ಕಾಲದಲ್ಲಿ ಹೇಗಿತ್ತೋ ದೇವರೇ ಬಲ್ಲ. ಆದ್ರೆ ಈಗ ಮಾತ್ರ "ಬಂಗ್ಲೆ" ಎಂಬ ಹೆಸರು ಮಾತ್ರ ಉಳಿದಿತ್ತು. ಬ್ರಿಟಿಶ್ ಸಾಹೇಬರ ಕಾಲದಲ್ಲಿ ನಿರ್ಮಿಸಲ್ಪಟ್ಟದ್ದಾದ್ದರಿಂದ ಆಕಾರ ಮಾನದಲ್ಲಿ ಭವ್ಯ ಕಟ್ಟಡವೆ. ಮಾಳಿಗೆಯೂ ಬಲು ಎತ್ತರವೆ. ಫರ್ನಿಚರ್ ಎಂದೆನಿಸಿಕೊಳ್ಳಲು ಒಂದು ಅಲುಗಾಡುತ್ತಿರುವ ಚರ್-ಚರ್ ಶಬ್ದ ಮಾಡುವ ಮಂಚ; ಮೂಲೆಯಲ್ಲಿ ಒಂದು ಜೀರ್ಣವಾದ ಟೇಬಲ್; ಅದರೆದುರೊಂದು ಮೂರೂವರೆ ಕಾಲಿನ ಖುರ್ಚಿ ಇಷ್ಟೇ.....

ಚೌಕಿದಾರನು ನನ್ನ ಸಲುವಾಗಿ ಕಂದೀಲೊಂದನ್ನು ಹೊತ್ತಿಸಿತಂದು ಟೇಬಲ್ ಮೇಲಿಟ್ಟ. "ನಿನ್ನ ಹೆಸರೇನು?" ಸಾಹೇಬರ ದರ್ಪದಿಂದಲೇ ಕೇಳಿದೆ.

"ಕಾದೀರ್‌ಭಾಯಿ ಅಣ್ಣಾವ್ರೆ. ಆದ್ರೆ 'ವಾಚಮನ್' ಅಂತ್ಲೇ ಎಲ್ರೂ ಕರೀತಾರೆ."

"ಮೊದ್ಲು ಈ ಬಂಗ್ಲೆಯಲ್ಲಾರಾದ್ರೂ ಮನುಷ್ಯರು ಉಳಿದುಕೊಂಡಿದ್ರಾ?"

ಏನೂ ಉತ್ತರ ಕೊಡದೇ ಚೌಕೀದಾರ ನಕ್ಕುಬಿಟ್ಟ.

"ಭೂತಗಳೇನಾದ್ರೂ ಓಡಾಡ್ತಾವಾ?" ಎಂದೆ.

"ಯಾಹ್ ಅಲ್ಲಾಹ್!... ಎಷ್ಟೊ ಜನ ಬಂದಿದ್ರು. ಆದ್ರೆ ಇಂಥಾ ಪ್ರಶ್ನೆ ಯಾರೂ ಮಾಡಿರಲಿಲ್ಲಣ್ಣಾವ್ರೆ."

"ಎಷ್ಟು ವರ್ಷದ ಹಿಂದಿನ ಬಂಗ್ಲೆ ಇದು?"

ಮಂಚ ಜಾಡಿಸುತ್ತ ಕಾದೀರ್‌ಭಾಯಿ, "ನನ್ನ ಅಜ್ಜನ ಕಾಲದಿಂದಲೂ ಬಂಗ್ಲೆ ಇಲ್ಲೇ ಐತ್ರಣ್ಣಾ" ಅಂದ.

ಅಂದ್ರೆ ಸುಮಾರು ನೂರಿಪ್ಪತ್ತೈದು ವರ್ಷ ಆಗಿರಬೇಕೆಂದು ಅಂದಾಜು ಮಾಡಿಕೊಂಡೆ. ಕಾದೀರ್‌ಭಾಯಿಯ ಕೈಯಿಂದ ಮಾಡಲ್ಪಟ್ಟ ರೊಟ್ಟಿ ಬ್ಯಾಳಿಯನ್ನು ಹಸಿದ ಹೊಟ್ಟೆಯಲ್ಲಿಳಿಸಿ ನೀರು ಕುಡಿದು ಮಂಚದ ಮೇಲೆ ಉರುಳಿ ಕೈಗಡಿಯಾರ ನೋಡಿಕೊಂಡಾಗ ರಾತ್ರಿಯ ಹನ್ನೊಂದು ಗಂಟೆಗೆ ಇಪ್ಪತ್ತು ನಿಮಿಷಗಳು ಬಾಕಿ ಇದ್ದವು. ಡಿಕಾಸ್ಟಾನಿಗೆ ಇಂದೇ ಸಾಯಂಕಾಲ ಬಂದು ಮುಟ್ಟುವೆನೆಂದು ಟೆಲಿಗ್ರಾಂ ಕೊಟ್ಟದ್ದು ನೆನಪಾಗಿ ಆತ ಊಟ ಮಾಡದೇ ನನಗಾಗಿ ಕಾಯುತ್ತಿರಬೇಕೆಂದು

ತೊಳೆದು ಮನಸ್ಸಿಗೆ ಬೇಜಾರಾಯಿತು.

ಕಂದೀಲನ್ನು ಪಕ್ಕದ ಬಾಥ್ರೂಮ್‌ನಲ್ಲಿಟ್ಟೆ. ಬಾಗಿಲಿನಿಂದ ಬರುವ ಬೆಳಕು ರಾತ್ರಿಯಲ್ಲಿ ಸಾಕಾಗುವಷ್ಟಿತ್ತು. ಹೆಚ್ಚು ಬೆಳಕಿದ್ದರೆ ನಿದ್ರೆ ಬರುವಂತಿಲ್ಲ. ಈಗ ಮಾತ್ರ ಎಲ್ಲಕ್ಕಿಂತಲೂ ಹೆಚ್ಚಾಗಿ ಬೇಕಾದದ್ದು ನಿದ್ರೆ.

ಮಳೆಯ ಆರ್ಭಟ ಕಡಿಮೆಯಾಯಿತು. ಕಪ್ಪೆಗಳ ಸಂಗೀತಕ್ಕೆ ಮಾತ್ರ ಅನಿವಾರ್ಯವಾಗಿ ಹೊಂದಿಕೊಂಡೆ. ಹಾಗೇ ಕಣ್ಣುಗಳು ಮುಚ್ಚಿಕೊಂಡವು.

ಆದರೆ ಅಕಸ್ಮಾತ್ ಎಚ್ಚರವಾಯಿತು. ಎಷ್ಟೊತ್ತಿನವರೆಗೆ ನಿದ್ರೆಯಾಗಿತ್ತೋ ಗೊತ್ತಿಲ್ಲ. ಬಾಗಿಲಲ್ಲಿ ಖಟ್... ಖಟ್ ಶಬ್ದವಾಗತೊಡಗಿತ್ತು. ಒಳಗಿನಿಂದ ಕೊಂಡಿಮಾತ್ರ ಹಾಕಿದ್ದೇ ಇತ್ತು. ಮಲಗುವ ಮುಂಚೆ ನಾನೇ ಬಂದು ಮಾಡಿದ್ದೆ. ಹೊರಗಿ



ನಿಂದ ನಾಯಿ ಕೆದರುತ್ತಿರಬಹುದೆಂದೆನಿಸಿತು. ಹಿಂಸ್ರ ಮೃಗವೇನಾದರೂ..... ಎಂದೂ ತುಸು ಹೆದರಿಕೊಂಡೆ. ತುಸು ಸಮಯದ ನಂತರ ಶಬ್ದ ನಿಂತಿತು. ಒಂದೆರಡು ನಿಮಿಷ ಎಚ್ಚರಿದ್ದು ಕಣ್ಣು ಮುಚ್ಚಿಕೊಂಡ ಒಂದೆರಡು ಕ್ಷಣದಲ್ಲಿಯೇ ಎಲ್ಲೊ ನಾಯಿ ಬೊಗಳಿತು. ಎದ್ದು ಕೂತೆ. ನಿದ್ರೆ ಪೂರ್ಣ ಹಾರಿಬಿಟ್ಟಿತು. ಧ್ವನಿಯಿಂದಲೇ ಹೇಳಬಹುದಿತ್ತು ಒಳ್ಳೆ ಜಾತಿಯ ವಿದೇಶೀ ನಾಯಿ ಎಂದು. ಬೆಳಗಾವಿಯಲ್ಲಿ ನನ್ನ ಮನೆಯಿಂದ ಅನತಿದೂರ ದಲ್ಲಿಯೇ ಕರ್ನಲ್ ಅಳ್ವಾರಿಸ್ ಸಾಹೇಬರ ಮನೆ ಯಲ್ಲಿನ ವಿದೇಶೀ ನಾಯಿಯೂ ಇದೇ ರೀತಿ ಬೊಗಳುತ್ತಿತ್ತು. ಜಂಗಲ್ಲಿನಲ್ಲಿ ಇಂಥ ವಿದೇಶೀ ನಾಯಿಯನ್ನು ಯಾರು ಸಾಕಿರಬಹುದು? ಬಾಗಿಲು ತೆರೆದು ನೋಡೇ ಬರುವಾ ಎಂದೆನಿಸಿತು. ಮರು ಕ್ಷಣದಲ್ಲಿಯೇ ಛೆ, ಒಂದು ನಾಯಿಯ ಬೊಗಳು ವಿಕೆಗೆ ಇಷ್ಟು ಮಹತ್ವ ನೀಡುವುದರಲ್ಲೇನಿದೆ ಅರ್ಥ? ಎಂದುಕೊಂಡು ನಿದ್ರೆಗೆ ತೊಡಗುವ ಪ್ರಯತ್ನಕ್ಕಿಳಿದೆ.

ಕಿಟಕಿಯಿಂದ ಚಂದ್ರಕಿರಣಗಳು ಸೇರಿ ಮಂಚದ ಮೇಲೆಯೇ ಬೀಳತೊಡಗಿದವು. ಮಲ ಗಿದಲ್ಲಿಯೇ ಕೈ ಚಾಚಿ ಮುಂದೆ ತಂದುಕೊಂಡು ಮುಂಗೈ ನೋಡಿಕೊಂಡೆ. ಎದೆ ಧಸಕ್ಕೆಂದಿತು. ಕೈಯಲ್ಲಿ ಗಡಿಯಾರವೇ ಇಲ್ಲ! ಆಟೋಮ್ಯಾಟಿಕ್ ಗಡಿಯಾರವಾಗಿದ್ದರಿಂದ ಮಲಗಿದಾಗಲೂ ಕೈಯಿಂದ ನಾನದನ್ನು ಕಳಚುತ್ತಿರಲೇ ಇಲ್ಲ. ಆದರೆ ಹೋಯಿತೆಲ್ಲಿ? ತಲೆದಿಂಬಿನ ಕೆಳಗೆ ಕೈಯಾಡಿಸಿ ನೋಡಿದೆ. ಅಲ್ಲೂ ಇಲ್ಲ! ಬಗ್ಗಿ ಮಂಚದ ಕೆಳಗೆ ಕಣ್ಣರಳಿಸಿ ನೋಡಿದೆ. ನನ್ನ ಕಿಟ್‌ಬ್ಯಾಗೂ ಮಾಯ ವಾಗಿದೆ. "ವಾಚ್‌ಮನ್.... ಕಾದೀರ್‌ಭಾಯಿ..." ಜೋರಾಗೇ ಕೂಗಿಕೊಂಡೆ. ಇನ್ನೊಮ್ಮೆ ಕೂಗಿದೆ. ಉತ್ತರವಿಲ್ಲ! ವರಾಂಡದಲ್ಲಿ ಹೋಗಿ ಕೂಗಬೇ ಕೆಂದು ಹೊರಟರೆ ಬಾಗಿಲಿಗೆ ಕೊಂಡಿ. ಮಲಗುವ ಮುಂಚೆ ನಾನು ಹಾಕಿದಂತೆಯೇ ಅದು ಭದ್ರವಾ ಗಿದೆ. ಕಿಟಕಿಗಳ ಬಾಗಿಲು ಬೋಲ್ಟ್‌ಗಳೂ ಹಾಗೇ ಇವೆ. ಹಾಗಾದರೆ ಕಳ್ಳ ಎಲ್ಲಿಂದ ಬಂದಿರಬೇಕು? ಬಾಗಿಲು ತೆರೆಯಲು ಹೋದೆ.

ಅರೆ, ಇದೇನು? ಬನಿಯನ್ ಮೇಲೆ ಮಲ ಗಿದ್ದ ನನ್ನ ಮೈಮೇಲೆ ಈಗ ಉದ್ದ ತೋಳಿನ ನೈಟ್‌ಗೌನು! ಇದು ಹೇಗೆ? ಆಶ್ಚರ್ಯ! ಬಾಗಿ ಲನ್ನು ಜಗ್ಗಿ ತೆಗೆದು ಕೂಗಿದೆ; "ವಾಚಮನ್...." ನನ್ನ ಧ್ವನಿ ನನಗೇ ವಿಚಿತ್ರವೆನ್ನಿಸತೊಡಗಿತು. ಉಚ್ಚಾರ ಬೇರೇ ರೀತಿಯೇ ಆಗಿದೆ. ನಾನು ಮಿಶನರಿ ಸ್ಕೂಲಿನಲ್ಲಿ ಎಂದೂ ಓದಿದವನಲ್ಲ. ಕನ್ನಡ ಭಾಷೆಯನ್ನೇ ಮಾತನಾಡುತ್ತಿರುವೆನೊ ಇಲ್ಲವೋ ಎಂಬ ಸಂಶಯ ಬರತೊಡಗಿತು. ನನ್ನ ಗಂಟಲಿನಿಂದ ಇಂಗ್ರೇಜೀ ಸಾಹೇಬರ ಗಡುಸು ಧ್ವನಿ!! ಕಾದೀರ್ ಭಾಯಿಯಾದರೂ ಎಲ್ಲಿ? ರಾತ್ರಿ ಕಂಡವನು ಈಗೆಲ್ಲಿ ಹೋದ? ಅವನ ಮನೆ ಎಲ್ಲಿ?... ಬಂಗ್ಲೇದ ಎದುರು ವಿಶಾಲವಾದ ಬಯಲು ದೂರದಲ್ಲೊಂದು ಚಿಮಣಿಯ ಉರಿ ಕಾಣುತ್ತಿದೆ. ಎಲ್ಲೆಡೆಯಲ್ಲಿ ಅಸ್ವಾಭಾವಿಕ ನಿಶ್ಶಬ್ದ ಪಸರಿಸಿದೆ, ಅದರೊಟ್ಟಿಗೆ ನಾನೂ ಬದಲಾಗಿಬಿ ಟ್ಟಿದ್ದೆ. ಎಂಥದಕ್ಕೂ ಅಂಜದಿರುವ ನಾನು ಆ ಕ್ಷಣಕ್ಕೆ ಬೆವೆತು ನೀರಾದೆ. ಒಳಗೆ ಬಂದರೆ ಇನ್ನೊಂದು ಆಶ್ಚರ್ಯ.....

ಕತ್ತಲಾಗಿದ್ದ ಆ ಕೋಣೆಯಲ್ಲಿನ ಎಲ್ಲ ವಸ್ತುಗ ಳನ್ನೂ ನಾನೀಗ ಸ್ಪಷ್ಟವಾಗಿ ನೋಡಬಲ್ಲೆ, ನಾನು ಮಲಗಿದ್ದ ಮುರುಕು ಮಂಚ ಹಳೆಯದಾಗಿರದೇ ಸುಂದರ ರೋಜ್ ಉಡ್ಡಿನ ಕಾಟ್ ಆಗಿದೆ. ಅದರ ಮೇಲೆ ಶುಭ್ರವಾದ ಬೆಡ್‌ಶೀಟು ಹರಡಲ್ಪಟ್ಟಿದೆ. ಅದರ ಅಂಚಿಗೆಲ್ಲ ಝಾಲರಿಯುಂಟು. ನಾನು ಹಾಕಿಕೊಂಡಿದ್ದ ಸೊಳ್ಳೆ ಪರದೆ ಮಾಯವಾಗಿದೆ. ಮೂಲೆಯಲ್ಲಿದ್ದ ಮುರುಕು ಟೇಬಲ್ ಹಳೆಯದಾ ಗಿರದೇ ಮಿರಿಮಿರಿ ಮಿಂಚುವ ಪಾಲಿಶ್ ಮಾಡಿ ದಂತಿದೆ. ಅದರ ಮೇಲೆ ಕಾದೀರ್ ಭಾಯಿ ಇಟ್ಟ ಕಂದೀಲಿನ ಬದಲು ಸುಂದರ ನಕ್ಷೆಯುಳ್ಳ ಬ್ರಿಟಿಶ್ ಮಾದರಿಯ ಲ್ಯಾಂಪು ಇನ್ನೇನೇನೋ ವಸ್ತುಗಳು ಕಾಣತೊಡಗಿವೆ. ಒಂದು ಮೂಲೆಯಲ್ಲಿ ಎರಡು ಟ್ರಂಕುಗಳಿವೆ. ಪಕ್ಕದಲ್ಲಿ ಬಟ್ಟೆಗಳನ್ನೊಣಗಿಸಲು ಹಾಕುವ ತೇಗಿನ ಕಟ್ಟಿಗೆಯ ರ್‍ಯಾಕೊಂದಿದೆ. ಅದರ ಮೇಲೊಂದು ಉದ್ದವಾದ ಕೋಟು ತೂಗು ಹಾಕಲ್ಪಟ್ಟಿದೆ. ಅದಕ್ಕೆ ತೊಡಿಸಿಟ್ಟಂತೆ ವಿಚಿತ್ರವಾ ದೊಂದು ಟೊಪ್ಪಿಗೆಯೂ ಇಡಲ್ಪಟ್ಟಿದೆ. ಒಂದು ಚಕಚಕ ಹೊಳೆಯುವ ಹಂಟರ್ ಚಾಬೂಕು ಕೂಡ ಟ್ರಂಕಿನ ಮೇಲೆ ಶೋಭಿಸುತ್ತಿದೆ. ಅದರ ಎಡಬದಿಗೆ ಮೊಳಕಾಲವರೆಗೂ ತೊಟ್ಟುಕೊಳ್ಳು

ವಂಥ ಎತ್ತರವಾದ ಕಪ್ಪು ಬೂಟಿನ ಜೊತೆ.

ಸುತ್ತಲೂ ಆಶ್ಚರ್ಯದಿಂದಲೇ ನೋಡಿ ಕೊನೆಗೆ ದೃಷ್ಟಿಯನ್ನು ನನ್ನ ಮೇಲೇ ಹಾಯಿಸಿ ಕೊಂಡೆ. ಇದುವರೆಗೆ ಉದ್ದ ತೋಳಿನ ಗೌನ್ ಅಷ್ಟೇ ಕಂಡಿತ್ತು. ಈಗ ಅದರ ಕೆಳಗೆ ಚೂಡಿದಾರ ಪೈಜಾಮಾ. ಕಾಲಲ್ಲಿ ಸುಂದರ ನಕ್ಷೆಯುಳ್ಳ ಹಗು ರಾದ ಬೂಟುಗಳು ಕಂಗೊಳಿಸಿದವು. ವಿಚಿತ್ರವಾದ ನನ್ನ ಉಡುಪನ್ನು ನೋಡಿಕೊಂಡು ಬಲಗೈಯನ್ನು ಮುಖದ ಮೇಲಾಡಿಸಿಕೊಂಡೆ. ಏನು ಅದ್ಭುತ! ನನ್ನ ಇಷ್ಟಗಲ ಸಂಡಿಗೆಯಾಕಾರದ ಮೂಗು ಈಗ ಉದ್ದವಾಗಿದೆ. ನಿಗ್ರೋನಂಥ ದಪ್ಪ ತುಟಿಗಳು ತೀರಾ ತೆಳುವಾಗಿಬಿಟ್ಟಿವೆ. ತಲೆಯ ಮೇಲೆ ಕೈಯ್ಯಾ ಡಿಸಿಕೊಂಡರೆ ಉದ್ದುದ್ದವಾದ ತಲೆಗೂದಲು ಕತ್ತಿ ನವರೆಗೆ ಜೋತು• ಬಿದ್ದಿವೆ. ಕೂದಲಿನಿಂದ ಎರಡೂ ಕಿವಿಗಳು ಮುಚ್ಚಿಕೊಂಡಿವೆ. ಇಂಥ ವಿಸ್ಮಯಕಾರಕ ಅನುಭವವನ್ನು ಕಂಡು ನನ್ನನ್ನು ಈ ಪರಿಸ್ಥಿತಿಯಲ್ಲಿಯೇ ನಿಲುವುಗನ್ನಡಿಯಲ್ಲಿ ನೋಡಿ ಕೊಳ್ಳಬೇಕೆನಿಸಿತು. ಆದರೆ ಕನ್ನಡಿ ಎಲ್ಲಿದೆ? ಓಡಿ ಬಾತ್ರೂಮ್ ಬಾಗಿಲು ನೂಕಿದೆ. ಒಂದೇ ಬಾರಿಗೆ ಬಾಗಿಲು ತೆರೆದುಕೊಂಡಿತಲ್ಲದೇ ನಾನು ಒಳಗಿದ್ದೆ!

ಮಲಗುವ ಸಮಯದಲ್ಲಿ ಬಾತ್ರೂಮ್‌ನಲ್ಲಿ ಬಕೆಟ್ಟೊಂದನ್ನುಳಿದು ಇನ್ನೇನೂ ಇರಲಿಲ್ಲ. ನಾನೀಗ ಶೋಧಿಸುತ್ತಿರುವ ನಿಲುವುಗನ್ನಡಿ (ಡ್ರೆಸ್ಸಿಂಗ್ ಟೇಬಲ್) ನನ್ನೆದುರೇ ಇದೆ. ಈಗ ನನಗೆ ಸಂಪೂರ್ಣ ಗೊತ್ತುಂಟು, ನಾನೇ ಕನ್ನಡಿ ಎದುರು ನಿಂತವನೆಂದು. ಆದರೆ ಕನ್ನಡಿಯಲ್ಲಿ ಕಾಣುತ್ತಿರುವುದು ನನ್ನ ಪ್ರತಿಬಿಂಬವಲ್ಲ, ಏನೋ ಒಂದು ಭಯಾನಕ ರೀತಿಯಲ್ಲಿ ಕಂಗೊಳಿಸುವ ಹತ್ತೊಂಭತ್ತನೆಯ ಶತಮಾನದ ಬ್ರಿಟಿಶ್ ಆಫೀಸ ರ್‌ನ ಪ್ರತಿಬಿಂಬ! ಮುಖ ಕೆಂಪು. ಕೂದಲು ಬಂಗಾರ ವರ್ಣದವು. ನೀಲಿಕಣ್ಣುಗಳು. ಏನೋ ಕ್ರೂರ ಬಯಕೆ ಹೊಂದಿರುವಂತಿದೆ. ಈ ಸಾಹೇ ಬರ ವಯಸ್ಸೆಷ್ಟಿರಬಹುದು? ಸುಮಾರು ಮೂವ ತ್ತೈದು. ಆದರೆ ಪರಿಶ್ರಮಪಟ್ಟಿದ್ದರಿಂದ ವಾರ್ಧಕ್ಯ ಬೇಗನೇ ಬಂದಂತಿದೆ.

ಇನ್ನೂ ಸಮೀಪಕ್ಕೆ ಬಂದು ಸ್ಪಷ್ಟವಾಗಿ ನನ್ನ ಆಕೃತಿಯನ್ನು ನೋಡಿಕೊಂಡೆ. ನೋಡುತ್ತಿದ್ದಂ ತೆಯೇ ನಿಟ್ಟುಸಿರುಹೊರಬಂತು. ಓಹ್! ಈ ಸ್ವರ

### ಶಿಕ್ಷೆ

೧೯೮೯ರಲ್ಲಿ ಕೊಲಂಬಿಯದ ಮರಣದಂ ಡನೆ ಶಿಕ್ಷೆ ಸಾರಲ್ಪಟ್ಟ ಕೊಲೆಪಾತಕಿಯೊಬ್ಬ ಅಲ್ಲಿಯ ವಿಧಾನವಾದ 'ವಿದ್ಯುತ್ ಕುರ್ಚಿಯ ಮೇಲೆ ಕೂಡಿ ಸುವಿಕೆ'ಯನ್ನು ತನ್ನ ಮಟ್ಟಿಗೆ ಅನುಸರಿಸಬಾರ ದೆಂದು ಮನವಿ ಮಾಡಿಕೊಂಡ. ಆದರೆ ಹಾಗೆ ಮನವಿ ಸಲ್ಲಿಸಿದ ಎರಡು ದಿನಗಳಲ್ಲೇ ಸೆರೆಮನೆಯ ಶೌಚಾಲಯದಲ್ಲಿ ಕಾಲೂರಿ ಕುಳಿತಿದ್ದಾಗ ಅಲ್ಲಿ ಹರಿ ಯುತ್ತಿದ್ದ ವಿದ್ಯುತ್ತಿನ ಆಘಾತದಿಂದಲೇ ಸಾವನ್ನಪ್ಪಿದ.

ಕೂಡ ನನ್ನದಲ್ಲ, ಬ್ರಿಟಿಶ್ ಸಾಹೇಬರ ಆಕೃತಿಗೆ ಹೊಂದುವಂತಿದೆ. ನಂತರ ನಡೆದೆಲ್ಲ ಘಟನೆಗ ಳಿಂದ ನಾನು ನಾನಾಗಿರದೇ ಇನ್ನೊಂದು ಆತ್ಮದ ವಶವಾದಂತೆಯೂ ನನ್ನ ಕೈ ಕಾಲುಗಳೂ ಆ ಆತ್ಮದ ಅಧೀನದಲ್ಲಿದ್ದಂತೆಯೂ ಅನಿಸತೊಡಗಿತು. ಇಷ್ಟಾದರೂ ನನ್ನ ಅಂತರಾತ್ಮ ಮಾತ್ರ ನಾನು ನಾನೇ ಎಂದು ಚುಚ್ಚಿ ತಿಳಿಸುತ್ತಿದ್ದುದನ್ನು ಕಂಡು ಇನ್ನೂ ಆಶ್ಚರ್ಯವಾಗುತ್ತಿದೆ. ಆಹಾ! ಎಂಥ ವಿಚಿತ್ರ ಅನುಭವವಿದು. ಈ ಪರಿವರ್ತನೆ ಕ್ಷಣಿಕ ವಾದುದೆಂದೂ ನನ್ನ ಪೂರ್ವಸ್ಥಿತಿಗೆ ಮರಳಿಬರು ವೆನೆಂದೂ ನಿಶ್ಚಿತವಾಗಿ ನನ್ನ ಮನಸ್ಸು ಹೇಳುತ್ತಿದೆ. ಆದರೂ ಮರುಕ್ಷಣವೇ ಮತ್ತೆ ಸಂಶಯ.

ಬಾತ್ರೂಮಿನಿಂದ ಮರಳಿ ಶಯನ ಕಕ್ಷೆಗೆ ಬಂದೆ. ಪುನಃ ಟೇಬಲ್ ಕಡೆಗೆ ದೃಷ್ಟಿ ಹೊರಳಿಸಿದೆ. ಲ್ಯಾಂಪು ಇನ್ನೂ ಸುಂದರವಾಗಿ ಉರಿಯುತ್ತಿದೆ. ಆದರ ಪಕ್ಕದಲ್ಲೊಂದು ನೋಟ್‌ಬುಕ್ಕುಂಟು. ಶಾಹಿ ತುಂಬಿದ ಬಾಟಲಿ, ಅದರಲ್ಲಿ ಮುಳುಗಿಸಿಟ್ಟ ಹಕ್ಕಿಯ ಗರಿಯುಳ್ಳ ಲೆಕ್ಕಣಿಕೆ. ಧೈರ್ಯದಿಂದ ಟೇಬಲ್ ಕಡೆಗೆ ನಡೆದೆ. ನೋಟ್‌ಬುಕ್ ತೆರೆದು ನೋಡಿದೆ. ಅದರಲ್ಲೇನೂ ಬರೆದಿರಲಿಲ್ಲ. ಅಷ್ಟರ ಲ್ಲಿಯೇ ಯಾವುದೋ ಅದೃಶ್ಯ ಶಕ್ತಿಯೊಂದು ಕುರ್ಚಿಯಲ್ಲಿ ಕುಳಿತುಕೊಳ್ಳುವಂತೆ ನನ್ನನ್ನು ನೂಕಿತು. ಬಲಗೈಯಲ್ಲಿ ಶಾಹಿ ಎದ್ದಿದ ಲೆಕ್ಕಣಿಕೆ ಯನ್ನು ಕೊಟ್ಟಿತು. ಅದೇ ಶಕ್ತಿಯೇ ನನ್ನ ಕೈಯ ಮುಖಾಂತರ ಏನೇನೋ ಗೀಚತೊಡಗಿತು. ಎಲ್ಲೆಲ್ಲೂ ನಿಶ್ಶಬ್ದ. ನಾನೂ ಧೈರ್ಯ ಕಳೆದುಕೊ ಳ್ಳದೇ ಲೆಕ್ಕಣಿಕೆಯನ್ನು ಹಿಡಿದು ಕುಳಿತೆ. ಲೆಕ್ಕಣಿಕೆ

ಓದತೊಡಗಿತು. ಓದೇ ಓದಿತು. ಬರೆದುದನ್ನು ಓದಲಾಗುವದಿಲ್ಲ. ಆದರೂ ಕಣ್ಣುಜ್ಜಿಕೊಂಡು ಓದತೊಡಗಿದೆ.

"ದಿ. ೨೪-೪-೧೮೬೮ ಸಮಯ ರಾತ್ರಿ ೧೨-೩೦."

"ಕೊನೆಯಲ್ಲಿ ನನ್ನಂಥ ದಕ್ಷ ಅಧಿಕಾರಿಗೆ ಕ್ಷುದ್ರ ಸೊಳ್ಳೆಯಿಂದ (ಮಲೇರಿಯಾ) ಸೋಲು ಬಂದಂತಾಯಿತು. ವಿಧಿಯ ವಿಧಾನ ಇದೆಂಥದು? ಡೈರಿಯಲ್ಲಿ ಸುಳ್ಳು ಸಂಗತಿಗಳನ್ನು ಬರೆಯುವುದು ಬಲುದೊಡ್ಡ ಪ್ರಮಾದವೆಂದೇ ತಿಳಿಯುತ್ತೇನೆ. ಈ ಅರಣ್ಯದಲ್ಲಿನ ನಿರುಪದ್ರವಿ ವನ್ಯ ಪ್ರಾಣಿಗಳಿಗೆ ಕಾರಣವಿಲ್ಲದೇ ಹಿಂಸೆಕೊಟ್ಟೆ. ಹುಲಿ-ಚಿರತೆಗಳ ಮರಿಗಳನ್ನು ಅವುಗಳ ಅಮ್ಮಂದಿರಿಂದ ಬೇರ್ಪಡಿಸಿ ಪರದೇಶಗಳಿಗೆ ಕಳಿಸಿದೆ. ಮರಿಗಳನ್ನು ಅನಾಥ ಮಾಡಿ ಅವುಗಳ ತಾಯಿ ತಂದೆಯರ ಚರ್ಮ ಸುಲಿದು ಮನೆಗೆ ಕಳಿಸಿದೆ. ಇಲ್ಲಿನ ಮಾನವರನ್ನೂ ಪಶುಗಳಂತೆಯೇ ಕಡೆಗಣಿಸಿದೆ. ನಾನು ನನ್ನ ಮಾನವತೆಯನ್ನೇ ಕಳೆದುಕೊಂಡೆ. ನನ್ನೊಡನಾಡುವವರೆಲ್ಲರೂ ದೂರಾದರು. ಹೆಂಡತಿ ಮೇರಿ, ಮಗ ಟೆಡಿ ಆಗಲೇ ಮಲೇರಿಯಾಕ್ಕೆ ತುತ್ತಾದರು. ನಾಯಿ 'ಟೋನಿ' ಓಡಿಹೋಯಿತು. ಇನ್ನೊಂದು 'ರೆಕ್ಸ್' ದೂರವಾಗುತ್ತಿದೆ. ನನಗೀಗ ಇಂಗ್ಲೆಂಡಿಗೆ ಹೋಗುವ ಧೈರ್ಯವೇ ಇಲ್ಲದಾಗಿದೆ. ನಾನಿಲ್ಲೇ ಸಾಯುವುದೇ ಲೇಸೆನಿಸುತ್ತಿದೆ. ನನ್ನ ಹೆಂಡತಿ ಮಗನ ಗೋರಿಯ ಪಕ್ಕದಲ್ಲಿಯೇ ನನಗೂ ಒಂದು ಸ್ಥಳ ಸಿಕ್ಕೀತು. ಇಲ್ಲಿನ ಜನರ ಮೇಲೆ ನಾನು ಅತ್ಯಾಚಾರ ನಡೆಸಿದುದರಿಂದ ನನ್ನ ಗೋರಿಯ ಎದುರು ಯಾರೂ ಕಣ್ಣೀರು ಸುರಿಸಲಿಕ್ಕಿಲ್ಲ ಎಂದೂ ಅನಿಸುತ್ತದೆ. ಯಾರಾದರೂ ಕಣ್ಣೀರಿಟ್ಟರೆ ನನ್ನ ವಿಶ್ವಸನೀಯ ಚಪರಾಸಿ ಪೀರ್‌ಜಾನ್ ಮಾತ್ರ.....

" 'ರೆಕ್ಸ್' ಸ್ವಾಮಿ ಭಕ್ತ ನಾಯಿ; ಅದನ್ನು ನನ್ನ ಮರಣಾನಂತರ ಈ ಜನ ಜೀವದಿಂದ ಇರಗೊಡುವುದಿಲ್ಲ, ಕಲ್ಲು ಬಡಿಗೆಗಳಿಂದ ಬಡಿದು ಜೀವ ತೆಗೆದುಬಿಡುವರು. ನೆನೆಸಿಕೊಂಡರೆ..... ಇನ್ನು ಹೆಚ್ಚು ಬರೆಯಲಾರೆ. ಕೈ ನಡುಗುತ್ತಿವೆ...."

ನಡುಗುತ್ತಿದ್ದ ಕೈ ನಿಜವಾಗಿಯೂ ನನ್ನದಾಗಿರಲಿಲ್ಲ, ನನ್ನಿಂದ ಬರೆಸಿದ ಶಕ್ತಿಯದಿರಬೇಕು. ಕೈಯಲ್ಲಿನ ಕಲಮನ್ನು ಇಟ್ಟುಬಿಟ್ಟೆ. ನನ್ನ ಸ್ವತಂತ್ರವಾದ ಬಲಗೈ ಟೇಬಲ್ಲಿನ ಡ್ರಾಯರ್ ಕಡೆಗೆ ಹೋಯಿತು. ಹಿಡಿದೆಳೆದೆ. ಅದರಲ್ಲೊಂದು ಪಿನ್ ಚುಚ್ಚುವ ಡಬ್ಬ, ಒಂದು ಹಿತ್ತಾಳೆಯ ಪೇಪರ್‌ವೇಟ್ ಹಾಗೂ ಒಂದು ಪೈಪು ಕಂಡವು. ಇನ್ನಷ್ಟು ಜಗ್ಗಿದೆ. ಪಿಸ್ತೂಲು! ಅದರ ಹ್ಯಾಂಡಲ್ ಮೇಲೆ ಹಸ್ತಿದಂತದಿಂದ ಮಾಡಿದ ಕರಕುಶಲ ಕಲೆಯುಂಟು. ಪಿಸ್ತೂಲನ್ನು ಕೈಗೆತ್ತಿಕೊಂಡೆ. ಹೊರಗೆ ನಾಯಿಗಳ ಬೊಗಳುವಿಕೆ ಹೆಚ್ಚಾಗಿದ್ದರಿಂದ ಬಾಗಿಲು ತೆರೆದು ವರಾಂಡಕ್ಕೆ ಬಂದೆ.

ಬೆಳದಿಂಗಳು ಹರಡಿತ್ತು. ದೂರದಲ್ಲೊಂದು ನಾಯಿ ಕಂಡಿತು. ನನ್ನ ಬಾಯಿಂದ ಅದೇ ಭಾರೀ ಆಂಗ್ಲ ಧ್ವನಿಯೇ ನನಗರಿವಿಲ್ಲದಂತೆ ಹೊರಬಿತ್ತು. "ರೆಕ್ಸ್"... ಜಂಗಲ್‌ದಲ್ಲಿ ಪ್ರತಿಧ್ವನಿಗೊಂಡು 'ರೆಕ್ಸ್.... ರೆಕ್ಸ್.... ರೆಕ್ಸ್..... ರೆಕ್ಸ್.....' ಕೇಳಿಸತೊಡಗಿತು. ನಾಯಿಯು ಬಾಲವನ್ನಲ್ಲಾಡಿಸುತ್ತ ಸಮೀಪ ಬರತೊಡಗಿತು. ತೀರಾ ಸಮೀಪ ಬಂದೊಡನೆ ಪಿಸ್ತೂಲಿನ ಟ್ರಿಗರ್ ಮೇಲೆ ಬಲಗೈ ತೋರಬೆರಳು ಸವಾರಿ ಮಾಡಿತು, ಗುರಿ ರೆಕ್ಸ್‌ನತ್ತ. ಕೂಡಲೇ ಸ್ಫೋಟ...., ರೆಕ್ಸ್ ರಕ್ತದ ಮಡುವಿನಲ್ಲಿ ಹೊರಳಾಡತೊಡಗಿತು.

ಪಿಸ್ತೂಲಿನ ಶಬ್ದಕ್ಕೆ ದೂರ ಮರದ ಮೇಲಿನ ಕಾಗೆಗಳು ಅರಚತೊಡಗಿದವು. ಸುತ್ತಲಿನ ಜನರೆಲ್ಲ ಎಚ್ಚೆತ್ತು ಓಡೋಡಿ ಬರತೊಡಗಿದರು. ಅವರ ಕೂಗಾಟವನ್ನು ಕೇಳಲಾಗದೇ ವರಾಂಡದಿಂದ ಒಳಗೆ ಬಂದು ಮಂಚದ ಮೇಲೆ ಕುಳಿತುಕೊಂಡೆ. ಜನರ ಕೂಗಾಟ ಕಡಿಮೆಯಾಗುತ್ತಬಂತು. ಶಾಂತಿ ನೆಲೆಸಿದಂತಾಯಿತು. ಮುಂದೇನಾಯಿತೋ ನನಗೂ ನೆನಪಿಲ್ಲ....,

"ಚಾ ತಗೊಂಡು ಬಂದಿರುವೆ ಅಣ್ಣಾವ್ರೆ," ಕಾದೀರ್ ಭಾಯಿಯ ಧ್ವನಿ. ಕಿಟಕಿಯಿಂದ ಬೆಳದಿಂಗಳಲ್ಲ, ಸೂರ್ಯನ ಕಿರಣಗಳು ಇಣುಕುತ್ತಿವೆ. ದಿನ ನಿತ್ಯದಂತೆ "ಕರಾಗ್ರೆ ವಸತೇ ಲಕ್ಷ್ಮೀ...." ಎನ್ನುತ್ತ ಅಂಗೈ ನೋಡಿಕೊಂಡೆ. ಮುಂಗೈಯಲ್ಲಿನ ಆಟೋಮ್ಯಾಟಿಕ್ ವಾಚಿನಲ್ಲಿ ಆರು ಗಂಟೆ ಮೂವತ್ತೈದು ನಿಮಿಷಗಳಾಗಿವೆ. ಅದರಲ್ಲಿ ತಾರೀಖು ಕೂಡ ನೋಡಿದೆ. ಇಪ್ಪತ್ತನೆಯ ಶತ

ಮಾನದಲ್ಲಿಯೆ ಇರುವೆನೆಂಬುದು ಖಚಿತವಾಯಿತು. ಗಡಿಯಾರವನ್ನು ಪುನಃ ಪುನಃ ನೋಡಿಕೊಂಡೆ. ಅದನ್ನೇ ಗಮನಿಸುತ್ತಿದ್ದ ಕಾದೀರ್‌ಭಾಯಿ "ನಿಮ್ಮ ಗಡಿಯಾರ ಚೆನ್ನಾಗಿದೆಯಲ್ಲವೆ?" ಎಂದ. ನಾನು ಉತ್ತರಿಸಲೇ ಇಲ್ಲ. ರಾತ್ರಿ ಮಾಯವಾದ ಗಡಿಯಾರ ಈಗ ಮುಂಗೈ ಮೇಲೆ ಹೇಗೆ ಬಂತು? ರಾತ್ರಿ ಗೋಚರವಾದ ವಸ್ತುಗಳೆಲ್ಲವೂ ಎಲ್ಲಿ ಹೋದುವು?

ನಡೆದ ಘಟನೆ ನನ್ನ ಸ್ಮೃತಿ ಪಟಲದ ಮೇಲೆ ಸದಾ ಇದ್ದರೂ ಇದುವರೆಗೂ ಯಾರೆದುರೂ ವಿವರಿಸಿದ್ದಿಲ್ಲ.... ಹಾಂ.... ಇಷ್ಟು ಮಾತ್ರ ನಿಜ ೧೯೭೫ರ ಜನವರಿಯಲ್ಲಿ ಬೆಳಗಾವಿಯ ಉಪ ಅರಣ್ಯ ಸಂರಕ್ಷಣಾಧಿಕಾರಿಯವರನ್ನು ಕಂಡಿದ್ದೆ. ಸಸ್ಯಶಾಸ್ತ್ರದ ಕೆಲ ವಿದ್ಯಾರ್ಥಿಗಳೊಡನೆ ಅಭ್ಯಾಸಕ್ಕಾಗಿ ಅರಣ್ಯಕ್ಕೆ ಹೋಗಬೇಕಾಗಿದೆ ಎಂದೂ ಅದಕ್ಕೋಸ್ಕರ ಜಾಂಬೋಟಿಯಲ್ಲಿನ ತಮ್ಮ ಇಲಾಖೆಯ ರೆಸ್ಟ್‌ಹೌಸನ್ನು ಮೂರುದಿನಗಳ ಮಟ್ಟಿಗೆ ರಿಜರ್ವ್ ಮಾಡಿಕೊಡಬೇಕೆಂದೂ ವಿನಂತಿಸಿಕೊಂಡಿದ್ದೆ, ನನ್ನ ವಿನಂತಿಗೆ ಉತ್ತರವಾಗಿ, ತುಸು ವಿಚಾರ ಮಗ್ನರಾಗಿ ನಂತರ, "ಬೇಕಾದರೆ ನಾಗರಗಾಳಿ ಅರಣ್ಯಕ್ಕೆ ಹೋಗಿರಿ. ಅಲ್ಲಿ ವ್ಯವಸ್ಥೆ ಚೆನ್ನಾಗಿದೆ. ಜಾಂಬೋಟಿಯ ಬಂಗ್ಲೆ ಒಳ್ಳೆಯ ಪರಿಸ್ಥಿತಿಯಲ್ಲಿಲ್ಲ, ಹೋಗಬೇಡಿ," ಎಂದರು. ಅವರು ಹೆಚ್ಚೇನೂ ಹೇಳಲಿಲ್ಲ. ಮುಖದ ಮೇಲೆ ತೀವ್ರ ಗಾಂಭೀರ್ಯ ಕಂಡಿತು. "ನಾನು ಮಾತ್ರ ಜಾಂಬೋಟಿಗೇ ಹೋಗಬೇಕಾಗಿದೆ. ಅಲ್ಲಿ ವಿವಿಧ ಪ್ರಕಾರದ ಸಸ್ಯಗಳುಂಟು. ಅಭ್ಯಾಸ ಚೆನ್ನಾಗಿ ಆಗುತ್ತದೆ," ಎಂದು ಹಟ ಹಿಡಿದೆ. ಅರೆಮನಸ್ಸಿನಿಂದಲೂ ಅತೀವ ಅನುಮಾನದಿಂದಲೂ "ಆಯ್ತು, ನನಗೆ ಹದಿನೈದು ದಿನಗಳ ಅವಕಾಶಕೊಡಿ. ಬಂಗ್ಲೆಯನ್ನು ತುಸು ದುರುಸ್ತಿ ಮಾಡಿಸ್ತೇನೆ. ನಂತರ ಅಲ್ಲಿಯ ರೇಂಜರು, ಫಾರೆಸ್ಟರು ಹಾಗೂ ಇನ್ನಿತರ ಸ್ಟಾಫಿಗೂ ನಿಮ್ಮೊಡನಿದ್ದುಕೊಂಡು ಎಲ್ಲ ವ್ಯವಸ್ಥೆಯನ್ನು ಮಾಡಲು ತಿಳಿಸುತ್ತೇನೆ," ಎಂದರು ಅರಣ್ಯಾಧಿಕಾರಿಗಳು.

ನನ್ನ ಕುತೂಹಲ ಇನ್ನೂ ಹೆಚ್ಚಿತು. ಇಂಥ ಅನುಭವವೇನಾದರೂ ಅವರಿಗೂ ಬಂದಿರಬೇಕೇ? ●

## ಬಲವಿದ್ದವನೇ ಬಾಳಿಯಾನು

ಅಮೆರಿಕಾದ ಟಿ.ವಿ.ಯಲ್ಲಿ ಪ್ರತಿವಾರವೂ ಒಂದು ದಿನ ಬೇರೆ ಬೇರೆ ಪ್ರಾಣಿಗಳ ಹುಟ್ಟು ಬೆಳವಣಿಗೆ ದೂರದಲ್ಲಿ ಕ್ಯಾಮೆರಾ ಇಟ್ಟು ತೋರಿಸುತ್ತಿದ್ದರು. ಇಂತಹುದೊಂದು ನಿಜಚಿತ್ರವಿದು.

ಆಫ್ರಿಕಾದ ಒಂದು ಕಾಡಿನಲ್ಲಿ ಎರಡು ಒಡಹುಟ್ಟಿದ ಹೆಣ್ಣು ನಾಯಿಗಳು. ಒಂದೇ ಸಲ ಬಸಿರು. ಆ ನಾಯಿಗಳ ಸಂಪ್ರದಾಯವೇನೆಂದರೆ, ಅತಿ ಬಲಶಾಲಿಯಾದ ದೊಡ್ಡನು ಎಲ್ಲಾ ಮರಿಗಳನ್ನು ತಾನೇ ಹಾಲೂಡಿ, ಬೇಟೆಯಾಡಿ ಸಾಕಬೇಕು. ಇಲ್ಲದೆ ಹೋದರೆ, ಬೇರೆಯವರ ಮರಿಗಳನ್ನು ಅದು ಕೊಂದು ಬಿಡುತ್ತದಂತೆ.

ಸರಿ, ತಂಗಿ ನಾಯಿ ತನ್ನ ಮರಿಗಳನ್ನು ಅಕ್ಕನ ಮರಿಗಳೊಂದಿಗೆ ಬಿಟ್ಟು ತಾನು ಯಾರೋ ಎನ್ನುವಂತೆ ದೂರದಲ್ಲಿದ್ದುಕೊಂಡು ಅವುಗಳ ಬೆಳವಣಿಗೆಯನ್ನು ನೋಡುತ್ತಿತ್ತು. ಅಕ್ಕ ನಾಯಿ ಬೇಟೆಗೆ ಹೋದಾಗ ತಂಗಿ ನಾಯಿ ತನ್ನ ಮರಿಗಳ ಹತ್ತಿರ ಸ್ವಲ್ಪ ಹೊತ್ತು ಇದ್ದು ಬರುತ್ತಿತ್ತು. ಒಮ್ಮೆ ತಂಗಿ ತನ್ನ ಮರಿಗಳೊಡನೆ ಇದ್ದದ್ದನ್ನು ಅಕ್ಕ ನೋಡಿದಾಗ ಆದ ಜಗಳ ಹೇಳತೀರದು. ಮರಿಗಳು ಸ್ವಲ್ಪ ದೊಡ್ಡವಾದ ಮೇಲೆ, ಅಕ್ಕ ಇಲ್ಲದ ಸಮಯ ನೋಡಿ ತಂಗಿ ತನ್ನ ಮರಿಗಳನ್ನು ಕರೆದುಕೊಂಡು ದೂರ ಹೊರಟೇ ಹೋಯಿತು.

ಬಲಶಾಲಿಗಳು ಮಾತ್ರ ಬದುಕಲು ಸಾಧ್ಯ ಎನ್ನುವುದಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನ ಬೇಕೆ?

● **ಮಾಧವಪ್ರಿಯೆ**

# ಹರಟೆ

# ವಿಳಾಸ

• ಹಾ. ಮ್ಯೆ. ಸೂರಿ

**ಮೊ**ನ್ನ ಸಂಜೆ ಲಾಲ್‌ಬಾಗಿನಲ್ಲಿ ನಾನೂ, ಭಕ್ತವತ್ಸಲಂ ಇಬ್ಬರೂ ಮಾತಾಡ್ತಾ ಕಡ್ಲೆಕಾಯಿ ಬಿಡಿಸ್ಕೊಂಡು ತಿಂತಾ ಕುಳಿತಿದ್ದೆವು. ನಿವೃತ್ತಿ ಆದ ಮೇಲೆ ಬೇರೆ ಇನ್ನೇನು ಕೆಲಸ!

ಮಳೆ ಬರುತ್ತೆ ಅನ್ನೋ ಹಾಗೆ ಆದ ಮೇಲೆ ಇಬ್ಬರೂ ಹೊರಟೆವು. ದಾರೀಲಿ ಒಬ್ಬ ಅಪರಿಚಿತ ಎದುರಾದ.

"ಸ್ವಾರ್, ಈ ವಿಳಾಸ ಎಲ್ಲಿದೆ?" ಎನ್ನುತ್ತಾ ಒಂದು ಚೀಟಿ ತೋರಿಸಿದ.

"ಸಂಜೆ ಬೆಳಕಿನಲ್ಲಿ ನನಗೆ ಕಣ್ಣು ಕಾಣೆ ಸೋಲ್ಲಾ.... ನೀನೇ ನೋಡಪ್ಪಾ," ಎಂದು ನನ್ನ ಮಿತ್ರ ನನಗೇ ಆ ಚೀಟಿ ಕೊಟ್ಟ.

"ನನಗೂ ಕಾಣಿಸೋಲ್ಲ.... ಕನ್ನಡಕ ಸರಿ ಇಲ್ಲ," ಎಂದು ಆ ಅಪರಿಚಿತನ ಕಡೆಗೆ ತಿರುಗಿ, "ನೀನು ಸೀದಾ ಅಂಚೆ ಕಛೇರಿಗೆ ಹೋಗಿ ಕೇಳಪ್ಪಾ," ಎಂದೆ.

"ಅಲ್ಲಯ್ಯಾ.... ನೀನೂ ಒಳ್ಳೆ ಗಿರಾಕಿ.... ಬಲು ಚೆನ್ನಾಗಿ ಡೈರೆಕ್ಷನ್ ಕೊಟ್ಟಿದ್ದೀಯಾ. ಈಗ ಸಂಜೆ ಆರು ಗಂಟೆ ಕಳೆದಿದೆ. ಇಲ್ಲಿ ಯಾವ ಅಂಚೆ ಕಛೇರಿ ತೆಗೆದಿರುತ್ತೆ?" ಎಂದ ನನ್ನ ಮಿತ್ರ.

"ಇಲ್ಲಿ ಬೇರೆ ಯಾರನ್ನಾದರೂ ಕೇಳೋಣ.... ಆ ಚೀಟಿ ಕೊಡಿಲ್ಲಿ" ಎಂದು ನಾನು ಆ ಚೀಟಿ ತೆಗೆದುಕೊಂಡು ಅಲ್ಲೇ ಇದ್ದ ಅಂಗಡಿಯವರಿಗೆ ತೋರಿಸಿದೆ.

"ಈ ಅಡ್ರೆಸ್ ನೋಡಿ ಹೇಳಿ, ಎಲ್ಲಿ ಬರತ್ತೆ?" ಎಂದು ಅಂಗಡಿಯವರಿಗೆ ನಾನೇ ಖುದ್ದಾಗಿ ಕೇಳಿದೆ.

ಅಂಗಡಿಯಾತ ಚೀಟಿ ನೋಡಿ ನನ್ನ ಮುಖ ಮುಖ ನೋಡಿದ.

ಸಿಗರೇಟು ಪ್ಯಾಕಿಂದ ಒಂದು ಸಿಗರೇಟು ತನ್ನ ಬಾಯಿಗೆ ಇಟ್ಟುಕೊಳ್ಳುತ್ತಾ ಕಡ್ಡಿ ಪೆಟ್ಟಿಗೆ ಕೊರೆದು ಬೆಂಕಿ ಹಚ್ಚಿಕೊಂಡು

"ನಿಮ್ದು ಯಾವೂರ್ರೀ?" ಎಂದ.

"ಹಾಸನ ಸ್ವಾಮೀ" ಎಂದೆ ನನ್ನ ಜಾರಿದ ಕನ್ನಡಕ ಸರಿಮಾಡಿಕೊಳ್ಳುತ್ತಾ.

"ಒಳ್ಳೆ ಗಬ್ಬು ಗಿರಾಕಿ ಕಣೋss. ನಿನ್ನ ತಲೇಲಿ ಏನಿದೆ? ಸರಿಯಾಗಿ ವಿಳಾಸ ಬರೆಸಿಕೊಂಡು ಬೆಂಗಳೂರಿಗೆ ಬರಬೇಕೂ.... ಈ ಚೀಟೀಲಿ ಒಂದೇ ಒಂದು ಸಾಲಲ್ಲಿ ಏನೋ ಬರೆದಿದೆ, ನನಗೆ ಆ ಭಾಷೆ ಗೊತ್ತಾಗಲ್ಲ, ಮನೆ ನಂಬರ್ ಎರಡನೇ ಸಾಲಲ್ಲಿ ಇಲ್ಲ, ಬೀದಿ ಹೆಸರೂ ಬರೆದಿಲ್ಲ, ಬಡಾವಣೆ ಸಾಲು ಇಲ್ಲ.... ನೀನೆಂತ ಗುಗ್ಗು.... ಹಿಂಗಾ ವಿಳಾಸ ತರೋದುss?" ಎಂದು ನನ್ನನ್ನೇ ಏಕವಚನದಲ್ಲಿ ಪೆದ್ದುಮಾಡಿ ನನ್ನ ತಲೆ ಮೇಲೇ ಒಂದು ಸಣ್ಣ ಮರಿಗೂಬೆ ಕೂಡಿಸಿಬಿಟ್ಟ, ಅದೂ ಸಂಜೆ ಹೊತ್ತು.

"ನನಗಲ್ಲಪ್ಪಾ.... ನೋಡಿಲ್ಲಿ, ಈತ, ಆ ವಿಳಾಸ ಕೇಳಿಕೊಂಡು ಬಂದಿರೋದು.... ನನಗೂ ತಿಳೀದೇ, ನಿನ್ನ ಕೇಳಿದೆ... ಚೀಟಿ ವಾಪಸ್ ಕೊಡಿಲ್ಲಿ" ಎಂದೆ.

"ಓ... ಹಂಗಾ.... ತಗೋಳಿ" ಎಂದು ಅಂಗಡಿಯವನು ನನಗೆ ಚೀಟಿ ಕೊಟ್ಟು ತಾನು ಪಕ್ಕದ ಗಿರಾಕಿ ಕಡೆ ತಿರುಗಿದ.

"ಬೇರೆಯವರನ್ನು ಕೇಳೋಣ ಬಾರಯ್ಯಾ" ಎಂದು ನನ್ನ ನೇಹಿಗ ಭಕ್ತವತ್ಸಲಂ ನನ್ನ ಕೈ ಹಿಡಿದು ಕರೆದ.

ಇನ್ನು ಯಾರನ್ನು ವಿಳಾಸ ಕೇಳೋದು, ಈತನಿಗೆ ಹೇಗೆ ಸಹಾಯ ಮಾಡೋದು ಅಂತ ಕಕ್ಕಾಬಿಕ್ಕಿಯಾಗಿ ಅಲ್ಲೇ ಸರ್ಕಲ್ಲಿನಲ್ಲಿ ನಿಂತಿದ್ದೆವು.

ಎದುರಿಂದ ಬಂದ ಇನ್ನಿಬ್ಬರಿಗೆ ಆ ಚೀಟಿ ತೋರಿಸಿ ವಿಳಾಸ ಕೇಳಿದೆವು.

"ಯಲಾ ಬಡ್ಡೀssಮಗನೇ.... ಇಲ್ಲಿ ದೀಯಾ.... ನಿನ್ನ ವಿಳಾಸ ಹುಡುಕಿಕೊಂಡು ನಾವು ಬಂದೆವು.... ಇವರನ್ನು ನೀನೇ ವಿಳಾಸ ಕೇಳ್ತಿ

ದೀಯಾ.... ನಡೀ, ನಡಿ" ಎನ್ನುತ್ತಾ ಆ ಹೊಸ ಬರಿಬ್ಬರು ವಿಳಾಸ ಕೇಳಿಕೊಂಡು ನಮ್ಮ ಬಳಿ ಬಂದಿದ್ದವನಿಗೆ "ಧಭ, ಧಭ" ಎಂದು ನಾಲ್ಕು ಗುದ್ದು ಇಕ್ಕಿ ಅವನ ಎರಡೂ ಬದಿ ಕೈ ಬಲವಾಗಿ ಹಿಡಿದುಕೊಂಡರು.

"ಅಯ್ಯೋ ಪಾಪ... ಏನಾಯ್ತು?" ಎಂದೆ.

"ನೋಡೀ ಸಾ... ಈ ಚೀಟಿ ಹಿಡ್ಕೊಂಡು, ನಿಮ್ಮನ್ನು ವಿಳಾಸ ಕೇಳ್ಕೊಂಡು ಕದ್ದು ಬಂದವ್ನೇ ಈ ಬಡ್ಡಿ ಹೈದ" ಎಂದ ಒಬ್ಬ.

"ಈತ ಪಕ್ಕದ ಹಳ್ಳಿಯವನು ಸ್ವಾಮೀ.... ಎಲ್ಲಾ ಸೇರಿ, ಇವನ ತಲೆ ಕೆಡಿಸಿಬಿಟ್ಟವ್ರೆ.... ನಮ್ಮ ಹುಚ್ಚಾಸ್ಪತ್ರೆಯಿಂದ ತಪ್ಪಿಸಿಕೊಂಡು ಬಂದು ನಿಮಗೆ ಆ ವಿಳಾಸ ಕೇಳ್ತಾ ಅವ್ನೆ..... ನಡೀ ಸಿದ್ದಪ್ಪ..... ಸಧ್ಯ.... ಇಲ್ಲೇ ಸಿಕ್ಕಿದ್ನಲ್ಲ" ಎನ್ನುತ್ತಾ ನಮಗೆ ವಿಳಾಸ ಕೇಳಿದವನನ್ನ ಕರೆದುಕೊಂಡು ಹೋದರು.

ನಾನೂ ಭಕ್ತವತ್ಸಲಂ ಮುಖ ಮುಖ ನೋಡಿಕೊಂಡು, "ಹೀಗೆ ಹುಚ್ಚು ಹುಚ್ಚಾಗಿ ವಿಳಾಸ ಕೇಳೋರ ಜೊತೆ ನಾವೂ ಹುಚ್ಚಾಪಟ್ಟೆ ಹುಷಾರಾಗಿರಬೇಕು.... ಅಲ್ಲವಾ?" ಎಂದುಕೊಂಡು ಇನ್ನು ನಾಲ್ಕು ಹೆಜ್ಜೆ ಮುಂದಿಟ್ಟೆವು.

"ಏಳೂವರೆ ಲಕ್ಷ ರೂಪಾಯಿ ಬಹುಮಾನದಲ್ಲಿ ನಿಮಗೆ ಒಂದು ಲಕ್ಷ ರೂಪಾಯಿ ಕೊಡ್ತೀನಿ.... ಈ ವಿಳಾಸದವರನ್ನು ಹಿಡಿದುಕೊಡಬೇಕಂತೆ" ಎಂದು ತನ್ನ ಮುಖ ನಮಗೆ ಕಾಣದಂತೆ ಮಫ್ಲರ್ ಸುತ್ತಿಕೊಂಡು ಎದುರಿನಿಂದ ಬಂದ ಇನ್ನೊಬ್ಬಾತ ನಮಗೆ ತಾನು ತಂದಿದ್ದ ವಿಳಾಸದಾರನ ಹೆಸರು ಹೇಳಿದ.

ಆ ಹೆಸರು ಕೇಳಿದ್ದೇ ತಡ, ಅದೇನು ಅದ್ಭುತ ನಾಮ ಬಲ, ನಮ್ಮ ಜಂಘಾಬಲವೇ ಉಡುಗಿ ಹೋಗಿ ಹುಚ್ಚಾಸ್ಪತ್ರೆ ಹಿಂದಿನ ರಸ್ತೆಯಿಂದ ನಾವಿಬ್ಬರೂ ಮಂಗ ಮಾಯವಾಗಿದ್ದವು! ●



# ನೆನಪು ನೆರಳಿನಲ್ಲಿ

ನಾನು ಆಗ ಬಾಗೇಪಲ್ಲಿಯಲ್ಲಿ ರೇಂಜಿನ ಸ್ಕೂಲ್ ಇನ್ಸ್‌ಪೆಕ್ಟರಾಗಿದ್ದೆ. ಅದೊಂದು ಸಣ್ಣ ತಾಲ್ಲೂಕು. ಮುಂದುಗಡೆ ನನ್ನ ಕಛೇರಿ. ಅದರ ಹಿಂದೆ ನನ್ನ ಮನೆ. ಇವೆರಡರ ನಡುವೆ ಅಂಗಳ. ನಾನು, ನನ್ನ ಸಂಸಾರ ರಾತ್ರಿಯ ಹೊತ್ತು ಕಛೇರಿಯ ದೊಡ್ಡ ಹಾಲಿನಲ್ಲಿ ಮಲಗುತ್ತಿದ್ದೆವು. ಒಂದು ರಾತ್ರಿ ಸುಮಾರು ಎರಡು ಗಂಟೆಯಾಗಿ ರಬಹುದು. ಮೂತ್ರ ವಿಸರ್ಜನೆಗೆಂದು ನಾನು ಬಾಗಿಲು ತೆಗೆಯಬೇಕೆಂದಿದ್ದಾಗ, ನನ್ನ ಹೆಂಡತಿ, "ಆ ಕಡೆ ಯಾಕೆ ಹೋಗುತ್ತೀರಿ? ಬೀದಿಯ ಕಡೇಗೆ ಹೋಗಿ," ಎಂದಳು.

ಬೆಳಿಗ್ಗೆ ಎದ್ದಾಗ ನೋಡಿದರೆ ನಮ್ಮ ಮನೆಯ ಬಾಗಿಲು ತೆಗೆದು ಹಾರುಹೊಡೆದಿದೆ. ಮುರಿದ ಬೀಗ ಅನಾಥವಾಗಿ ಬಿದ್ದಿದೆ. ಮನೆಯಲ್ಲಿದ್ದ ಟ್ರಂಕು, ಬಟ್ಟೆಬರೆ ಪಾತ್ರೆಪಗಡ ಎಲ್ಲವನ್ನೂ ಕಳ್ಳ ದೋಚಿಕೊಂಡು ಹೋಗಿದ್ದಾನೆ. ಕಾಫಿ ಕುಡಿಯಲು ಒಂದು ಲೋಟವೂ ಇರಲಿಲ್ಲ. ಕಳ್ಳತನವಾದದ್ದನ್ನು ಕೇಳಿದ್ದೆನೇ ಹೊರತು ಅದರ ಅನುಭವ ಅದುವರೆಗೂ ಬಂದಿರಲಿಲ್ಲ. ನಾನು ನನ್ನ ಸ್ನೇಹಿತರಾಗಿದ್ದ ಬಾಗೇಪಲ್ಲಿ ಸಬ್‌ಇನ್ಸ್‌ಪೆಕ್ಟರರಲ್ಲಿ ದೂರು ಕೊಟ್ಟೆ. ಅವರು, "ನೀವೇನೂ ಯೋಚನೆ ಮಾಡಬೇಡಿ. ಕಳ್ಳನನ್ನು ಪತ್ತೆ ಮಾಡುತ್ತೇವೆ," ಎಂದರು. ಅದಾದ ಮೂರು ತಿಂಗಳ ಮೇಲೆ ಕಳ್ಳ ಸಿಕ್ಕಿ ಬಿದ್ದ. ಚಿಕ್ಕಬಳ್ಳಾಪುರದ ಮುನ್ಸೀಫ್ ಕೋರ್ಟಿನಲ್ಲಿ ಕೇಸು ನಡೆಯಿತು. ನಮ್ಮ ಸಬ್‌ಇನ್ಸ್‌ಪೆಕ್ಟರ್ ಕೃಷ್ಣಮೂರ್ತಿಯವರು, ಕೋರ್ಟಿನ ಆವರಣದಲ್ಲಿ ಪೋಲೀಸ್ ಕಸ್ಟಡಿಯಲ್ಲಿದ್ದ ಒಬ್ಬ ಆಸಾಮಿಯನ್ನು ತೋರಿಸಿ "ಇವನೇ ನಿಮ್ಮ ಮನೆಯಲ್ಲಿ ಕಳ್ಳತನ ಮಾಡಿದ ಚೋರ ಶಿಖಾಮಣಿ," ಎಂದು ಹೇಳಿದರು.

ನಾನು ಕುತೂಹಲದಿಂದ ಅವನನ್ನು, "ಯಾವುದಾದರೂ ಕೆಲಸ ಮಾಡಿ ಜೀವನ ಹೊರೆಯುವ ಬದಲು ಕಳ್ಳತನವನ್ನೇಕೆ ಮಾಡಿದೆ?" ಎಂದೆ. ಅದಕ್ಕೆ ಅವನು, "ಇದೂ ಒಂದು ಕೆಲಸವೇ ಅಲ್ಲವೇ?" ಎಂದು ನನಗೇ ಮರುಪ್ರಶ್ನೆ ಮಾಡಿದ! ಅವನು ಹೇಳಿದ: "ಆ ಹೊತ್ತು ನಿಮ್ಮ ಅದೃಷ್ಟ ಚೆನ್ನಾಗಿತ್ತು. ನೀವು ಸ್ವಿಚ್ ಹಾಕಿ ದೀಪ

ಮುಂಬಯಿಯ ಚೆಂಬೂರಿನಲ್ಲಿ ನಮ್ಮ ನೆರೆಮನೆಯಲ್ಲೇ ಗುಜರಾಥಿ ಬೆಹನ್ ಒಬ್ಬರು ಬಿಡಾರ ಹೂಡಿದ್ದರು. ತುಂಬ ಸ್ನೇಹಜೀವಿ.

ಒಂದೊಮ್ಮೆ ಸರಿ ರಾತ್ರಿ ಮೂರರ ಸುಖನಿದ್ರೆಯ ಸಮಯದಲ್ಲಿ ನಮಗೆ ಹೊರಗಿನ ಗಲಾಟೆಯಿಂದಾಗಿ ಎಚ್ಚರವಾಯಿತು. ಕಿಟಕಿಯಿಂದ ನೋಡಿದರೆ ನಾಲ್ವರು ಹಮಾಲ(ರಂತಿದ್ದವ)ರು ಒಂದು ಗೋದ್ರೆಜ್ ಕಪಾಟಿನೊಂದಿಗೆ ನಿಂತಿದ್ದರು. ಬೆಹನ್‌ರೊಂದಿಗೆ ಅವರ ಮಾತಿನ ಚಕಮಕಿ

"ಇಲ್ಲಿಲ್ಲ, ನಮ್ಮೆಜಮಾನರು ಈ ಬಗ್ಗೆ ಏನೂ ಹೇಳಿಲ್ಲ. ಅಂದ ಮೇಲೆ ಕಪಾಟನ್ನು ನಾನು ಒಳಸೇರಿಸುವುದೂ ಇಲ್ಲ. ನೀವು ಸುಮ್ಮನೇ ಹೊರಟು ಹೋಗಿ.... ಇಲ್ಲವಾದರೆ..." ಎಂದು ನಮ್ಮ ಬೆಹನ್.

"ಇದೊಳ್ಳೆ ಪೀಕಲಾಟಕ್ಕೆ ಬಂತಲ್ಲ. ನಿಮ್ಮವರೇ ಹೇಳಿದ್ದು, ಅಂತಲೇ ಅಂಗಡಿಯವರು ಕೊಟ್ಟು ಕಳಿಸಿದ್ದಾರೆ. ನಾವಂತೂ ಇಲ್ಲೇ ಬಿಟ್ಟು ಹೋಗುತ್ತೇವೆ," ಎಂದವರೇ ಕಪಾಟನ್ನಿಳಿಸಿ ಅದರ ಬೀಗದ ಕೈಯನ್ನು ಬೀಸಿ ಬೆಹನ್‌ಳ ಮನೆಯೊಳಗೆ ಎಸೆದು ಅವರು ನಡೆದುಬಿಟ್ಟರು. ನಮ್ಮಂತೆ ಸುತ್ತಲಿನ ಜನ

ಹಾಕಿದ್ದನ್ನು ನಾನು ನೋಡಿದೆ. ನೀವೇನಾದರೂ ಅವತ್ತು ಬಾಗಿಲು ತೆಗೆದುಕೊಂಡು ಹೊರಗೆ ಬಂದಿದ್ದಿದ್ದರೆ ಕಬ್ಬಿಣದ ಸಲಾಕೆಯಿಂದ ಹೊಡೆತ ಬೀಳುತ್ತಿತ್ತು." ಇದನ್ನು ಕೇಳಿದ ನಾನು ಬೆವೆತು ಹೋದೆ. ನನ್ನ ಹೆಂಡತಿ ತನಗರಿವಿಲ್ಲದೆ ಆ ದಿನ ನನ್ನ ಪ್ರಾಣವನ್ನು ಉಳಿಸಿದ್ದಳು.

• ಡಿ. ಗುಂಡೂರಾವ್



ನಾನು ಸರಕಾರಿ ನೌಕರಿಯಲ್ಲಿದ್ದಾಗ, ೩೦ ವರ್ಷಗಳ ಹಿಂದೆ, ಒಂದು ರಾತ್ರಿ ಹನ್ನೊಂದು ಹನ್ನೆರಡರ ಸುಮಾರಿಗೆ ೩-೪ ಜನರು ಬಂದು ಮನೆ ಬಾಗಿಲು ಬಡಿದರು. ನಿದ್ದೆಯಿಂದ ಎಚ್ಚತ್ತು ಕಾರಣ ಕೇಳಿದೆ. "ಡಾಕ್ಟ್ರೆ, ನಮ್ಮ ಸಂಬಂಧಿಕರೊಬ್ಬರಿಗೆ ವಾಂತಿ-ಭೇದಿ ಆಗಿದೆ; ದಯಮಾಡಿ ಈಗಲೇ, ಬರಬೇಕು. ನಮ್ಮೂರು ಸುಮಾರು ಹತ್ತು ಕಿಲೋ ಮೀಟರ್ ದೂರ ಅದೆ. ನಿಮ್ಮ ಫೀ ಎಷ್ಟಿದ್ದರೂ ಕೊಡುತ್ತೇವೆ," ಅಂದರು. ಆಗ ಪೆಟ್ರೋಲ್ ಬೆಲೆ ಲೀಟರಿಗೆ ರೂ. ೧-೨೫ ಇತ್ತು. "ನಾನು ಕಾರಿನಲ್ಲಿ ನಿಮ್ಮೂರಿಗೆ ಬರುತ್ತೇನೆ. ಕಾರಿಗೆ ಒಂದು ಕಿಲೋಮೀಟರಿಗೆ ಒಂದು ರೂಪಾಯಿಯಂತೆ, ರೋಗಿಯನ್ನು ತಪಾಸಿಸಿದ ಬಗ್ಗೆ ೨೫ ರೂ. ಕೊಡಬೇಕು. ಔಷಧೋಪಚಾರದ ಖರ್ಚು ಬೇರೆ," ಎಂದೆ. ಬಂದವರು ಎಲ್ಲದಕ್ಕೂ ಸಮ್ಮತಿಸಿದರು. ರಾತ್ರಿ ೧೨-೩೦ರ ಸುಮಾರಿಗೆ ಅವರ ಊರಿನ ಅಗಸಿಯ ಹತ್ತಿರ ಅವರನ್ನು ಕಾರಿನಲ್ಲಿ ತಂದೆ. ದಾರಿ ಸರಿಯಿಲ್ಲದ್ದರಿಂದ ಮುಂದೆ ಹೋಗಲು ಬರುತ್ತಿರಲಿಲ್ಲ. ಹೀಗಾಗಿ ನಾನು ಕಾರಿನಿಂದಿಳಿದು ನಡೆದು ಹೋಗುವ ತಯಾರಿಯಲ್ಲಿದ್ದೆ. ಆಗ ಅವರು, "ಸ್ವಾಮಿ, ನೀವು ಕಾರಿನಲ್ಲೆ ಕುಳಿತುಕೊಳ್ಳಿ; ನಾವು ಹೋಗಿ ಜೀವ ಇದೆಯೋ ಇಲ್ಲವೋ ನೋಡಿಬರುತ್ತೇವೆ," ಅಂದರು. ನಾನು ಕಾರಿನಲ್ಲಿಯೇ ಕುಳಿತೆ.

ಸ್ವಲ್ಪ ಸಮಯದ ನಂತರ ಇಬ್ಬರು ಬೇರೆಯವರು ಬಂದು, "ಡಾಕ್ಟ್ರೆ, ನಮ್ಮೂರಿನಲ್ಲಿಯ ಒಬ್ಬರು ಅಜ್ಜ ಕಷಾಯ ಕೊಟ್ಟಿದ್ದಾರೆ; ಗುಣ ಆಗಿದೆ. ನಿಮ್ಮ ಕಾರಿನ ಫೀ ೧೦ ರೂಪಾಯಿ ತೆಗೆದುಕೊಳ್ಳಿ," ಎಂದು ಹತ್ತು ರೂಪಾಯಿಯ ನೋಟೊಂದನ್ನು ಕಾರಿನಲ್ಲಿ ಒಗೆದು ಹೋಗಿಬಿಟ್ಟರು. ನನಗೆ ಏನೂ ತಿಳಿಯದೆ ವಾಪಸ್ಸು ಬಂದೆ.

ಮರುದಿವಸ ನಾನಿದ್ದ ಊರಿನಲ್ಲೇ ಟ್ಯಾಕ್ಸಿ ಇಟ್ಟವರೊಬ್ಬರು ಬಂದು, "ಡಾಕ್ಟ್ರೆ, ನಿನ್ನೆ ರಾತ್ರಿ ಕಾರನ್ನು ಬಾಡಿಗೆಗೆ ಓಡಿಸಿದಿರಿ? ಎಷ್ಟು ತೆಗೆದುಕೊಂಡಿರಿ?" ಎಂದು ಕೇಳಿದರು. ನಡೆದದ್ದೆಲ್ಲವನ್ನೂ ತಿಳಿಸಿದಾಗ ಅವರು ನಗಹತ್ತಿದರು, "ಸ್ವಾಮಿ, ನಮ್ಮಲ್ಲಿಗೇ ಅವರು ಮೊದಲು ಬಂದಿದ್ದರು. ನಾವು ಐವತ್ತು ರೂಪಾಯಿ ಬಾಡಿಗೆ ಕೇಳಿದ್ದೆವು. ಆಗ ಅವರು ನಿಮ್ಮನ್ನು ಈ ರೀತಿ ಉಪಯೋಗಿಸಿದರು," ಅಂದರು.

ಡಾಕ್ಟರನಾದ ನಾನು ನನಗರಿವಿಲ್ಲದೆ ಟ್ಯಾಕ್ಸಿ ಡ್ರೈವರನ ಕೆಲಸ ಮಾಡಿದ್ದನ್ನು ತಿಳಿದು ಕುಸಿದು ಕುಳಿತೆ.

• ಡಾ. ಜಿ.ಕೆ. ನಾಯಿಕ, ಮಾಸೂರ

ವಿಸ್ಮಯ-ಗಾಬರಿಗಳಿಂದ ನೋಡುತ್ತಲಿದ್ದ ಹಾಗೆಯೇ ತಮ್ಮ ಡ್ಯೂಟಿ ಮುಗಿಸಿಕೊಂಡು ಬೆಹನ್‌ಳ ಪತಿ ಬಂದರು. ಆತ ವಿಷಯವನ್ನರಿತುಕೊಂಡು ಕೂಡಲೇ ಪೊಲೀಸರಿಗೆ ಫೋನು ಮಾಡಿ ದೂರು ಸಲ್ಲಿಸಿದರು.

ಕೂಡಲೇ ಬಂದ ಪೊಲೀಸರು ಬೆಹನ್‌ಳಿಂದ ಕಪಾಟಿನ ಕೀಲಿ ಕೈ ಪಡೆದು ಮೆಲ್ಲನೇ ಬಾಗಿಲು ತೆರೆದರೆ ಒಳಗಿನಿಂದ ಒಬ್ಬ ಬಿಚ್ಚುಗತ್ತಿಯನ್ನು ಹಿಡಿದಾತ ಥಂಗನೇ ಹೊರನುಗ್ಗಿದ. ಓಡಿ ಹೋಗಲು ಯತ್ನಿಸಿದ ಆತನನ್ನು ಪೊಲೀಸರು ಸಾಹಸದಿಂದಲೇ ಹಿಡಿದು ಗಾಡಿಯಲ್ಲಿ ಕೂಡಿಸಿದರು.

ಇಂದಿಗೂ ನನಗೆ ಒಂದು ವೇಳೆ ಗುಜರಾಥಿ ಬೆಹನ್ ಆ ಕಪಾಟನ್ನು ಮನೆಯೊಳಗೆ ಇಳಿಸಿಕೊಳ್ಳಲು ಒಪ್ಪಿದ್ದರೆ, ಆ ಮೇಲೆ ಕುತೂಹಲಕ್ಕಾಗಿ ಅದರ ಬೀಗ ತೆಗೆದಿದ್ದರೆ ಏನಾಗುತ್ತಿತ್ತೆಂಬ ಯೋಚನೆ ಬರುವುದಿದೆ. ಜತೆಗೆ ಬೆಹನ್‌ಳ ಸಮಯಾನುಸಾರದ ನಿರ್ಧಾರ ಕುರಿತು ಹೆಮ್ಮೆಯೂ ಎನಿಸುತ್ತದೆ.

• ಕಲ್ಪನಾ ಶ್ರೀಧರ ಶಾನಭಾಗ

# ಕಾರಿನೊಳಗಿನ ಮಾರ್ಗಸೂಚಿ

• ಸಂಜೀವ ಆರ್.ಹಲವಾಯಿ

ನೀವು ನಿಮ್ಮ ಗೆಳೆಯನ ಮನೆಗೆ ಹೋಗಲು ಕಾರಿನಲ್ಲಿ ಕುಳಿತು ಸ್ಟಾರ್ಟ್ ಮಾಡಿದಾಗ ಹಾದಿಯೇ ಮರೆತು ಹೋದರೆ ಹೇಗೆ? ಅದಕ್ಕಾಗಿ ನೀವೀಗ ಚಿಂತಿಸದಿರಿ. ನಿಮ್ಮೊಂದಿಗೆ ಕಾರಿನಲ್ಲಿ ಕುಳಿತು ನಿಮಗೆ ಹೋಗಬೇಕಾದ ಸ್ಥಳದ ಮಾರ್ಗ ತೋರಿಸಲು ಕಂಪ್ಯೂಟರ್ ಯಂತ್ರವೊಂದು ಈಗ ಸಿದ್ಧವಾಗಿದೆ. ಜರ್ಮನಿಯ ಬಿ.ಎಮ್.ಡಬ್ಲ್ಯು. ಎಂಬ ವಿಖ್ಯಾತ ಕಾರು ತಯಾರಿಕಾ ಕಂಪನಿಯವರು ತಮ್ಮ 750-I ಮಾದರಿಯ ಸುಖಾಸೀನ ಕಾರುಗಳಲ್ಲಿ ಈ 'ಜಾಣ' ಕಂಪ್ಯೂಟರನ್ನು ಅಳವಡಿಸಿದ್ದಾರೆ. ಈ ಕಂಪ್ಯೂಟರಿನ ಸಂಗ್ರಹಣಾ ತಟ್ಟೆಯ ಮೇಲೆ ಜರ್ಮನಿಯ ಬಹುತೇಕ ಪಟ್ಟಣಗಳು ಮುದ್ರಿತವಾಗಿವೆ. ಚಾಲಕನ ಎದುರಿನಲ್ಲಿಯೇ ಅಳವಡಿಸಲಾದ ಈ ಕಂಪ್ಯೂಟರಿನ ಪುಟ್ಟ ಪರದೆಯ ಮೇಲೆ ಕಾರು ಓಡುತ್ತಿರುವ ದಿಕ್ಕು, ಕಾರಿನ ಸಧ್ಯದ ವೇಗ, ಕಾರು ಸಧ್ಯ ಇರುವ ಸ್ಥಳದ ಬಗ್ಗೆ ಮಾಹಿತಿ ಲಭ್ಯವಾಗುತ್ತದೆ. ಬಾಹ್ಯಾಕಾಶದಲ್ಲಿ ಸುತ್ತುತ್ತಿರುವ ಉಪಗ್ರಹಗಳನ್ನು ಕೂಡ ಸಂಪರ್ಕಿಸಿ ತನಗೆ ಬೇಕಾದ ಮಾಹಿತಿಯನ್ನು ಸಂಗ್ರಹಿಸಲೂ ಈ ಕಂಪ್ಯೂಟರ್ ಶಕ್ತವಾಗಿದೆ.

ಕಾರಿನೊಳಗಿನ ಈ ಕಂಪ್ಯೂಟರಿನ ಉಪಯೋಗ ಅರಿಯಲು ಕೆಲವೇ ಗಂಟೆಗಳು ಸಾಕು. ಒಂದೇ ಒಂದು ನಿಯಂತ್ರಕ ಗುಂಡಿಯನ್ನು ಹೊಂದಿರುವ ಈ ಕಂಪ್ಯೂಟರಿನ ಬಳಕೆ ಚಾಲಕರಿಗೆ ಇತೀ ಸುಲಭ. ಈ ಕಾರಿನಲ್ಲಿ ಕುಳಿತು ನೀವು ಹೋಗಬೇಕಾದ ಸ್ಥಳವನ್ನು ಕಂಪ್ಯೂಟರ್ ಪರದೆಯ ಮೇಲೆ ಆರಿಸಿಕೊಂಡರೆ ಸಾಕು, ಕಾರು ಸಧ್ಯ ಇರುವ ಸ್ಥಳದಿಂದ ನೀವು ತಲುಪಬೇಕಾದ ಸ್ಥಳಕ್ಕೆ ತಲುಪುವ ಅತ್ಯಂತ ಸಮೀಪದ ಮಾರ್ಗವನ್ನು ತೋರಿಸುವ ನಕಾಶೆ ಕ್ಷಣಮಾತ್ರದಲ್ಲಿ ಪರದೆಯ ಮೇಲೆ ಮೂಡುತ್ತದೆ! ನೀವು ಅಕಸ್ಮಾತ್ ಕಾರನ್ನು ತಪ್ಪು ದಾರಿಗೆ ಕೊಂಡೊಯ್ದಿರಿ ಎಂದಿಟ್ಟುಕೊಳ್ಳಿ, ಆಗ ಈ ಕಂಪ್ಯೂಟರ್ ನಿಮ್ಮ ಮೇಲೆ ಸಿಟ್ಟಿಗೇಳುವದಿಲ್ಲ, ಬದಲಾಗಿ ಹೊಸ ಮಾರ್ಗಸೂಚಿ ನಕ್ಷೆಯನ್ನು ಕೂಡಲೇ ತಯಾರಿಸಿ ಮತ್ತೆ ಪರದೆಯ ಮೇಲೆ ತೋರಿಸುತ್ತದೆ. ಹೀಗೆ ನಿಮ್ಮ ಪ್ರಮಾಣ ಸಾಗಿದಾಗ, ನೀವು ತಲುಪಬೇಕಾದ ಸ್ಥಳ ಇನ್ನೂ ಎಷ್ಟು ದೂರದಲ್ಲಿದೆ ಎಂದು ತಿಳಿಯಬಯಸಿದರೆ, ಅದರ ಅಂತರದ ಜೊತೆಗೆ ಮುಂದಿನ ಮುಖ್ಯ ಪಟ್ಟಣ ಅಥವಾ ಮುಖ್ಯ ಸ್ಥಳದಿಂದ ನೀವೆಷ್ಟು ದೂರದಲ್ಲಿರುವಿರಿ ಎಂಬುದನ್ನು ಕೂಡ ಈ ಕಂಪ್ಯೂಟರ್ ತಿಳಿಸುತ್ತದೆ.

ನೆದರ್‌ಲ್ಯಾಂಡ್ ಫಿಲಿಪ್ಸ್ ಕಂಪನಿಯ ಸಹಯೋಗದೊಂದಿಗೆ ಜರ್ಮನಿಯ ಬಿ.ಎಮ್.ಡಬ್ಲ್ಯು. ಕಂಪನಿಯವರು ಸಿದ್ಧಪಡಿಸಿದ ಈ 'ಕಾರೊಳಗಿನ ಕಂಪ್ಯೂಟರ್'ನ ಸಂಗ್ರಹಣಾ ತಟ್ಟೆಯ ಮೇಲೆ ಬರುವ ವರ್ಷಗಳಲ್ಲಿ ಫ್ರಾನ್ಸ್ ಹಾಗೂ ಯುರೋಪಿನ ಪ್ರಮುಖ ಪಟ್ಟಣಗಳ ರಸ್ತೆ ನಕಾಶೆಗಳು ಮೂಡಲಿವೆ.

ವಾಹನಗಳ ದಟ್ಟಣೆಯನ್ನು ತಪ್ಪಿಸುವುದರ ಜೊತೆಗೆ ಇಂಧನದ ಉಳಿತಾಯ ಹಾಗೂ ಪ್ರಯಾಣದ ಸೂಮಯವನ್ನು ಕಡಿತಗೊಳಿಸಲು ಸಹಾಯಕಾರಿಯಾಗಬಲ್ಲ ಈ ಕಂಪ್ಯೂಟರ್‌ಯುಕ್ತ ಕಾರುಗಳು ಯುರೋಪಿನ ಪಟ್ಟಣಗಳಲ್ಲಿ ಸಂಚರಿಸಬಲ್ಲ ಕಾಲ ಈಗ ದೂರವಿಲ್ಲ.

ನಾವೀಗ "ಮನಸ್ಸಿದ್ದಲ್ಲಿ ಮಾರ್ಗವಿದೆ" ಎಂಬುದರ ಬದಲು, ಕಾರು ಇದ್ದಲ್ಲಿ ಕಂಪ್ಯೂಟರ್ ಇದೆ, ಕಂಪ್ಯೂಟರ್ ಇದ್ದಲ್ಲಿ ಮಾರ್ಗವಿದೆ" ಎಂದೆನ್ನಲು ಅಡ್ಡಿಯಿಲ್ಲ. ●



# ಕರ್ಮವೀರ

ತುಂಬಿದ ಮನೆಗೊಂದು ಚೆಂದದ ಸಾಪ್ತಾಹಿಕ

## ಮನೆ ಬಾಗಿಲಿಗೇ ಕರ್ಮವೀರ




* ಅಂಗಡಿಯಲ್ಲಿ ಸಂಚಿಕೆ ಖಾಲಿ ಆಯ್ತೆಂದು ನಿರಾಶರಾಗಬೇಕಿಲ್ಲ.
* ಮಾರುಕಟ್ಟೆಗೆ ಹೋಗುವ ತಾಪತ್ರಯವಿಲ್ಲ.
* ಮನೆ ಬಾಗಿಲಿಗೇ ನಡೆದು ಬರುತ್ತಾನೆ, ಕರ್ಮವೀರ.

ಒಂದು ಪ್ರತಿಗೆ ರೂ. 5-00

| | ಬಿಡಿಯಾಗಿ ಕೊಂಡರೆ | ಚಂದಾದಾರರಾದರೆ |
|---|---|---|
| ಆರು ತಿಂಗಳಿಗೆ | ರೂ. 130-00 | ರೂ. 125-00 |
| ಒಂದು ವರ್ಷಕ್ಕೆ | ರೂ. 260-00 | ರೂ. 245-00 |

ನೆನಪಿಡಿ: ಅಂಚೆ ವೆಚ್ಚವನ್ನು ನಾವೇ ಭರಿಸುತ್ತೇವೆ
ಜೊತೆಗೆ ವರ್ಷಕ್ಕೆ ಹದಿನೈದು ರೂಪಾಯಿ ರಿಯಾಯಿತಿ

ನೀವು ಮಾಡಬೇಕಾದ್ದು ಇಷ್ಟೇ : ಪ್ರಸಾರಾಂಗ ವ್ಯವಸ್ಥಾಪಕರು, ಕರ್ಮವೀರ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-20. ಈ ವಿಳಾಸಕ್ಕೆ ಎಂ.ಓ. ಅಥವಾ ಡಿ.ಡಿ. ಮೂಲಕ ಚಂದಾ ಹಣ ಕಳಿಸಿರಿ. ಮುಂದಿನ ವಾರದಿಂದಲೇ 'ಕರ್ಮವೀರ' ನಿಮ್ಮ ಮನೆಯಲ್ಲಿ ಹಾಜರ್.

ಅದು ಪಂದ್ಯದ ಕೊನೆಯ ದಿನ. ಆಸ್ಟ್ರೇಲಿಯಕ್ಕೆ ನಿಚ್ಚಳ ಗೆಲುವು ಪಡೆಯಲು ಬೇಕಾದದ್ದು ೧೬೫ ಓಟಗಳು. ಕೈಯಲ್ಲಿದ್ದದ್ದು ಎಂಟು ವಿಕೆಟ್‌ಗಳು. ಮೆಲ್ಬೋರ್ನ್ ಮೈದಾನ ಪ್ರೇಕ್ಷಕರಿಂದ ಭರ್ತಿಯಾಗಿತ್ತು. ತಮ್ಮವರ ಅಮೋಘ ಗೆಲುವಿಗಾಗಿ ಆ ಮಂದಿ ಹಾತೊರೆದು ಕುಳಿತಿದ್ದರು.

ನಾಲ್ಕು ಟೆಸ್ಟ್‌ಗಳ ಈ 'ಆ್ಯಷಸ್' ಸರಣಿಯಲ್ಲಿ ಮೊದಲೆರಡು ಟೆಸ್ಟ್‌ಗಳು ತಲಾ ಒಂದರಂತೆ ಎರಡೂ ತಂಡಗಳಿಗೆ ಹಂಚಿಹೋಗಿದ್ದವು.



# ಕ್ರಿಕೆಟ್ ಪುಟ

● ಆದಿಕೇಶವ

## ಅಂದಿನ ಆಟ ! ಇಂದಿನ ನೋಟ !

ಹೀಗಾಗಿ ಈ ಪಂದ್ಯಕ್ಕೆ ಎಲ್ಲಿಲ್ಲದ ಮಹತ್ವ. ಪ್ರಥಮ ಟೆಸ್ಟಿನಲ್ಲಿ ವೀರಾವೇಶದಿಂದ ಹೋರಾಡಿದ್ದ ಆಸ್ಟ್ರೇಲಿಯ ಇನಿಂಗ್ಸ್ ಹಾಗೂ ೧೫೪ ಓಟಗಳಿಂದ ತನ್ನ ಬದ್ಧವೈರಿಯನ್ನು ಸದೆಬಡಿದಿತ್ತು. ತಾವೇನು ಕಮ್ಮಿಯಿಲ್ಲ ಎನ್ನುವಂತೆ ಆಡಿದ ಇಂಗ್ಲೆಂಡಿನವರು ಎರಡನೆಯ ಟೆಸ್ಟಿನಲ್ಲಿ ತಿರುಗಿಬಿದ್ದು ೩೮ ಓಟಗಳಿಂದ ಜಯ ಸಾಧಿಸಿದ್ದರು.

ಎರಡನೆ ಟೆಸ್ಟಿನಲ್ಲಿ ವೇಗದ ಬೌಲರ್ ಫ್ರ್ಯಾಂಕ್ ಟೈಸನ್ ಇಂಗ್ಲೆಂಡಿನ ಗೆಲುವಿನ ರೂವಾರಿ ಎನಿಸಿದ್ದ. ಇದಕ್ಕೂ ಮುನ್ನ ಬ್ಯಾಟಿಂಗ್ ಮಾಡುವಾಗ ರೇ ಲಿಂಡ್‌ವಾಲ್ ಬೌಲಿಂಗ್‌ನಲ್ಲಿ ಎಗರಿಬಂದ ಬೌನ್ಸರ್‌ನಲ್ಲಿ ಹೊಡೆತ ತಿಂದಿದ್ದ ಟೈಸನ್ ಪ್ರತಿಯಾಗಿ ಎರಡನೆ ಇನ್ನಿಂಗ್ಸ್‌ನಲ್ಲಿ ಆಸ್ಟ್ರೇಲಿಯದ ಆರು ವಿಕೆಟ್‌ಗಳನ್ನು ತನ್ನ ಜೇಬಿಗೆ ಸೇರಿಸಿ ತಂಡದ ನಾಯಕ ಲೆನ್ ಹಟನ್‌ಗೆ ಗೆಲುವಿನ ರುಚಿ ನೀಡಿದ.

ಮೂರನೆ ಟೆಸ್ಟ್‌ನಲ್ಲಿಯೂ ಇಂಗ್ಲೆಂಡ್ ಫ್ರ್ಯಾಂಕ್‌ನನ್ನೆ ನಂಬಿಕೊಂಡಿತ್ತು. ಟೈಸನ್ ಇಲ್ಲಿಯೂ ಬೌಲಿಂಗ್ ಚಮತ್ಕಾರ ತೋರಬಹುದೆಂಬ ಆಸೆ ಹಟನ್ ಅವರದು. ಎಂಥದೇ ಬೌಲಿಂಗ್ ಇರಲಿ. ನಮ್ಮ ಗೆಲುವಿಗೆ ಕೇವಲ ೧೬೫ ಓಟ ಸಾಕು, ಕೈಯಲ್ಲಿ ವಿಕೆಟ್‌ಗಳಿವೆ ಎನ್ನುವಂತೆ ಆಸ್ಟ್ರೇಲಿಯ ನಿರಾತಂಕವಾಗಿ ಅಂತಿಮ ದಿನದ ಆಟಕ್ಕೆ ಸಿದ್ಧವಾಗಿತ್ತು. ನಿರ್ಣಾಯಕವಾಗಬಲ್ಲ ಈ ಪಂದ್ಯದಲ್ಲಿ ದಿನದ ಮೊದಲ ಚೆಂಡು ಎಸೆಯುವಂತೆ ಹಟನ್ ಟೈಸನ್‌ಗೆ ಆಹ್ವಾನ ನೀಡಿದ. ಇದನ್ನು ಸ್ವೀಕರಿಸಿದ ನಾರ್ತ್ ಹ್ಯಾಂಪ್ಟನ್ನಿನ ಶಾಲಾ ಶಿಕ್ಷಕ ಟೈಸನ್ ಮತ್ತೊಂದು ಐತಿಹಾಸಿಕ ಟೆಸ್ಟ್ ಪಂದ್ಯದ ದಾಖಲೆಗೆ ಚೆಂಡೆಸೆಯಲು ಓಟ ಆರಂಭಿಸಿದ.

### ಮೈದಾನದಲ್ಲಿ

ಕಾಲಿನ್ ಕೌಡ್ರೆ (೧೦೨) ಅವರ ಹೊಣೆಗಾರಿಕೆಯ ಆಟ ಪ್ರಥಮ ಸರದಿಯಲ್ಲಿ ಪೂರ್ತಿ ನೆಲ ಹಿಡಿದಿದ್ದ ಇಂಗ್ಲೆಂಡಿಗೆ ಉಸಿರಾಡಲು ಚೇತರಿಕೆ ಕೊಟ್ಟಿತು. ಪಂದ್ಯದ ಆರಂಭದ ದಿನವೇ ಒಣಗಿದ ಎಲೆಗಳು ಉದುರುವಂತೆ ವಿಕೆಟ್ ಒಪ್ಪಿಸಿದ ಇಂಗ್ಲೆಂಡ್ ೧೦೦ರ ಗಡಿ ತಲುಪುವದೂ ಅಸಾಧ್ಯವಾಗಿತ್ತು. ಆಗ ಕೌಡ್ರೆ ೧೯೧ ನಿಮಿಷ ಗಟ್ಟಿಯಾಗಿ ನಿಂತು ಶತಕ ಬಾರಿಸಿದ. ತಂಡ ಹಾಗೂ ಹೀಗೂ

# ಟೈಸನ್ 'ತೂಫಾನ್'ಗೆ ಬೆದರಿದ ಆಸ್ಟ್ರೇಲಿಯ

ಪಂದ್ಯ: ಆಸ್ಟ್ರೇಲಿಯ ವಿ. ಇಂಗ್ಲೆಂಡ್ , ಮೂರನೆ ಟೆಸ್ಟ್ ೧೯೫೪-೫೫
ಸ್ಥಳ: ಮೆಲ್ಬೋರ್ನ್ ದಿನಾಂಕ: ಡಿಸೆಂಬರ್ ೩೧, ಜನವರಿ ೧, ೩, ೪, ೫.

ತಿಣುಕಾಡಿ ೧೯೧ ಸ್ಕೋರು ಮಾಡಿತು. ಮೈಕ್ (೩೦) ಹಾಗೂ ಟಿ.ಜಿ. ಇವಾನ್ಸ್ (೨೦) ತಮಗಾದಷ್ಟು ಕಾಣಿಕೆ ಸಲ್ಲಿಸಿದರು. ಆ್ಯಷಸ್ ಸರಣಿಯಲ್ಲೇ ಇದು ಇಂಗ್ಲೆಂಡಿನ ಅತಿ ಕಡಿಮೆ ಸ್ಕೋರಾಯಿತು.

ದೊಡ್ಡ ಮೊತ್ತ ಗಳಿಸುವ ಕನಸು ಕಂಡಿದ್ದ ಇಂಗ್ಲೆಂಡಿಗೆ ಬಿರುಗಾಳಿಯಂತೆ ಅವತರಿಸಿದ ಮಿಲ್ಲರ್ (೧೪ / ೩) ಆರ್ಚರ್ (೩೩/ ೪) ತಮ್ಮವರಿಗೆ ಮೇಲುಗೈ ಪಡೆಯುವ ಆಸೆ ಮೂಡಿಸಿದರು.

ಇಂಗ್ಲೆಂಡಿನ ವಿಕೆಟ್ಟುಗಳನ್ನು ೨೦೦ರೊಳಗೆ ಕಬಳಿಸಿದ ಆಸ್ಟ್ರೇಲಿಯನ್ನರ ಹುರುಪು ಬಹಳ ಹೊತ್ತು ಉಳಿಯಲಿಲ್ಲ. ಅವರ ಬ್ಯಾಟಿಂಗ್ ಸಹ ಅಷ್ಟೇ ನೀರಸವಾಗಿತ್ತು. ಯಾವೊಬ್ಬ ಬ್ಯಾಟ್ಸಮನ್ನನೂ ಅರ್ಧಶತಕ ಮಾಡಲಿಲ್ಲ. ಇದರಲ್ಲೆ ವಿಕೆಟ್ ಕೀಪರ್ ಲೆನ್ ಮಡ್ಡಾಕ್ಸ್ (೪೭) ತಂಡದ ಮೊತ್ತ ಆರು ವಿಕೆಟ್‌ಗೆ ೧೧೫ ಆಗಿದ್ದಾಗ ಗಟ್ಟಿಯಾಗಿ ನಿಂತು ತಂಡದ ಗರಿಷ್ಠ ಸ್ಕೋರರ್ ಎನಿಸಿ ಹಾರ್ವೆ (೩೧) ಜಾನ್ಸನ್ (ಅಜೇಯ ೩೩) ಅವರೊಂದಿಗೆ ತಮ್ಮವರ ಮಾನ ಕಾಪಾಡಿದ. ಆಸ್ಟ್ರೇಲಿಯದ ಐವರನ್ನೂ ಬಲಿ ಹಾಕಿದ ಬ್ರಿಯನ್ ಸ್ಟಾಥಮ್ (೬೦/೫) ಯಶಸ್ವಿ ಬೌಲರ್ ಎನಿಸಿಕೊಂಡ. ಆದರೆ ಕಡಿಮೆ ಸ್ಕೋರ್ (೨೩೧) ಮಾಡಿದರೂ ಆಸ್ಟ್ರೇಲಿಯ ಎದುರಾಳಿ ಮೇಲೆ ೪೦ ಓಟಗಳ ಲೀಡ್ ಪಡೆದ ತೃಪ್ತಿ ಹೊಂದಿತು.

ಇಂಗ್ಲೆಂಡಿನ ಎರಡನೆ ಇನಿಂಗ್ಸ್‌ನಲ್ಲಿ ಪೀಟರ್ ಮೇನದ್ದೇ ಆಟ (೯೧). ಆಕರ್ಷಕ ಸ್ಟ್ರೇಟ್ ಡ್ರೈವ್ಸ್‌ಗಳನ್ನು ಪ್ರದರ್ಶಿಸಿದ ಪೀಟರ್ ತಂಡದ ಮೊತ್ತವನ್ನು ೨೭೯ಕ್ಕೆ ಏರಿಸಿದ. ನಂತರ ಲೆನ್ ಹಟನ್ (೪೨), ವಾರ್ಡ್ಲೆ (೩೮) ತಂಡದ ನೆರವಿಗೆ ಬಂದರು. ಇವರೆಲ್ಲರ ಆಟ ಮುಗಿದ ನಂತರ ಇಂಗ್ಲೆಂಡ್ ಎದುರಾಳಿಗೆ ಜಯಗಳಿಸಲು ೨೪೦ ಓಟಗಳ ಗುರಿ ಒಡ್ಡಿತು.

ಪ್ರವಾಸಿಗರನ್ನು ಕಡಿಮೆ ಮೊತ್ತಕ್ಕೆ ಉರುಳಿಸುವ ಜವಾಬ್ದಾರಿ ಹೊತ್ತಿದ್ದ ಬಿಲ್ ಜಾನ್‌ಸ್ಟನ್ (೮೫/ ೫) ತನ್ನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ.

ನಾಲ್ಕನೆ ದಿನದ ಕೊನೆಯ ಚೆಂಡೆಸೆತವಾದಾಗ ಆಸ್ಟ್ರೇಲಿಯದ ಎರಡನೆ ಇನಿಂಗ್ಸ್ ಸ್ಕೋರು ಎರಡು ವಿಕೆಟ್‌ಗಳಿಗೆ ೭೯. ಆರಂಭ ಆಟಗಾರರಿಬ್ಬರೂ ಪೆವಿಲಿಯನ್ ಕಂಡಿದ್ದರು. ಟೈಸನ್ ಎಸೆದ ಅತ್ಯುತ್ತಮ ಚೆಂಡನ್ನು ಸರಿಯಾಗಿ ಗುರುತಿಸಲಾಗದ ಆರ್ಥರ್ ಮೋರಿಸ್, ಕೌಡ್ರೆಗೆ ಕ್ಯಾಚ್ ನೀಡಿ ಮೊದಲ ಬಲಿಪಶುವಾದ. ನಂತರ ಆ್ಯಪಲ್ ಯಾರ್ಡ್, ಲೆಸ್ ಫಾವೆಲ್‌ನ (೩೦) ವಿಕೆಟ್ ಎಗರಿಸಿದ. ಇವೆರಡೂ ವಿಕೆಟ್‌ಗಳು ಪತನಗೊಳ್ಳುವದರೊಂದಿಗೆ ವಿಕೆಟ್ ವಿಚಿತ್ರವಾಗಿ ವರ್ತಿಸತೊಡಗಿತು. ಇದನ್ನು ನೋಡಿದವರೆಲ್ಲರೂ ಪಂದ್ಯದ

ಕೊನೆಯ ದಿನ ಬ್ಯಾಟ್ಸಮನ್ ಮತ್ತು ಸ್ಪಿನ್ನರ್‌ಗಳ ನಡುವೆ ಸಂಘರ್ಷ ಗ್ಯಾರಂಟಿ ಎಂಬ ತೀರ್ಮಾನಕ್ಕೆ ಬಂದುಬಿಟ್ಟಿದ್ದರು.

ಕಡೆಯ ದಿನದ ಆಟ ಆರಂಭವಾದಾಗ ಆಸ್ಟ್ರೇಲಿಯದ ಕೈಯಲ್ಲಿದ್ದದ್ದು ಎಂಟು ವಿಕೆಟ್‌ಗಳು. ಗೆಲ್ಲಲು ಬೇಕಾದದ್ದು ೧೬೫ ಓಟಗಳು. ಇಂಗ್ಲೆಂಡ್ ಟೈಸನ್ನನ್ನೇ ನಂಬಿ ಕೂತಿತ್ತು. ಈ ಹಂತದಲ್ಲಿ ಬೌಲಿಂಗಿಗೆ ಇಳಿದ ಟೈಸನ್ ಕ್ಷಿಪ್ರದಲ್ಲೇ ಎರಡು ವಿಕೆಟ್ ಕಬಳಿಸಿ ಆತಿಥೇಯರಿಗೆ ಆಘಾತವುಂಟುಮಾಡಿದ.

ವಿಕೆಟ್ ಕೀಪರ್ ಗಾಡ್‌ಫ್ರೆ ಇವಾನ್ಸ್ ತನ್ನ ಎಡ ತುದಿಗೆ ಹಾರಿ ನೀಲ್ ಹಾರ್ವೆಯ ಕ್ಯಾಚ್ ಹಿಡಿದಾಗ ಆಸ್ಟ್ರೇಲಿಯದ ಪಾಳೆಯದಲ್ಲಿ ಕಸಿವಿಸಿ ಶುರುವಾಯಿತು.

ಐದನೇ ದಿನದ ಪೂರ್ತಿ ಆಟವೆಲ್ಲಾ 'ಟೈಸನ್ ಮಯ'ವಾಯಿತು. ನಿರೀಕ್ಷಿಸಲಾರದಷ್ಟು ಬೌನ್ಸರ್‌ಗಳಿಗೆ ಅವಕಾಶ ಕೊಟ್ಟ ಈ ವಿಕೆಟ್‌ನಲ್ಲಿ ಚೆಂಡನ್ನು ಗಾಳಿಯಲ್ಲಿ ರಾಕೆಟ್‌ನಂತೆ ಎಸೆದ ಟೈಸನ್ ೫೧ ಎಸೆತಗಳಲ್ಲಿ ೧೬ ಓಟ ನೀಡಿ ಆರು ವಿಕೆಟ್‌ಗಳನ್ನು ಹೆಕ್ಕಿದ. ಜಯಗಳಿಸುವ ಆಸೆ ಇಟ್ಟುಕೊಂಡಿದ್ದ ಆಸ್ಟ್ರೇಲಿಯ ೧೧೧ ಓಟಗಳಿಗೆ ತನ್ನ ಸರದಿ ಮುಗಿಸಿ ಇಂಗ್ಲೆಂಡಿಗೆ ೧೨೮ ಓಟಗಳ ಅಭೂತಪೂರ್ವ ವಿಜಯ ದೊರೆಯಲು ಕಾರಣವಾಯಿತು. ಒಂದು ಕಡೆ ಸ್ಟಾಥಮ್(೧೯/ ೨)ನ ಬೌಲಿಂಗ್ ಮತ್ತು ಉತ್ಕೃಷ್ಟ ಮಟ್ಟದ ಫೀಲ್ಡಿಂಗ್ ಬೆಂಬಲ ಪಡೆದ ಟೈಸನ್ ಆಸ್ಟ್ರೇಲಿಯಕ್ಕೆ ಬಿರುಗಾಳಿಯಂತೆ ಅವತರಿಸಿ ತಂಡದ ಗೆಲುವಿಗೆ ಕಾರಣೀಭೂತನೆನಿಸಿದ. ಕೇವಲ ೧೨.೩ ಓವರುಗಳನ್ನು ಮಾಡಿದ ಟೈಸನ್ ೨೭ ಓಟ ನೀಡಿ ಏಳು ವಿಕೆಟ್‌ಗಳನ್ನು ಉರುಳಿಸಿದ್ದು ಆತಿಥೇಯರಿಗೆ ಈ ಪಂದ್ಯ ಬಹಳ ಕಾಲದವರೆಗೆ ಕಣ್ಣೆದುರು ಕಟ್ಟುವಂತಾಯಿತು.

ಫ್ರ್ಯಾಂಕ್ ಟೈಸನ್ ಅಭಿಪ್ರಾಯಪಟ್ಟದ್ದು ಹೀಗೆ: "ಕಲ್ಪನಾಮಯವಾದ ಈ ನನ್ನ ಪ್ರದರ್ಶನ ನನ್ನನ್ನು ಮಿತಿಮೀರಿ ಹೊಗಳುವಂತೆ ಮಾಡಿತು. ಬ್ರಿಯಾನ್ ಸ್ಟಾಥಮ್ ಪ್ರತಿ ಹಂತದಲ್ಲಿ ಚೆನ್ನಾಗಿ ಬೌಲ್ ಮಾಡಿದ. ಆದರೆ ಅದೃಷ್ಟ ನನ್ನ ಪರವಾಗಿತ್ತು. ನನ್ನ ಈ ಯಶಸ್ಸಿಗೆ ಶ್ರೇಷ್ಠಮಟ್ಟದ ಫೀಲ್ಡಿಂಗೇ ಕಾರಣ. ಅದಿಲ್ಲದಿದ್ದರೆ ನನ್ನಿಂದ ಈ ಸಾಧನೆ ಸಾಧ್ಯವೆನಿಸುತ್ತಿತ್ತೆ?"

ಗಾಡ್‌ಫ್ರೆ ಇವಾನ್ಸ್, "ಟೈಸನ್ ಪ್ರದರ್ಶನದ ಬಗ್ಗೆ ಎರಡು ಮಾತಿಲ್ಲ. ವಿಕೆಟ್ ಹಿಂದೆ ನಿಂತು ಕ್ಷೇತ್ರರಕ್ಷಣೆ ಮಾಡಿದ ನಾನು ಇದಕ್ಕೂ ಮೊದಲು ಇಂಥ ಬಿರುಗಾಳಿಯ ಬೌಲಿಂಗನ್ನೇ ಕಂಡಿರಲಿಲ್ಲ. ಬ್ಯಾಟ್ಸ್‌ಮನ್‌ರನ್ನು ಸುತ್ತುವರೆದಿದ್ದ ನಮಗೆ ಟೈಸನ್‌ನ ಬೌಲಿಂಗ್ ಭರಾಟೆ ಶಾಶ್ವತವಾಗಿ ನೆನಪಿನಲ್ಲಿ ಉಳಿಯುತ್ತದೆ," ಎಂದು ಪ್ರಶಂಸಿಸಿದರು.

ಅಡಿಲೇಡ್‌ನಲ್ಲಿ ನಡೆದ ನಾಲ್ಕನೇ ಟೆಸ್ಟ್ ಪಂದ್ಯವನ್ನು ಐದು ವಿಕೆಟ್‌ಗಳಿಂದ ಗೆದ್ದ ಇಂಗ್ಲೆಂಡ್ ಆ್ಯಷಸ್ ಸರಣಿಯನ್ನು ಉಳಿಸಿಕೊಂಡಿತು. ಈ ಪಂದ್ಯದಲ್ಲೂ ಟೈಸನ್‌ನ ವೇಗ ಮತ್ತು ಆ್ಯಪೆಲ್ ಯಾರ್ಡ್‌ನ ಸ್ಪಿನ್ ಚಮತ್ಕಾರ ಇಂಗ್ಲೆಂಡ್ ಗೆಲುವಿಗೆ ಮೂಲವಾದುವು. ಇವರಿಬ್ಬರೂ ಆರು ವಿಕೆಟ್ ಪಡೆದು ಆಸ್ಟ್ರೇಲಿಯಕ್ಕೆ ಮರೆಯಲಾರದ ಸೋಲಿನ ಕಹಿ ನೀಡಿದರು.

ಆಸ್ಟ್ರೇಲಿಯ ಮತ್ತೊಮ್ಮೆ ತನ್ನ ಬ್ಯಾಟಿಂಗ್‌ನಲ್ಲಿ ವೈಫಲ್ಯ ಕಂಡು ಎರಡನೆ ಇನಿಂಗ್ಸ್‌ನಲ್ಲಿ ೧೧೧ಕ್ಕೆ ತನ್ನ ಸರದಿ ಮುಗಿಸಿ ಅವಮಾನಕಾರಿ ಸೋಲುಂಡಿತು.

ಸಿಡ್ನಿಯಲ್ಲಿ ನಡೆದ ಐದನೆ ಟೆಸ್ಟಿನ ಮೊದಲ ಮೂರು ದಿನಗಳಂತೂ ವರುಣನ ಅವಕೃಪೆಗೀಡಾದವು. ಉಳಿದ ಎರಡುದಿನ ಆಟ ನಡೆದು ಅಲ್ಲಿಯೂ ಆಸ್ಟ್ರೇಲಿಯ ಸೋಲುವ ಸ್ಥಿತಿಗೆ ಬಂದಿತ್ತಾದರೂ ಹಾಗಾಗಲಿಲ್ಲ. ಲೆನ್ ಹಟನ್ ಅವರೊಂದಿಗೆ ಸರದಿ ಆರಂಭಿಸಲು ಆಯ್ಕೆಯಾದ ಟಾಮ್ ಗ್ರಾವೆನಿ ಶತಕ ಹೊಡೆದು ಇಂಗ್ಲೆಂಡಿಗೆ ಉತ್ತಮ ಆರಂಭ ನೀಡಿದ.

ನಂತರ ವಾರ್ಡ್ಲೆ (೭೯/ ೫) ಮಾರಕವಾಗಿ ಪರಿಣಮಿಸಿ ಆಸ್ಟ್ರೇಲಿಯ 'ಫಾಲೋಆನ್' ಪಡೆಯುವಂತೆ ಮಾಡಿದ. ಇಲ್ಲಿಯೂ ಆತಿಥೇಯರ ಕಥೆ ಮುಗಿದ ಹಾಗೆಯೇ ಅನ್ನುವಂತಿತ್ತು. ಏನಾದರೂ ಮಾಡಿ ಪಂದ್ಯವನ್ನು 'ಡ್ರಾ' ಮಾಡಿಕೊಳ್ಳಬೇಕಾದ ಸಂದಿಗ್ಧ ಪರಿಸ್ಥಿತಿಯಲ್ಲಿದ್ದ ಆಸ್ಟ್ರೇಲಿಯ ಎರಡನೆ ಇನಿಂಗ್ಸ್‌ನಲ್ಲಿ ಕೊನೆಯ ನಿಮಿಷದ ಆಟ ಮುಗಿದಾಗ ಆರು ವಿಕೆಟ್‌ಗಳಿಗೆ ೧೧೮ ಓಟ ಗಳಿಸಿ ಅಂತೂ ಸೋಲಿನಿಂದ ಪಾರಾದೆವು ಎಂಬ ಸಮಾಧಾನದ ಉಸಿರೆಳೆಯಿತು. ●

ಗಲಿವರನ ಯಾತ್ರೆಯ
ಎರಡನೆಯ ಭಾಗ

ಪುಸ್ತಕ ವಿಭಾಗ

• ಜೊನಾಥನ್ ಸ್ವಿಫ್ಟ್

# ಲಾಪ್ಯುಟಾ ದ್ವೀಪದತ್ತ...

ಸಂಗ್ರಹಾನುವಾದ:
ಡಾ. ಬಿ.ಎಸ್. ಶೈಲಜಾ

# ಲಾಪುಟಾ ದ್ವೀಪದತ್ತ...



## ಜೊನಾಥನ್ ಸ್ವಿಫ್ಟ್

ತನ್ನ 'ಗಲಿವರನ ಪ್ರವಾಸಗಳು' ಕೃತಿಯ ಮೂಲಕ ಅಮರನಾಗಿ ಉಳಿದಿರುವ ಜೊನಾಥನ್ ಸ್ವಿಫ್ಟ್ ಅದರದೇ ಮುಂದುವರಿದ ಅಥವಾ ಎರಡನೆಯ ಭಾಗವಾಗಿ ಬರೆದದ್ದು ಈ 'ಲಾಪುಟಾ ದ್ವೀಪದತ್ತ....' ಕ್ರೈಸ್ತ ಧರ್ಮಬೋಧಕನಾಗಿ, ಕವಿಯಾಗಿ, ರಾಜಕೀಯ ಲೇಖನಗಳ ಕರ್ತೃವಾಗಿ ದುಡಿದ ಆತ ಲೋಕಕ್ಕೆ ಪರಿಚಿತನಾದದ್ದು ಖ್ಯಾತ ವಿಡಂಬನಕಾರನಾಗಿಯೆ. ಇಂಗ್ಲೀಷ್ ಮೂಲದವನಾದರೂ ಹುಟ್ಟಿದ್ದು ಐರ್‌ಲಂಡಿನ ಡಬ್ಲಿನ್ನಿನಲ್ಲಿ (೧೬೬೭ರ ನವಂಬರ್ ೩೦). ಬಡತನ ಆತನನ್ನು ಹುಟ್ಟುವ ಮೊದಲೇ ಅಪ್ಪಿಕೊಂಡಿತ್ತು. ತುಂಬ ಕಷ್ಟ-ಕಾರ್ಪಣ್ಯಗಳಲ್ಲೇ ಬೆಳೆದ. ಇಪ್ಪತ್ತೇಳನೆಯ ವಯಸ್ಸಿನವರೆಗೂ ಒಳ್ಳೆಯ ಕೆಲಸ ಸಿಗದ ಕಾರಣದಿಂದ ಆತ ಕ್ರೈಸ್ತ ಧರ್ಮಬೋಧಕನಾಗಬೇಕಾಯಿತು. ಬೆಲ್‌ಫಾಸ್ಟ್ ಬಳಿ ವಾಸಿಸತೊಡಗಿದ ಆತ ಅಷ್ಟರಲ್ಲಾಗಲೇ 'ದಿ ಟೇಲ್ ಆಫ್ ಎ ಟಬ್' ಹಾಗೂ 'ದಿ ಬ್ಯಾಟಲ್ ಆಫ್ ದಿ ಬುಕ್ಸ್' ಎಂಬ ಯಶಸ್ವಿ ವಿಡಂಬನೆಗಳನ್ನು ಬರೆದಿದ್ದ. ಮೊದಲನೆಯದರಲ್ಲಿ ಧರ್ಮ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿನ ಭ್ರಷ್ಟತೆಯನ್ನು ಲೇವಡಿ ಮಾಡಿದ್ದರೆ ಎರಡನೆಯದರಲ್ಲಿ ಪ್ರಾಚೀನ ಕಲಿಕೆ ಹಾಗೂ ಆಧುನಿಕ ಶಿಕ್ಷಣ ವಿಧಾನಗಳ ನಡುವಿನ ತಿಕ್ಕಾಟಗಳನ್ನು ವಿಡಂಬಿಸಿದ್ದ.

ರಾಜಕಾರಣದಲ್ಲೂ ದುಡಿದ ಸ್ವಿಫ್ಟ್ 'ಎಗ್ಸಾಮಿನರ್' ಎಂಬ ಪತ್ರಿಕೆಯನ್ನೂ ನಡೆಸಿದ. ಆದರೆ ಮುಂದೆ ರಾಜಕಾರಣದಿಂದ ಹೊರಬಂದು ಪೂರ್ಣ ಪ್ರಮಾಣದ ಲೇಖಕನಾಗಿ ನಿಂತ.

ಮನುಷ್ಯನ ಸ್ವಭಾವ, ಮುಚ್ಚುಮರೆ, ಒಳಗೊಂದು ಹೊರಗೊಂದು ನೀತಿ ಹಾಗೂ ಅಧಿಕಾರಪ್ರಿಯತೆಗಳನ್ನೇ ವಸ್ತುವಾಗುಳ್ಳ ವಿಡಂಬನೆ 'ಗಲಿವರನ ಪ್ರವಾಸಗಳು.' ಆದರೆ ಅಂದಿಗೂ ಇಂದಿಗೂ ಮಕ್ಕಳಿಗೆ ಅತ್ಯಂತ ಮೆಚ್ಚಿಕೆಯ ಪುಸ್ತಕವಾಗಿಯೇ ಉಳಿದು ಬಂದಿದೆ ಅದು. ಕವಿಯೂ ಆಗಿದ್ದ ಸ್ವಿಫ್ಟ್ 'ಬಾಸಿಸ್ ಆ್ಯಂಡ್ ಫಿಲೋಮನ್' ಎಂಬ ಕಥನ ಕವನವನ್ನೂ ಬರೆದ. ತಾನು ಧರ್ಮಬೋಧಕನಾದ ಹೊಸತರಲ್ಲೇ ಗುಟ್ಟಾಗಿ ಮದುವೆಯಾಗಿದ್ದ ಎಸ್ತರ್ ಜಾನ್ಸನ್‌ಳಿಗೆ ಆತ ಬರೆದಿದ್ದ ಪತ್ರಗಳು ಆಕೆಯ ಮರಣಾನಂತರ 'ಜರ್ನಲ್ ಟು ಸ್ಟೆಲ್ಲಾ' ಎಂಬ ಹೆಸರಲ್ಲಿ ಪ್ರಕಟವಾದವು.

ಆದರೆ ಸ್ವಭಾವತಃ ಸೂಕ್ಷ್ಮ ಮನಸ್ಸಿನ ಸ್ವಿಫ್ಟ್ ಬದುಕಿನ ವೈಫಲ್ಯಗಳ ಕಾರಣದಿಂದಾಗಿ ಅಂತರ್ಮುಖಿಯಾದ. ಅದು ಹುಚ್ಚಿಗೆ ತಿರುಗಿತು. ೧೭೪೫ರ ಅಕ್ಟೋಬರ್ ೧೯ ರಂದು ಅದೇ ಸ್ಥಿತಿಯಲ್ಲಿ ತೀರಿಕೊಂಡಾಗ ಆತನ ವಯಸ್ಸು ಎಪ್ಪತ್ತೆಂಟು ವರ್ಷಗಳು.

ಆತನ 'ಲಾಪುಟಾ ದ್ವೀಪದತ್ತ.... ' ಕೃತಿಯ ಸಂಗ್ರಹಾನುವಾದ ಇಲ್ಲಿದೆ.

## ಲಾಪುಟಾ ದ್ವೀಪದತ್ತ....

**ಕ್ಯಾ**ಪ್ಟನ್ ವಿಲಿಯಂ ರಾಬಿನ್‌ಸನ್ ನನ್ನ ಹಳೆಯ ಮಿತ್ರ. ಹಿಂದೆ ನಾನು ಸರ್ಜನ್ ಆಗಿ ಕೆಲಸ ಮಾಡಿದ್ದ ಹಡಗೊಂದರಲ್ಲಿ ಆತನ ಪರಿಚಯವಾಗಿತ್ತು. ನನ್ನನ್ನು ತನ್ನ ಕೈಕೆಳಗಿನ ನೌಕರನಂತೆ ಪರಿಗಣಿಸದೇ, ತನ್ನ ಸಹೋದರನಂತೆಯೇ ನಡೆಸಿಕೊಂಡಿದ್ದ. ಈಗ ಆತ ಮುನ್ನೂರು ಟನ್ ಭಾರದ "ಹೋಪ್‌ವೆಲ್" ಎಂಬ ಹಡಗಿನ ಒಡೆಯ (ಮತ್ತು ಕ್ಯಾಪ್ಟನ್). ಮೊದಲಬಾರಿ ಆತ ಬಂದು ಹೋದಾಗ ನಾನು ಮನೆಯಲ್ಲಿರಲಿಲ್ಲ. ತರುವಾಯ ಎರಡು ಮೂರು ಸಲ ಬಂದಾಗ ಕೇವಲ ಔಪಚಾರಿಕ ಭೇಟಿಯಲ್ಲದೆ ಏನೋ ಉದ್ದೇಶವಿರಬಹುದು ಎನ್ನಿಸಿತು. ಆಮೇಲೆ ಆತ ಈಸ್ಟ್ ಇಂಡೀಸ್ ದ್ವೀಪಗಳತ್ತ ಹೊರಡುವ ಯೋಜನೆಯನ್ನು ಬಹಿರಂಗಗೊಳಿಸಿದಾಗ ಉದ್ದೇಶ ಸ್ಪಷ್ಟವಾಯಿತು. ವರ್ಷಾನುಗಟ್ಟಲೆ ಹಿಡಿಯುವ ಈ ಪ್ರವಾಸಕ್ಕೆ ನನ್ನಂತಹ ಡಾಕ್ಟರ್ ಮತ್ತು ಸರ್ಜನ್ನನ ಅವಶ್ಯಕತೆ ಇತ್ತು. ಹೊರಡಲು ನನ್ನನ್ನು ಪ್ರಚೋದಿಸಲು ಆತ, ಸಾಧಾರಣವಾಗಿ ನನಗೆ ಸಿಗುತ್ತಿದ್ದ ಸಂಬಳದ ಎರಡರಷ್ಟನ್ನು ಕೊಡುವುದಾಗಿ ಹೇಳಿದ. ನನ್ನ ಸಹಾಯಕ್ಕೆಂದು ಮತ್ತೊಬ್ಬ ಸರ್ಜನ್, ಅಲ್ಲದೆ ನನಗಾಗಿಯೇ ಇಬ್ಬರು ಸಹಾಯಕರೂ ಇರುವವರು ಎಂದ. ನನಗೆ ಸಮುದ್ರಯಾನದ ಆಸೆ ಮರುಕಳಿಸಿತು. ಆದರೆ ನನ್ನ ಹೆಂಡತಿಯ ಒಪ್ಪಿಗೆ ದೊರೆಯಬೇಕಲ್ಲಾ?

ಕಷ್ಟಪಟ್ಟು ಆಕೆಯನ್ನು ಒಪ್ಪಿಸಿದೆ. ೧೭೦೬ ಆಗಸ್ಟ್ [illegible] ರಂದು ನಮ್ಮ ಪ್ರಯಾಣ ಆರಂಭವಾಯಿತು. ೧೭೦೭ರ ಏಪ್ರಿಲ್ ೧೧ ರಂದು ಸೇಂಟ್ ಜಾರ್ಜ್ ಕೋಟೆಯನ್ನು ತಲುಪಿತು. ಅಲ್ಲಿ ಮೂರು ವಾರಗಳಿದ್ದು, ಟಾಂಕ್ವಿನ್ ಬಂದರನ್ನು ತಲುಪಿದೆವು. ಅಲ್ಲಿಂದ ಹಡಗಿನಲ್ಲಿ ಸಾಗಿಸಬೇಕಾಗಿದ್ದ ಅನೇಕ ಸಾಮಾನುಗಳು ಇನ್ನೂ ತಯಾರಾಗಿರಲಿಲ್ಲ. ಅಲ್ಲಿ ಅನೇಕ ತಿಂಗಳು ಕಾಲಹರಣ ಮಾಡುವ ಬದಲು, ಕ್ಯಾಪ್ಟನ್ ಇನ್ನೊಂದು ಯೋಜನೆ ಹಾಕಿದ. ಸಣ್ಣದೊಂದು ಹಡಗನ್ನು ಖರೀದಿಸಿ, ಅದರಲ್ಲಿ ಸುತ್ತಮುತ್ತಲಿನ ದ್ವೀಪಗಳಿಗೆ ಸಾಗಿಸಬೇಕಾಗಿದ್ದ ಸಾಮಾನನ್ನು ತುಂಬಿ, ಹದಿನಾಲ್ಕು ಜನರನ್ನು ಅದರಲ್ಲಿ ಕಳಿಸಿದ. ಅವರಲ್ಲಿ ನಾನೂ ಒಬ್ಬ.

ಮೂರು ದಿನಗಳ ಪ್ರಯಾಣದ ನಂತರ ಭಯಂಕರ ಬಿರುಗಾಳಿ ಎದುರಾಯಿತು. ಗಾಳಿ ನಮ್ಮ ಹಡಗನ್ನು ಮೊದಲು ಉತ್ತರಕ್ಕೆ ಆಮೇಲೆ ವಾಯವ್ಯಕ್ಕೆ ಆನಂತರ ಪೂರ್ವಕ್ಕೆ ತಳ್ಳತೊಡಗಿತು. ಈ ಮಧ್ಯೆ ಎರಡು ದೊಡ್ಡ ಹಡಗುಗಳು ನಮ್ಮನ್ನು ಹಿಂಬಾಲಿಸತೊಡಗಿದ್ದವು. ನಾವು ಭೂಮಿಯ ಯಾವ ಭಾಗದಲ್ಲಿದ್ದೇವೆ ಎಂದು ತಿಳಿಯುವುದೇ ಕಷ್ಟವಾಯಿತು. ಭೂಪಟವನ್ನು ತೆಗೆದು ದಕ್ಷಿಣ-ಆಗ್ನೇಯ ದಿಕ್ಕಿನಲ್ಲಿ ಕಾಣುತ್ತಿದ್ದ ದ್ವೀಪಗಳು ಯಾವುವು ಎಂದು ತಿಳಿಯಲು ಪ್ರಯತ್ನಿಸುತ್ತಿದ್ದೆ. ಅದೇ ಹೊತ್ತಿಗೆ ಈ ಎರಡು ಹಡಗುಗಳು ನಮ್ಮ ಸಮೀಪವೇ ಬಂದುಬಿಟ್ಟವು. ಅದರಿಂದ ಜನ ನಮ್ಮ ಡೆಕ್‌ಗೆ ಬಂದಾಗಲೇ ನನಗೆ ಅವರು ಹಡಗುಗಳ್ಳರೆಂಬ ಅರಿವು ಉಂಟಾದದ್ದು. ಅವರ ನಾಯಕ ಡಚ್ ಭಾಷೆಯಲ್ಲಿ ಮಾತನಾಡುತ್ತಿದ್ದ. ನಮ್ಮ ಹಡಗನ್ನು ಅವರದಕ್ಕೆ ಕಟ್ಟಿ ನಮ್ಮೆಲ್ಲರನ್ನು ಸಮುದ್ರಕ್ಕೆ ಎಸೆಯಲು ಆತ ಆದೇಶ ಕೊಡುತ್ತಿದ್ದ. ನಾನು ಆತನನ್ನು ಪರಿಪರಿಯಾಗಿ ಬೇಡಿಕೊಂಡೆ. ನಾವೆಲ್ಲರೂ ಕ್ರಿಶ್ಚಿಯನ್ನರೇ ಎಂದು (ಡಚ್ ಭಾಷೆಯಲ್ಲಿ) ಆತನಿಗೆ ಮನದಟ್ಟು ಮಾಡಿಕೊಟ್ಟೆ. ಇನ್ನೊಂದು ಹಡಗಿನಲ್ಲಿದ್ದ ನಾವಿಕನನ್ನು ಕರೆದು- ಆತ ಜಪಾನೀಯನಂತೆ ಕಾಣುತ್ತಿದ್ದ- ನನಗೆ ತಿಳಿಯದ ಭಾಷೆಯಲ್ಲಿ (ಬಹುಶಃ

ಜಪಾನೀ) ಚರ್ಚಿಸಿ, ಅನಂತರ ನಮ್ಮನ್ನು ಕೊಲ್ಲಬಾರದೆಂದು ನಿಶ್ಚಯಿಸಿದರು. ನನ್ನ ಜೊತೆಯವರನ್ನೆಲ್ಲಾ ತಮ್ಮ ಗುಲಾಮರನ್ನಾಗಿ ಮಾಡಿಕೊಂಡರು. ನನ್ನನ್ನು ಮಾತ್ರ ಕಿರುದೋಣಿಯೊಂದರಲ್ಲಿ ಕೆಳಗೆ ಇಳಿಸಿದರು. ನಾಲ್ಕು ದಿನಗಳಿಗಾಗುವಷ್ಟು ಆಹಾರವನ್ನು ಕೊಟ್ಟದ್ದು ನನ್ನ ಪುಣ್ಯವೇ ಸರಿ.

ಈ ಕಿರು ದೋಣಿಯನ್ನು ಗಾಳಿಯ ಸಹಾಯದಿಂದಲೇ ನಡೆಸುತ್ತಿದ್ದೆ. ನಾನು ಭೂಪಟದಲ್ಲಿ ಗುರುತಿಸಲು ಪ್ರಯತ್ನಿಸುತ್ತಿದ್ದ ದ್ವೀಪಗಳಿಗಿಂತ ಹತ್ತಿರವಾಗಿ ಇನ್ಯಾವ ಭೂಭಾಗವೂ ಕಾಣಲಿಲ್ಲ. ಆದ್ದರಿಂದ ಆ ಕಡೆಗೇ ದೋಣಿ ನಡೆಸಿದೆ. ನಿಧಾನವಾಗಿ ಚಲಿಸಿ ಅಂತೂ ಮುಟ್ಟಿದೆ. ಬರೀ ಬಂಡೆಗಳಿಂದ ತುಂಬಿದ್ದ ಆ ದ್ವೀಪದಲ್ಲಿ ಕೆಲವು ಹಕ್ಕಿಗಳ ಮೊಟ್ಟೆಗಳ ಹೊರತು ತಿನ್ನುವ ಪದಾರ್ಥವೇನೂ ಸಿಗಲಿಲ್ಲ. ಸ್ವಲ್ಪ ಮುಂದಕ್ಕೆ ಇನ್ನೊಂದು ದ್ವೀಪ. ಅಲ್ಲಿಂದ ಸ್ವಲ್ಪ ಮುಂದೆ ಮತ್ತೊಂದು. ಹೀಗೆ ನಾಲ್ಕು ದಿನ ಒಂದು ದ್ವೀಪದಿಂದ ಇನ್ನೊಂದಕ್ಕೆ ಪ್ರಯಾಣ ಮಾಡುವುದರಲ್ಲಿ ಕಳೆಯಿತು. ಆಹಾರ ಸಿಗಲಿಲ್ಲ. ಆ ಹಕ್ಕಿಗಳ ಮೊಟ್ಟೆಗಳನ್ನೇ ತಿಂದೆ. ಆ ಸಮೂಹದ ಒಂದು ದ್ವೀಪದಲ್ಲಿ ಹಸಿರು ಹುಲ್ಲು ಕಾಣಿಸಿತು. ಅಲ್ಲಿಳಿದು ಗವಿಯೊಂದರಲ್ಲಿ ನನ್ನ ದೋಣಿಯನ್ನು ಮುಚ್ಚಿಟ್ಟು, ಅತ್ತಿತ್ತ ನೋಡಲು ಹೊರಟೆ. ಇಲ್ಲಿಯೂ ತಿನ್ನಲು ಹಕ್ಕಿಯ ಮೊಟ್ಟೆಗಳ ಹೊರತಾಗಿ ಏನೂ ಸಿಗಲಿಲ್ಲ. ಒಣಹುಲ್ಲು ಕಡ್ಡಿಗಳನ್ನು ಸಾಕಷ್ಟು ಸಂಗ್ರಹಿಸಿ, ಹಾಸಿಗೆ ಮಾಡಿಕೊಂಡೆ. ಆ ಗವಿಯಲ್ಲಿ ರಾತ್ರಿಯನ್ನು ಕಳೆದದ್ದಾಯಿತು. ನಿದ್ರೆಯಂತೂ ದೂರವೇ ಉಳಿದಿತ್ತು. ಬೆಳಗಾದ ಮೇಲೆ ಹೊರಗಡೆ ಓಡಾಡಿದೆ. ಬಿಸಿಲು ತೀಕ್ಷ್ಣವಾಗಿತ್ತು. ಮಸೂರದಿಂದ ಒಣ ಹುಲ್ಲಿನಲ್ಲಿ ಬೆಂಕಿಮಾಡಿ ಮೊಟ್ಟೆಗಳನ್ನು ಬೇಯಿಸಿ ತಿಂದು, ಸೂರ್ಯನಿಗೆ ಬೆನ್ನು ಹಾಕಿ ತಿರುಗಾಡತೊಡಗಿದೆ. ಆಗ ಇದ್ದಕ್ಕಿದ್ದ ಹಾಗೆ ನೆರಳು ಬಿದ್ದ ಹಾಗಾಯಿತು. ಹಿಂತಿರುಗಿ ನೋಡಿದಾಗ (ನನ್ನ ಹಾಗೂ ಸೂರ್ಯನ ನಡುವೆ) ಆಗಸದಲ್ಲಿ ದೊಡ್ಡದಾಗಿ ಚಲಿಸುತ್ತಿರುವ ವಸ್ತು ಕಂಡಿತು. ಅದರ ನೆರಳು ನನಗೆ ಮೋಡದ ನೆರಳಿನ ಅನುಭವ ಉಂಟುಮಾಡುತ್ತಿತ್ತು. ನನಗಿಂತ ಸುಮಾರು ಎರಡು ಮೈಲಿ ದೂರದಲ್ಲಿದ್ದ ಅದು ನಿಧಾನವಾಗಿ ಕೆಳಗೆ ಇಳಿಯುತ್ತಿತ್ತು. ಅದರ ತಳ ಭಾಗ ಸಮತಟ್ಟಾಗಿತ್ತು. ಲೋಹದಂತೆ ಫಳ ಫಳ ಎಂದು ಹೊಳೆಯುತ್ತಿತ್ತು. ನನ್ನ ಹತ್ತಿರ ಬರುತ್ತಾ ಅದು ಕೆಳಗೆ ಇಳಿಯತೊಡಗಿತು. ನನ್ನ ದುರ್ಬೀನಿನ ಮೂಲಕ ನೋಡಿದಾಗ ಆ ವಸ್ತುವಿನ ಮೇಲ್ಭಾಗದಲ್ಲಿ ಮನುಷ್ಯರು ಓಡಾಡುತ್ತಿದ್ದುದೂ ಕಂಡಿತು. ಈ ಬಗೆಯ ತೇಲಾಡುವ ದ್ವೀಪವನ್ನು ಕಂಡು ನನಗೆ ಮೊದಲು ಗಾಬರಿ ಆಯಿತಾದರೂ, ಮನುಷ್ಯರ ಸಹಾಯ ಪಡೆಯುವ ಆಸೆ ಉಂಟಾಯಿತು. ಅಷ್ಟು ಹೊತ್ತಿಗೆ ಅದು ಇನ್ನೂ ಹತ್ತಿರ ಬಂದಿತ್ತು. ಅದರಲ್ಲಿಯ ಮೆಟ್ಟಿಲುಗಳು, ಜನಗಳು ಹತ್ತಿ ಇಳಿದು ಮಾಡುತ್ತಿದ್ದುದು ಎಲ್ಲವೂ ಸ್ಪಷ್ಟವಾಗಿ ಕಂಡಿತು. ಕೆಲವರು ಮೀನು ಹಿಡಿಯಲೆಂದೋ ಏನೋ ಉದ್ದನೆಯ ಕೋಲುಗಳನ್ನು ಇಳಿಬಿಟ್ಟಿದ್ದರು. ನಾನಿದ್ದ ಎತ್ತರವಾದ ಗುಡ್ಡದಿಂದ ಜೋರಾಗಿ ಕೂಗಿದೆ. ನನ್ನ ಹ್ಯಾಟನ್ನೂ ಬೀಸಿದೆ. ಕರವಸ್ತ್ರವನ್ನೂ ಆಡಿಸಿದೆ. ಅವರಲ್ಲಿ ಕೆಲವರಾದರೂ ನನ್ನನ್ನು ಗಮನಿಸಿರಬೇಕು. ಆದರೆ ಯಾರೂ ಮಾರುತ್ತರ ಕೊಡಲೇ ಇಲ್ಲ.

ಸ್ವಲ್ಪ ಹೊತ್ತಿನಲ್ಲಿ ಅಲ್ಲಿ ಜನಗಳು ಓಡಾಡುವುದು ಜಾಸ್ತಿ ಆಯಿತು. ನಾನು ಪುನಃ ಕೂಗಿದೆ. ಆದರೆ ಉತ್ತರ ಬರಲಿಲ್ಲ. ಒಬ್ಬನೇ ಒಬ್ಬ ಮಾತ್ರ ಗಂಭೀರವಾಗಿ ಸ್ಪಷ್ಟವಾಗಿ

ಜೋರಾಗಿ ಏನನ್ನೋ ಹೇಳಿದ. ಅದು ಇಟಾಲಿಯನ್ ಭಾಷೆಯಂತೆ ಕೇಳಿತು. ನಾನು ಮತ್ತೆ ಜೋರಾಗಿ ಇಟಾಲಿಯನ್ ಭಾಷೆಯಲ್ಲಿ ಕೂಗಿದೆ. ಅವರಿಗೆ ಅರ್ಥವಾಯಿತೋ ಇಲ್ಲವೋ ತಿಳಿಯಲಿಲ್ಲ. ನನ್ನ ಪರಿಸ್ಥಿತಿಯಂತೂ ಅರಿವಾಗಿರಬೇಕು. ಗುಡ್ಡದಿಂದ ಇಳಿಯಲು ಸನ್ನೆ ಮಾಡಿದರು ಎಂದು ನಾನು ಭಾವಿಸಿಕೊಂಡು ಇಳಿದು ನಿಂತೆ. ಆ ದ್ವೀಪ ಮೇಲೇರಿತು. ನನ್ನ ಮೇಲಕ್ಕೆ ಬಂದಾಗ ಒಂದು ಸರಪಳಿ ಅದರಿಂದ ಇಳಿಯಿತು. ಅದರ ತುದಿಯಲ್ಲಿ ಒಂದು ಕುರ್ಚಿ ಇತ್ತು. ನಾನು ಅದರಲ್ಲಿ ಹತ್ತಿ ಕುಳಿತೆ. ಸರಪಳಿಯಿಂದ ನನ್ನನ್ನು ಮೇಲೆಳೆದುಕೊಂಡರು.

ಕುರ್ಚಿಯಿಂದ ನಾನು ಡೆಕ್‌ನಂತಹ ಭಾಗದಲ್ಲಿ ಇಳಿದಾಗ ನನ್ನ ಸುತ್ತ ಸೇರಿದ್ದ ಜನಸಂದಣಿ ವಿಚಿತ್ರವಾಗಿತ್ತು. ಎಲ್ಲರ ಮುಖಗಳೂ ಎಡಕ್ಕಾಗಲೀ ಅಥವಾ ಬಲಕ್ಕಾಗಲೀ ತಿರುಗಿದ್ದವು. ಒಂದು ಕಣ್ಣು ಯಾವಾಗಲೂ ಆಕಾಶವನ್ನು ನೋಡುತ್ತಿತ್ತು. ಎಲ್ಲರ ಮುಖದ ಮೇಲೆ ಏನೋ ಚಿಂತೆಯಿದ್ದಂತೆ ಕಾಣುತ್ತಿತ್ತು. ಅವರ ಬಟ್ಟೆಗಳ ಮೇಲೆ ಸೂರ್ಯ, ಚಂದ್ರ, ನಕ್ಷತ್ರ ಅಲ್ಲದೆ ಕೊಳಲು, ಗಿಟಾರ್ ಮುಂತಾದ ಚಿತ್ರಗಳಿದ್ದವು. ಕೆಲವು ಜನರು ಕೋಲುಗಳನ್ನು ಹಿಡಿದು ನಿಂತಿದ್ದರು. ಆ ಕೋಲಿನ ತುದಿಯಲ್ಲಿ ಒಂದು ಚೀಲ ಅದರಲ್ಲಿ ಕಲ್ಲುಗಳೋ, ಗೋಲಿಗಳೋ ಏನೋ ತುಂಬಿದ್ದವು. ಕೋಲು ಹಿಡಿದವ ಅದನ್ನು ಯಾವ ವ್ಯಕ್ತಿಯ ಮುಖದ ಮುಂದೆ ಅಲ್ಲಾಡಿಸುತ್ತಾನೋ, ಅವನು ಮಾತ್ರ ಮಾತನಾಡಬಹುದಾಗಿತ್ತು. ಯಾರ ಕಿವಿಯ ಮುಂದೆ ಈ ಚೀಲ ಅಲ್ಲಾಡಿಸುತ್ತಿದ್ದರೋ ಅವರು ಮಾತ್ರ ಕೇಳಿಸಿಕೊಳ್ಳಬಹುದಾಗಿತ್ತು. ಎಲ್ಲರೂ ಯಾವಾಗಲೂ ಯಾವುದೋ ಗಂಭೀರವಾದ ವಿಷಯವನ್ನು ಕುರಿತು ಆಲೋಚಿಸುತ್ತಿದ್ದುದರಿಂದ ಸಂಭಾಷಣೆಗೆ ಈ 'ಕಿಣಿಕಿಣಿ' ಸೇವಕರ ನೆರವು ಅತ್ಯಂತ ಅವಶ್ಯಕವಾಗಿತ್ತು. (ಇಷ್ಟೆಲ್ಲಾ ನಾನು ತಿಳಿದುಕೊಂಡಿದ್ದು ನಿಧಾನವಾಗಿ. ಆದರೆ ನಿಮಗೆ ಮುಂಚಿತವಾಗಿ ತಿಳಿಸುತ್ತಿದ್ದೇನೆ ಅಷ್ಟೇ.)

ನನ್ನನ್ನು ತಮ್ಮ ರಾಜನ ಬಳಿಗೆ ಕರೆದುಕೊಂಡು ಹೋದರು. ನಮ್ಮ ಆಗಮನದಿಂದ ಸಾಕಷ್ಟು ಸಪ್ಪಳವಾದರೂ ರಾಜನು ತಲೆಯೆತ್ತಿ ನೋಡಲಿಲ್ಲ. ಆತನಿಗೆ ನಾವು ಬಂದಿದ್ದು ತಿಳಿಯಲಿಲ್ಲ. ಗಂಭೀರವಾಗಿ ಏನನ್ನೋ ಆತ ಯೋಚಿಸುತ್ತಿದ್ದನಾದ್ದರಿಂದ ನಾವು ಸುಮಾರು ಒಂದು ಗಂಟೆ ಕಾದೆವು. 'ಆಮೇಲೆ 'ಕಿಣಿಕಿಣಿ' ಸೇವಕನೊಬ್ಬ ರಾಜನ ಕಿವಿಯ ಬಳಿ ಶಬ್ದ ಮಾಡಿದ. ಆಗ ಆತ ಬೆಚ್ಚಿಬಿದ್ದು ನನ್ನ ಕಡೆ ನೋಡಿದ. ಈಗ 'ಕಿಣಿಕಿಣಿ' ಸೇವಕ ನನ್ನ ಬಾಯಿಯ ಬಳಿ ಶಬ್ದ ಮಾಡಿದ. ರಾಜ ಅದೇನನ್ನೋ ಹೇಳಿದ ಮೇಲೆ ಕಿಣಿಕಿಣಿ ಸೇವಕ ನನ್ನ ಕಿವಿಯ ಬಳಿ ಶಬ್ದ ಮಾಡಿದ. ರಾಜ ಕೇಳಿದ್ದು ನನಗೆ ತಿಳಿಯಲಿಲ್ಲ. ಆದರೆ ಆತನ ಪ್ರಶ್ನೆಯನ್ನು ಊಹಿಸಿಕೊಂಡು, ನನಗೆ ತಿಳಿದ ಎಲ್ಲಾ ಭಾಷೆಗಳಲ್ಲೂ ಉತ್ತರ ಕೊಟ್ಟೆ. ಆದರೆ ನಾನು ಹೇಳಿದ್ದು ಯಾರಿಗೂ ಅರ್ಥವಾದ ಹಾಗೆ ಅನ್ನಿಸಲಿಲ್ಲ. ನನ್ನನ್ನು ಪಕ್ಕದ ಕೋಣೆಯೊಂದಕ್ಕೆ ಕರೆದುಕೊಂಡು ಹೋದರು. ಅಲ್ಲಿ ನನಗೆ ಊಟ ಸಿಕ್ಕಿತು. ಊಟದ ತಟ್ಟೆಯಲ್ಲಿದ್ದ ಎಲ್ಲ ವಸ್ತುಗಳನ್ನೂ ರೇಖಾಗಣಿತದ ಆಕೃತಿಗಳಂತೆ ಕತ್ತರಿಸಲಾಯಿತು. ಸಮಾನಾಂತರ ಚತುರ್ಭುಜ, ಚಚ್ಚೌಕ, ರ್‍ಹಾಂಬಾಯ್ಡ್ (Rhombrid) ಹೀಗೆ ಎಲ್ಲವೂ ರೇಖಾಗಣಿತದ ಚಮತ್ಕಾರಿಕ ಆಕೃತಿಗಳಂತೆ ಇದ್ದವು. ಕೋಳಿಗಳನ್ನು ಪಿಟೀಲಿನ ಆಕಾರದಲ್ಲಿ ಕತ್ತರಿಸಿದ್ದರು. ರೊಟ್ಟಿಗಳು ಶಂಕು, ತ್ರಿಭುಜ, ಚಚ್ಚೌಕ ಹೀಗೆಲ್ಲಾ ಇದ್ದವು. ಊಟ ತಂದುಕೊಟ್ಟವರಿಂದ ನಾನು ತಿನಿಸುಗಳ ಹೆಸ

ರುಗಳನ್ನು ಕಲಿಯಲು ಪ್ರಯತ್ನಿಸಿದಾಗ, (ಕಿಣಿ ಕಿಣಿ ಸೇವಕರ ಸಹಾಯವಿಲ್ಲದೆ) ಅವರು ಸಂತೋಷದಿಂದ ಹೇಳಿಕೊಟ್ಟರು.

ಊಟವಾದ ಮೇಲೆ ಒಬ್ಬಾತ ಕಿಣಿಕಿಣಿ ಸೇವಕನೊಡನೆ ಹಾಜರಾದ. ಆತನ ಕೈಯಲ್ಲಿ ಲೇಖನಿ, ಮಸಿಕುಡಿಕೆ, ಪುಸ್ತಕಗಳು, ಕಾಗದ ಎಲ್ಲವೂ ಇದ್ದವು. ತಮ್ಮ ಭಾಷೆಯನ್ನು ನನಗೆ ಕಲಿಸಿಕೊಡಲು ಆತ ಬಂದಿರಬೇಕೆಂಬ ನನ್ನ ಊಹೆ ನಿಜವಾಯಿತು. ನಾಲ್ಕು ಗಂಟೆಗಳ ಕಾಲ ನಮ್ಮ "ಪಾಠ" ನಡೆಯಿತು. ಒಂದು ಪುಸ್ತಕದಲ್ಲಿ ಸೂರ್ಯ-ಚಂದ್ರ, ನಕ್ಷತ್ರ ರಾಶಿಗಳ ವಿಷಯವಿತ್ತು. ಮತ್ತೊಂದರಲ್ಲಿ ಸಂಗೀತ ವಾದ್ಯಗಳ ಪರಿಚಯ ಇತ್ತು. ಕೆಲವೇ ದಿನಗಳಲ್ಲಿ ನಾನು ಅವರ ಭಾಷೆಯನ್ನು ಕಲಿತುಕೊಂಡೆ.

ಲಾಪುಟಾ ಎಂಬುದು ಅವರ ಹಾರುವ ದ್ವೀಪದ ಹೆಸರು. ಅದರ ಅರ್ಥ- "ಎತ್ತರದಲ್ಲಿರುವವ ಪಾಲಕ" ಎಂದು.

ಈ ನಡುವೆ ರಾಜ ನನಗೆ ಬೇರೆ ಬಟ್ಟೆ ಹೊಲಿಸಲು ನಿಶ್ಚಯಿಸಿದ. ದರ್ಜಿ ನನ್ನ ಅಳತೆ ಮಾಡಲು ಬಂದ. ಮೊದಲು ನನ್ನ ಎತ್ತರವನ್ನು ಅಳೆಯಲು ಆತ (ನಕ್ಷತ್ರಗಳ ಎತ್ತರವನ್ನು ಅಳೆಯಲು• ಉಪಯೋಗಿಸುವ) ಷಷ್ಠಾಂಕ (Sextant)ದಂತಹ ಯಂತ್ರವನ್ನು ಉಪಯೋಗಿಸಿದ. ಕೈವಾರ, ಕೋನಮಾಪಿ ಮುಂತಾದ ರೇಖಾಗಣಿತದ ಸಾಧನಗಳನ್ನು ಉಪಯೋಗಿಸಿ, ನನ್ನ ನಕ್ಷೆ ತಯಾರಿಸಿದ. ಆರು ದಿನಗಳ ನಂತರ ನನ್ನ ಬಟ್ಟೆ ಬಂದಿತು. ಆದರೆ ಅದು ನನಗೆ ತುಂಬಾ ಸಡಿಲವಾಗಿತ್ತು. ಈ ಆರು ದಿನ ನಾನು ಹೊರಗೆಲ್ಲೂ ಹೋಗದೆ ಓದಿ ಓದಿ ನನ್ನ ಶಬ್ದ ಭಾಂಡಾರವನ್ನು ಬೆಳೆಸಿಕೊಂಡೆ. ಹೀಗಾಗಿ ಏಳನೆಯ ದಿನ ನಾನು ರಾಜನ ಬಳಿ ಹೋದಾಗ ಸಂಭಾಷಣೆ ತುಂಬಾ ಸುಲಭವಾಯಿತು.

ಆತನು ಇತರರಿಗೆ ಕೊಟ್ಟ ಆದೇಶ ನನಗೆ ಸ್ಪಷ್ಟವಾಗಿ ತಿಳಿಯಿತು. ಅದೆಂದರೆ "ಈ ದ್ವೀಪವನ್ನು ಪೂರ್ವ ಮತ್ತು ಈಶಾನ್ಯ ದಿಕ್ಕಿನತ್ತ ತಿರುಗಿಸಿ, ಲಗಾಡೋ ಎಂಬ ನಗರದ ಮೇಲೆ ನಿಲ್ಲಿಸಬೇಕು" ಎಂದು.

ನಾವಿದ್ದ ದ್ವೀಪ ಚಲಿಸಿದ್ದರ ಅರಿವೇ ನಮಗಾಗಲಿಲ್ಲ. ನಾಲ್ಕು ದಿನಗಳ ನಂತರ ನಾವು ಲಗಾಡೋ ದ್ವೀಪದ ಮೇಲಿದ್ದೆವು.

ಈ ನಾಲ್ಕೈದು ದಿನಗಳ ನಮ್ಮ ಪ್ರಯಾಣದ ಅವಧಿಯಲ್ಲಿ ದಾರಿಯಲ್ಲಿ ಸಿಕ್ಕ ಅನೇಕ ಹಳ್ಳಿ ಊರುಗಳ ಮೇಲೆ ಸ್ವಲ್ಪ ಹೊತ್ತು ಲಾಪುಟಾವನ್ನು ನಿಲ್ಲಿಸಿ, ದಾರಗಳಿಂದ ಸಣ್ಣ ತೂಕಗಳನ್ನು ಇಳಿಬಿಡಲಾಗುತ್ತಿತ್ತು. ಪ್ರಜೆಗಳು ತಮ್ಮ ಅಹವಾಲನ್ನು ಈ ತೂಕಗಳಿಗೆ ಕಟ್ಟುತ್ತಿದ್ದರು. ಆಮೇಲೆ ಅವನ್ನು ಮೇಲೆಳೆದುಕೊಳ್ಳಲಾಗುತ್ತಿತ್ತು. ಕೆಲವು ಕಡೆ ತಿನಿಸುಗಳನ್ನು ಕೂಡ ಹೀಗೆಯೇ ತರಿಸಿಕೊಂಡರು.

ಲಗಾಡೋ ದ್ವೀಪ ತಲುಪಿದ ದಿನ ರಾಜ, ಸೇವಕರು, ಅಧಿಕಾರಿಗಳು ಎಲ್ಲರೂ ತಂತಮ್ಮ ವಾದ್ಯಗಳಿಂದ ಸತತವಾಗಿ ಮೂರುಗಂಟೆ ಸಂಗೀತ ನುಡಿಸಿದರು. ಈ ದೇಶದ ಎಲ್ಲ ಕಾರ್ಯಭಾರಗಳಿಗೆ ಗಣಿತ ಮತ್ತು ಸಂಗೀತದ ಜ್ಞಾನ ಅವಶ್ಯಕವಾಗಿತ್ತು. ಬೇರೆ ಯಾವುದೇ ಕಲೆ ಅಥವಾ ವಿಜ್ಞಾನವನ್ನು ಕಲಿಯಲು ಈ ಎರಡರ ಸಹಾಯ ಬೇಕು ಎಂಬುದು ಅವರ ನಂಬಿಕೆ. ಹಾಗಾಗಿ ಇವರ ವಿಚಾರ ಧಾರೆಯೇ ಬೇರೆ. ಕಲ್ಪನೆ, ಹೊಸ ಆವಿಷ್ಕಾರ, ಕಲಾನೈಪುಣ್ಯ- ಇವರ ಶಬ್ದಭಾಂಡಾರದಲ್ಲಿರಲೇ ಇಲ್ಲ. ಮನೆಗಳನ್ನು ವಿಚಿತ್ರವಾದ ಗಣಿತದ ಆಕೃತಿಯಲ್ಲಿ ಕಟ್ಟುತ್ತಿದ್ದರು. ಖಗೋಳಶಾಸ್ತ್ರದಲ್ಲಿ ಇವರ ಜ್ಞಾನ ಅಗಾಧವಾಗಿತ್ತು. ಯಾವುದೇ ಒಂದು ವಿಷಯವನ್ನು ಕುರಿತು ಚರ್ಚಿಸುವಾಗ ಒಂದೊಂದು ಪದವನ್ನು ಸಹ ವಿವರವಾಗಿ ಚರ್ಚಿಸುತ್ತಿದ್ದರು.

ಯಾರಿಗೂ ಮನಶ್ಶಾಂತಿಯೇ ಇದ್ದಂತೆ ಕಾಣ ಲಿಲ್ಲ. ಯಾವಾಗಲೂ ಗಹನವಾಗಿ ಆಲೋಚಿ ಸುತ್ತಿದ್ದರು. ಬಹುಶಃ ಜ್ಯೋತಿಶ್ಶಾಸ್ತ್ರವೇ ಇದಕ್ಕೆ ಮೂಲ ಕಾರಣವಾಗಿರಬೇಕು ಎಂದು ನನ್ನ ಊಹೆ. ಪೃಥ್ವಿಯು ಬರುಬರುತ್ತಾ ಸೂರ್ಯನ ಹತ್ತಿರ ಹೋಗಿ, ಕೊನೆಗೆ ಅದರೊಳಗೇ ಐಕ್ಯವಾಗಿಬಿಡುತ್ತದೆ ಎಂಬುದೊಂದು ಯೋಚನೆ. ಸೂರ್ಯನ ಮೇಲ್ಮೈಯಲ್ಲಿ ಕಲೆ ಗಳು ಹೆಚ್ಚಿ ಬೆಳಕೇ ಬಾರದಂತಾದರೆ? ಎಂಬುದಿನ್ನೊಂದು ಯೋಚನೆ. ಕಳೆದ ಸಲ ಬಂದ ಧೂಮಕೇತು ಸ್ವಲ್ಪದರಲ್ಲಿ ಭೂಮಿಯ ಮೇಲೆ ಬೀಳುವುದು ತಪ್ಪಿತು. ಮುಂದಿನದು ಮೂವತ್ತೊಂದು ವರ್ಷಗಳಲ್ಲಿ ಬಂದೇ ಬರುವುದು. ಆಗ ಅದು ಕಾದ ಕಬ್ಬಿಣದಷ್ಟು ಶಾಖ ಪಡೆಯುವುದು, ಅದರ ಬಾಲ ೧ ಲಕ್ಷದ ೧೪ ಮೈಲಿ ಉದ್ದ ಇರುವುದು. (ಇದನ್ನೆಲ್ಲಾ ಅವರು ಲೆಕ್ಕ ಹಾಕಿ ತಿಳಿದುಕೊಂ ಡಿದ್ದರು) ಭೂಮಿ ಅದರ ಬಾಲವನ್ನು ಸಮೀ ಪಿಸಿದ ಕೂಡಲೇ, ಸುಟ್ಟು ಬೂದಿಯಾಗು ವುದು. (ಇಂತಹ ಧೂಮಕೇತುಗಳಿಂದಲೇ, ವ್ಯಯವಾಗಿ ಹೋಗುತ್ತಿರುವ ಸೂರ್ಯನಿಗೆ ಪುನಶ್ಚೇತನ ದೊರಕಿದಂತಾಗುವುದು. ಇದ ರಿಂದ ಇತರ ಗ್ರಹಗಳಿಗೆ ಬೆಳಕು ಕಳಿಸಲು ಸಾಧ್ಯವಾಗುವುದು.)

ಹೀಗೆ ಅನೇಕ ಬಗೆಯ ತೊಂದರೆಗಳು ಅವರನ್ನು ಸದಾ ಕಾಡುತ್ತಿರುವುದರಿಂದ ಅವರು ನಿಶ್ಚಿಂತರಾಗಿ ನಿದ್ರಿಸಲಾರರು. ಯಾವುದೇ ಬಗೆಯ ಆಟದಲ್ಲಿ ಮನ ತೊಡ ಗಿಸಲಾರರು. ಬೆಳಗಿನ 'ಸುಪ್ರಭಾತ' ವಿನಿಮ ಯವಾದೊಡನೆಯೇ ಅವರು ಸೂರ್ಯನ 'ಆರೋಗ್ಯ' ಮುಳುಗಿದ್ದು, ಹುಟ್ಟಿದ್ದು ಇವು ಗಳನ್ನು ಕುರಿತು ಚರ್ಚಿಸುವರು. ಧೂಮಕೇ ತುವನ್ನು ಹೇಗೆ ದೂರ ಮಾಡಿ, ಭೂಮಿ ಯನ್ನು ಕಾಪಾಡುವುದು ಇದು ಮುಂದಿನ ಚರ್ಚೆಯ ವಿಷಯ. ಒಂದೇ ಮಾತಿನಲ್ಲಿ ಹೇಳುವುದಾದರೆ ಸಣ್ಣ ಮಕ್ಕಳು ಭೂತ ಪಿಶಾಚಿಗಳ ಕಥೆ ಕೇಳಿ ಭ್ರಾಂತರಾಗಿ ನಿದ್ದೆ ಬಾರದೆ ಹೆದರಿದಂತಿತ್ತು ಅವರ ಚರ್ಯೆ.

ಆ ದೇಶದ ಮಹಿಳೆಯರು ತುಂಬಾ ಚಟುವಟಿಕೆಯಿಂದಿದ್ದರು. ಯಾವಾಗಲೂ ಯೋಚನೆಯಲ್ಲಿಯೇ ಮುಳುಗಿರುವ ತಮ್ಮ ಗಂಡಂದಿರ ಬಗ್ಗೆ ಅವರಿಗೆ ಅವಹೇಳನ. ಆದ್ದರಿಂದ ಕೆಳಗಿನ ದ್ವೀಪಗಳಿಂದ ಬರುವವರ ಬಗ್ಗೆ ಅವರಿಗೆ ಯಾವಾಗಲೂ ಕುತೂಹಲ. ಈ ಹೊಸಬರ ಹತ್ತಿರ ಬೇಗ ಸ್ನೇಹ ಬೆಳೆಸಿ ಕೊಳ್ಳುವರು. ಇದಕ್ಕೆ ಪತಿಯ ಅಡೆತಡೆ ಏನೂ ಇರುವುದಿಲ್ಲ. ಆದರೆ ಇವರಿಗೆ ದ್ವೀಪದ ಹೊರಗೆ ಹೋಗಲು ಸ್ವಾತಂತ್ರ್ಯವಿಲ್ಲ. ಆಕಸ್ಮಾತ್ ಹೋಗಲೇಬೇಕಾದರೆ ಅದಕ್ಕೆ ರಾಜನ ವಿಶೇಷ ಅನುಮತಿ ಬೇಕು. ಒಮ್ಮೆ ಕೆಳಗಿಳಿದು ಹೋದ ಮಹಿಳೆ ಮತ್ತೆ ಮೇಲೆ ಬರಲು ಇಷ್ಟಪಡುವುದಿಲ್ಲ ಎಂಬ ಅನುಭ ವದ ಮೇಲೆ ರಾಜ ಅನುಮತಿ ಕೊಡುತ್ತಿರ ಲಿಲ್ಲ. ಹಿಂದೆ ಒಮ್ಮೆ ಪ್ರಧಾನ ಮಂತ್ರಿಯ ಹೆಂಡತಿಯೊಬ್ಬಳು ಇಳಿದು ಹೋದವಳು, ತನ್ನ ಮನೆ, ಗಂಡ ಮಕ್ಕಳನ್ನೂ ಮರೆತು, ಕೆಳಗೇ ಬಚ್ಚಿಟ್ಟುಕೊಂಡುಬಿಟ್ಟಿದ್ದಳಂತೆ. ರಾಜ ಅವಳನ್ನು ಹುಡುಕಲು ಆಜ್ಞೆ ಹೊರಡಿಸಬೇ ಕಾಯಿತಂತೆ. ಆಗ ಆಕೆ ಸಿಕ್ಕಿಬಿದ್ದಳು. ತನ್ನ ಬೆಲೆಬಾಳುವ ವಸ್ತ್ರಗಳನ್ನು ಅಡವಿಟ್ಟು, ಮೋಚಿಯೊಬ್ಬನ ಜೊತೆಗೆ ವಾಸಿಸತೊಡಗಿ ದ್ದಳಂತೆ. ಆತ ತುಂಬಾ ಬಡವ; ಅವಳನ್ನು ಹೊಡೆಯುತ್ತಿದ್ದ. ಆದರೂ ಆಕೆಗೆ ಅವನ ಸಹವಾಸವೇ ಪ್ರಿಯವಾಗಿತ್ತಂತೆ. ರಾಜ ಅವ ಳನ್ನು ಹುಡುಕಿಸಿ, ಲಾಪುಟಾಕ್ಕೆ ಕರೆತಂದ ಮೇಲೂ ಆಕೆ ಇನ್ನೊಂದು ಅವಕಾಶ ಕಲ್ಪಿಸಿ ಕೊಂಡು, ಆಭರಣಗಳನ್ನು ಕದ್ದುಕೊಂಡು, ಪುನಃ ಓಡಿಹೋದಳಂತೆ. ಆಮೇಲೆ ಎಷ್ಟು

ಹುಡುಕಿಸಿದರೂ ಸಿಗಲೇ ಇಲ್ಲವಂತೆ!

ಒಂದು ತಿಂಗಳಲ್ಲಿ ನಾನು ಅವರ ಭಾಷೆಯಲ್ಲಿ ಸಾಕಷ್ಟು ನೈಪುಣ್ಯವನ್ನು ಸಂಪಾದಿಸಿದ್ದೆ. ರಾಜನ ಬಳಿ ಹೋದಾಗ ನನ್ನ ದೇಶ, ಜನಜೀವನ ಇವುಗಳ ಬಗ್ಗೆ ಸರಿಯಾಗಿ ತಿಳಿಸಿಕೊಡುವುದೂ ಸರಳವಾಗಿತ್ತು. ಈ ರಾಜನಿಗಾದರೋ ನಮ್ಮ ದೇಶದ ಗಣಿತದ ಜ್ಞಾನದ ಬಗ್ಗೆ ಮಾತ್ರ ಕುತೂಹಲವಿತ್ತು. ಇತರ ವಿಚಾರಗಳನ್ನು ನಾನು ಹೇಳುತ್ತಿದ್ದಾಗ ಆತ ತನ್ನ ಯೋಚನೆಗಳಲ್ಲಿ ಮುಳುಗಿ ಹೋಗುತ್ತಿದ್ದನು. ಆಗ ಕಿಣಿಕಿಣಿ ಸೇವಕ ಮಧ್ಯಮಧ್ಯೆ ಶಬ್ದ ಮಾಡಿ ಆತನ ಗಮನಸೆಳೆಯಬೇಕಾಗುತ್ತಿತ್ತು.

ಈ ದ್ವೀಪದ ಇತರ ಪ್ರದೇಶಗಳನ್ನೂ ನೋಡಬೇಕೆಂಬ ಆಸೆಯನ್ನು ನಾನು ವ್ಯಕ್ತಪಡಿಸಿದಾಗ ರಾಜ ಸಂತೋಷದಿಂದ ನನ್ನ ಜೊತೆಗೆ ನನ್ನ 'ಗುರು' (ಪಾಠ ಹೇಳಿಕೊಡುತ್ತಿದ್ದಾತ)ವನ್ನೂ ಕಳಿಸಿದ.

ಲಾಪುಟಾ ಎಂಬ ತೇಲಾಡುವ ದ್ವೀಪ ರಾಜಧಾನಿ ಕೆಳಗಿದ್ದ ದೊಡ್ಡ ದ್ವೀಪಕ್ಕೆ ಬಾಲ್ನಿಬಾರ್ಬಿ ಎಂಬ ಹೆಸರಿತ್ತು. ಅಲ್ಲಿ ಲಗಾಡೋ, ಮಾಲೋನಡಾ ಮುಂತಾದ ದೊಡ್ಡ ಪಟ್ಟಣಗಳಿದ್ದವು. (ಚಿತ್ರ ೧)

ಲಾಪುಟಾ ೭,೮೩೭ ಗಜ ವ್ಯಾಸ (ಸುಮಾರು ನಾಲ್ಕೂವರೆ ಮೈಲಿ)ದ ವೃತ್ತಾಕಾರವಾದ ದ್ವೀಪ. ಅಂದರೆ ಇಲ್ಲಿ ಸುಮಾರು ೧೦,೦೦೦ ಎಕರೆಗಳಷ್ಟು ಜಮೀನು ಇತ್ತು. ದ್ವೀಪದ ದಪ್ಪ ಮುನ್ನೂರು ಅಡಿ. ತಳಭಾಗ




ಚಿತ್ರ ೧

ದಲ್ಲಿ ಇನ್ನೂರು ಅಡಿ ದಪ್ಪದ ಲೋಹದ ಅಡಿಪಾಯ. ಮೇಲೆ ಮಣ್ಣು, ಬಂಡೆಕಲ್ಲು ಇತ್ಯಾದಿ, ಖನಿಜಗಳ ಗಣಿಗಳು ಸಹ. ದ್ವೀಪದ ಮಧ್ಯ ಭಾಗದಲ್ಲಿ ಇಳಿಜಾರಾಗಿರುವುದರಿಂದ ಮಳೆಯ ನೀರೆಲ್ಲಾ ಸಣ್ಣ ಸಣ್ಣ ನದಿಗಳಾಗಿ ಮಧ್ಯಕ್ಕೆ ಹರಿಯುತ್ತಿತ್ತು. ಹೀಗೆ ಬಂದ ನೀರು ನಾಲ್ಕು ದೊಡ್ಡ ಕೆರೆಗಳಲ್ಲಿ (ಅರ್ಧ ಮೈಲು ವ್ಯಾಸದ ವೃತ್ತಗಳು) ಸಂಗ್ರಹವಾಗಿತ್ತು. ಸತತವಾಗಿ (ಸೂರ್ಯನ ಶಾಖದಿಂದ) ನೀರು ಆವಿಯಾಗುತ್ತಿದ್ದುದರಿಂದ ಈ ಕೆರೆಗಳು ತುಂಬಿ ಹರಿಯುವ ಪ್ರಶ್ನೆಯೇ ಏಳುತ್ತಿರಲಿಲ್ಲ. ತುಂಬಿ ಹೋಗುತ್ತಿದ್ದ ಪರಿಸ್ಥಿತಿಯಲ್ಲಿ ಪುನಃ ಮಳೆ ಬಂದರೆ ಇಡೀ ದ್ವೀಪವನ್ನೇ ಮೋಡಗಳಿಗಿಂತ ಮೇಲೆ ತೆಗೆದುಕೊಂಡು ಹೋಗುವಂತೆ ರಾಜನು ಆದೇಶ ನೀಡುತ್ತಿದ್ದನು. ದ್ವೀಪದ ಕೇಂದ್ರ ಭಾಗದಲ್ಲಿ ಸುಮಾರು ಐವತ್ತು ಗಜ ವ್ಯಾಸದ ಒಂದು ವಿಚಿತ್ರಗೋಳವಿತ್ತು. ಇದಕ್ಕೆ ಫ್ಲಾಂಡೋನಾ ಗ್ಯಾಗ್ನೋಲ್ (ಖಗೋಳ ವಿಜ್ಞಾನಿಗಳ ಗುಹೆ) ಎಂಬ ಹೆಸರಿತ್ತು. ಇದರ ಆಳ ಸುಮಾರು ನೂರು ಅಡಿಗಳು. ಈ ಗುಹೆಯೊಳಗೆ ಸುಮಾರು ೨೦ ದೀಪಗಳು ಯಾವಾಗಲೂ ಉರಿಯುತ್ತಲೇ ಇರುವುವು. ಲೋಹದ ಗೋಡೆಗಳು ಈ ಬೆಳಕನ್ನು ಪ್ರತಿಫಲಿಸಿ ಗುಹೆಯೊಳಗೆಲ್ಲಾ ಬೆಳಕನ್ನುಂಟು ಮಾಡುತ್ತಿದ್ದವು. ಷಷ್ಠಾಂಕಗಳು, ದೂರದರ್ಶಕಗಳು, ದುರ್ಬೀನುಗಳು ಮುಂತಾದ ಅನೇಕ ಉಪಕರಣಗಳು ಅಲ್ಲಿದ್ದವು. ಆದರೆ ಅದೆಲ್ಲಕ್ಕಿಂತ ಕೌತುಕಪೂರ್ಣವಾದದ್ದೆಂದರೆ ಕೇಂದ್ರಭಾಗದಲ್ಲಿದ್ದ ಒಂದು ಚುಂಬಕ. ಅದರ ಉದ್ದ ಆರುಗಜ, ದಪ್ಪ ಮೂರುಗಜ. ಲೋಹದಿಂದ ಮಾಡಿದ್ದ ಕಂಬವೊಂದರ ಮೇಲೆ ಇದು ಕುಳಿತಿತ್ತು. ಆ ಕಂಬವೇ ಇದರ ಅಕ್ಷ. ಸ್ವಲ್ಪ ಮುಟ್ಟಿದರೆ ಸಾಕು, ಚಲಿಸುವಷ್ಟು ಘರ್ಷಣೆರಹಿತವಾಗಿತ್ತು. ಇದಕ್ಕೆ ಆಧಾರವಾಗಿ ದ್ವೀಪದ ತಳಹದಿಯ ಲೋಹದಲ್ಲಿ ಒಂದು ದೊಡ್ಡ ಕ್ಲಿಷ್ಟವಾದ ಆಧಾರ ಸ್ತಂಭವನ್ನು (ಬಹುಶಃ ಕೊರೆದು) ನಿರ್ಮಿಸಿದ್ದರು. ಈ ಆಧಾರ ಸ್ತಂಭ ನಾಲ್ಕು ಅಡಿ ದಪ್ಪ, ನಾಲ್ಕು ಅಡಿ ಎತ್ತರ, ಹನ್ನೆರಡು ಗಜವ್ಯಾಸ. ಇದಕ್ಕೆ ಆಧಾರವಾಗಿ ಆರು ಗಜ ಎತ್ತರದ ಎಂಟು ಕಂಭಗಳು. ಆಧಾರ ಸ್ತಂಭದ ಮಧ್ಯಭಾಗದಲ್ಲಿ ಚುಂಬಕದ ಅಕ್ಷವನ್ನು ನಿಯಂತ್ರಿಸಲು ಹನ್ನೆರಡು ಅಂಗುಲ ಆಳದ ಒಂದು ಹಳ್ಳ. ಈ ಇಡೀ ರಚನೆ ಒಂದೇ ಲೋಹದಿಂದ ಮಾಡಿದ್ದು. ಇದರಿಂದ ಚುಂಬಕ ಸುಭದ್ರವಾಗಿರುತ್ತದೆ.

ಇಡೀ ಲಾಪುಟಾ ದ್ವೀಪವನ್ನು ಮೇಲೆ, ಕೆಳಗೆ ಪಕ್ಕಗಳಿಗೆ ಓಡಾಡಿಸಲು ಈ ರಚನೆಯನ್ನೇ ಉಪಯೋಗಿಸುತ್ತಿದ್ದರು. ಅದರ ವಿವರ ಹೀಗೆ:

ಕೆಳಗಿನ ದ್ವೀಪಗಳ ಮೂಲಕ ಹಾದು ಹೋಗುವ ಭೂ ಅಯಸ್ಕಾಂತ ರೇಖೆಗೆ ಈ ಚುಂಬಕ ಸಮಾನಾಂತರವಾಗಿ ನಿಲ್ಲುತ್ತದೆ. ಆಗ ಇಡೀ ದ್ವೀಪವೇ ಸ್ಥಿರವಾಗಿರುತ್ತದೆ. ಇದನ್ನು ಅರ್ಥ ಮಾಡಿಕೊಳ್ಳಲು ನನಗೆ ಸ್ವಲ್ಪ ಸಮಯ ಹಿಡಿಯಿತು. (ಚಿತ್ರ ೨) ಭೂ ಅಯಸ್ಕಾಂತ ರೇಖೆಯನ್ನು ಸಣ್ಣ ಸಣ್ಣ ಗೆರೆಗಳ AB ರೇಖೆ ಎಂದಿಟ್ಟುಕೊಳ್ಳಿ. ಲಾಪುಟಾ ದ್ವೀಪದ ಚುಂಬಕ CD ಎಂಬುವ ರೇಖೆಯಲ್ಲಿರುತ್ತದೆ. ಚುಂಬಕವನ್ನು ಸ್ವಲ್ಪ ತಿರುಗಿಸಿ, C ತುದಿಯು ಭೂಮಿಯಿಂದ ಆಕರ್ಷಿತವಾಗಿ ಹಾಗೂ D ತುದಿಯು ವಿಕರ್ಷಿತವಾಗುವಂತೆ ಮಾಡಿದಾಗ, ಸ್ಥಿರತೆ ಪಡೆಯಲು ಇಡೀ ದ್ವೀಪವೇ ಮೇಲೆರತೊಡಗುವುದು. E ಎಂಬ ಸ್ಥಾನಕ್ಕೆ ಬಂದಾಗ ಚುಂಬಕವನ್ನು ಪುನಃ ತಿರುಗಿಸಿ, D ತುದಿಯು ಆಕರ್ಷಿತವಾಗುವಂತೆ ಮಾಡಿದಾಗ ದ್ವೀಪ ಪುನಃ ಕೆಳಗಿಳಿಯುವುದು. ಹೀಗೆ EFGH

ನಂತೆ ಯಾವ ರೀತಿಯಲ್ಲಿ ಬೇಕಾದರೂ ನಡೆಸಬಹುದು. CD ಎಂಬುದು ABಗೆ ಸಮಾನಾಂತರವಾಗಿದ್ದಾಗ ದ್ವೀಪ ಸ್ಥಿರವಾಗಿ ನಿಂತಿರುವುದು.

ಹೀಗೆ ಈ ದ್ವೀಪವನ್ನು ಎಲ್ಲಿಂದರಲ್ಲಿಗೆ ಒಯ್ಯಬಹುದಾದರೂ ಇದಕ್ಕೊಂದು ಮಿತಿ ಇದೆ. ಬಾಲ್ನಿ ಬಾರ್ಬಿ ದ್ವೀಪದ ಆಸುಪಾಸಿನಲ್ಲಿ (ಸುಮಾರು ನಾಲ್ಕೈದು ಮೈಲಿ) ಮಾತ್ರ ಇದು ಓಡಾಡುವುದು. ನೆಲದಿಂದ ನಾಲ್ಕು ಮೈಲಿಗಿಂತ ಹೆಚ್ಚು ಎತ್ತರಕ್ಕೆ ಹೋಗಲಾರದು. ಇದಕ್ಕೆ ವಿಜ್ಞಾನಿಗಳು ಚುಂಬಕದ ಶಕ್ತಿ ನಾಲ್ಕೈದು ಮೈಲಿಗಳಿಗಿಂತ ದೂರ ಪ್ರಸಾರವಾಗಲಾರದು ಎಂಬ ಕಾರಣ ಕೊಡುತ್ತಾರೆ. ಈ ಚುಂಬಕವನ್ನು ನೋಡಿಕೊಳ್ಳಲು ವಿಜ್ಞಾನಿಗಳ ಒಂದು ತಂಡವೇ ಇದೆ. ನಕ್ಷತ್ರಗಳು ಮತ್ತು ಗ್ರಹಗಳನ್ನು ವೀಕ್ಷಿಸುವುದು ಅವರ ಉದ್ಯೋಗ. ಅವರು ಉಪಕರಣಗಳಿಗೆ ಬಳಸುವ ಗಾಜು ನಮ್ಮಲ್ಲಿರುವ ಗಾಜಿಗಿಂತ ಉತ್ತಮ ಮಟ್ಟದ್ದು. ಕೇವಲ ಮೂರು ಅಡಿ ದೂರದರ್ಶಕದಿಂದ ಅವರು ನಮ್ಮ ದೂರದರ್ಶಕಗಳಿಗಿಂತ ಮೂರು ಪಟ್ಟು ಹೆಚ್ಚಿನ ವೀಕ್ಷಕ ಶಕ್ತಿಯನ್ನು ಸಾಧಿಸಿದ್ದಾರೆ.

ನಕ್ಷತ್ರಗಳನ್ನು ಸ್ಫುಟವಾಗಿ ನೋಡಬಲ್ಲರು. ಹಾಗಾಗಿ ಯುರೋಪಿನಲ್ಲಿ ಸಾಧಿಸಿರುವ ಖಗೋಳ ಜ್ಞಾನಕ್ಕಿಂತ ಹೆಚ್ಚಿನ ಜ್ಞಾನವನ್ನು ಸಂಪಾದಿಸಿದ್ದಾರೆ. ೧೦,೦೦೦ ನಕ್ಷತ್ರಗಳ ಸ್ಥಾನ ವಿವರಗಳ ಪಟ್ಟಿ ತಯಾರಾಗಿದೆ. ಮಂಗಳಗ್ರಹದ ಸುತ್ತ ಸುತ್ತುವ ಎರಡು ಉಪಗ್ರಹಗಳನ್ನು ಕಂಡು ಹಿಡಿದಿದ್ದಾರೆ. ಒಂದು (ಆ ಗ್ರಹವನ್ನು) ಹತ್ತು ಗಂಟೆಗಳಿಗೊಮ್ಮೆ ಸುತ್ತಿದರೆ ಮತ್ತೊಂದು ಇಪ್ಪತ್ತೊಂದುವರೆ ಗಂಟೆಗಳಲ್ಲಿ ಸುತ್ತುತ್ತದೆ ಎಂದು ಸಹ ತಿಳಿದುಕೊಂಡಿದ್ದಾರೆ. ಯುರೋಪಿನಲ್ಲಿ ಹೊಸ ಸಿದ್ಧಾಂತವನ್ನು ಕೆಪ್ಲರ್ ರೂಪಿಸಿದ್ದುದು ಈಗ. ಆದರೆ ಇವರಿಗೆ ಆ ಸಿದ್ಧಾಂತಕ್ಕನುಗುಣವಾಗಿ ಗ್ರಹಗಳ ಚಲನೆ ನಡೆಯುತ್ತಿದೆ ಎಂದು ಬಹಳ ಮೊದಲೇ ತಿಳಿದಿತ್ತಂತೆ. ೯೩ ಧೂಮಕೇತುಗಳನ್ನು ಅವರು ಅಭ್ಯಸಿಸಿದ್ದರು. ಅವುಗಳ ಚಲನೆಯ ಎಲ್ಲ ವಿವರಗಳನ್ನೂ ಅವರು ತಿಳಿದಿದ್ದಾರೆ. ಈ ವಿವರಗಳನ್ನು ಈಗ ಯರೋಪಿನಲ್ಲೇನಾದರೂ ಪ್ರಕಟಿಸಿದರೆ, ಧೂಮಕೇತುಗಳ ಬಗ್ಗೆ ಸಿದ್ಧಾಂತವನ್ನು ಇನ್ನೂ ನಿಖರವಾಗಿ ರೂಪಿಸಬಹುದು.

ಇಲ್ಲಿಯ ಆಡಳಿತ ಕ್ರಮವನ್ನೂ ನಾನು ಪರಿಚಯ ಮಾಡಿಕೊಂಡೆ. ರಾಜನೇ ಇಲ್ಲಿಯ ಮುಖ್ಯಸ್ಥ. ಯಾವುದಾದರೂ ಸಂಸ್ಥಾನದವರು ರಾಜನ ವಿರುದ್ಧ ದಂಗೆ ಎದ್ದರೆ ರಾಜ ಅವರನ್ನು ಹದ್ದುಬಸ್ತಿನಲ್ಲಿಡಲು ಅನೇಕ ವಿಧಾನಗಳನ್ನು ಉಪಯೋಗಿಸುತ್ತಿದ್ದ. ಮೊದಲನೆಯದು- ಲಾಪುಟಾ ದ್ವೀಪವನ್ನು ಆ ಸಂಸ್ಥಾನದ ಮೇಲೆ ನಿಲ್ಲಿಸಿ, ಅವರಿಗೆ ಸೂರ್ಯನ ಬಿಸಿಲು, ಮಳೆ ಎರಡನ್ನೂ ತಡೆಹಿಡಿಯುವುದು. ಎರಡನೆಯದು- ಮೇಲಿನಿಂದ ಕಲ್ಲು ಗುಂಡುಗಳನ್ನು ಎಸೆಯುವುದು. ಹಾಗಾಗಿಯೂ ಅವರು ತಲೆ ಬಾಗದಿದ್ದರೆ ಮೂರನೆಯ ವಿಧಾನ- ಲಾಪುಟಾ ದ್ವೀಪವನ್ನೇ ಅವರ ಮೇಲೆ ಇಳಿಸುವುದು- ಆಗ ಆ ಸಂಸ್ಥಾನ ನೆಲಸಮವಾಗುವುದು.

ಮೂರು ವರ್ಷಗಳ ಮುಂಚೆ ಲಿಂಡಾಲಿನೋ ಎಂಬ ಸಂಸ್ಥಾನದವರು ದಂಗೆ ಎದ್ದಿದ್ದರಂತೆ. ಚಚ್ಚೌಕವಾಗಿದ್ದ ಆ ನಗರದ ನಾಲ್ಕು ಮೂಲೆಗಳಲ್ಲಿ ನಾಲ್ಕು ಭಾರೀ ಚುಂಬಕಗಳನ್ನು ಇಟ್ಟಿದ್ದರಂತೆ. ಕೇಂದ್ರ ಭಾಗದಲ್ಲಿ ಒಂದು ದೊಡ್ಡ ಬಂಡೆಯನ್ನಿರಿಸಿದ್ದರಂತೆ. ರಾಜ ಮೊದಲನೆಯ ವಿಧಾನವನ್ನು ಅನುಸರಿಸಿ, ಬಿಸಿಲು, ಮಳೆಯನ್ನು ತಡೆಹಿಡಿದಾಗ, ಅವರಿಗೆ ಯಾವ ಪರಿಣಾಮವೂ ಆಗಲಿಲ್ಲವಂತೆ. ಏಕೆಂದರೆ ಅವರು ಮುಂಜಾಗರೂ

ಕತೆಯಿಂದ ಸಾಕಷ್ಟು ಧಾನ್ಯ ಸಂಗ್ರಹಿಸಿಟ್ಟು ಕೊಂಡಿದ್ದರಂತೆ. ಎರಡನೆಯ ಸಲ ರಾಜ ಕಲ್ಲು ಬಂಡೆಗಳನ್ನು ಎಸೆಯಲು ಆಜ್ಞೆಕೊಟ್ಟಾಗ ಅವರುಗಳು ಗುಹೆಗಳೊಳಗೆ ರಕ್ಷಣೆ ಪಡೆದರಂತೆ. ರಾಜನು ಮೂರನೆಯ ವಿಧಾನವನ್ನು ಅನುಸರಿಸಲಿ ಎಂದವರು ಕಾಯುತ್ತಿದ್ದರಂತೆ. ಇದಕ್ಕಾಗಿ ಅವರು ಗುಟ್ಟಾಗಿ ಯೋಜನೆ ಹಾಕಿ ಚುಂಬಕಗಳನ್ನು ಅಣಿಮಾಡಿದ್ದರಂತೆ. ಇದರಿಂದ ಲಾಪುಟಾ ದ್ವೀಪ ಇಳಿಯುವುದು ಶೀಘ್ರವಾಗಿ, ಇವರುಗಳು ರಾಜನನ್ನು ಹಿಡಿದು ಕೊಂದು ಬಿಡಬೇಕೆಂದಿದ್ದರಂತೆ. ಆದರೆ ದ್ವೀಪದ ನಿಯಂತ್ರಣ ಅಸ್ತವ್ಯಸ್ತವಾಗುತ್ತಿದ್ದುದನ್ನು ಗಮನಿಸಿ, ವಿಜ್ಞಾನಿಗಳು ಲಾಪುಟಾವನ್ನು ಇನ್ನೂ ಮೇಲೆ ತೆಗೆದುಕೊಂಡು ಹೋಗಲು ರಾಜನ ಅನುಮತಿ ಕೇಳಿದರಂತೆ. ಆಮೇಲೆ ಪ್ರಯೋಗಾರ್ಥವಾಗಿ ಲೋಹದ ಚೆಂಡೊಂದನ್ನು ಇಳಿಸಿದಾಗ ಅವರಿಗೆ ಕೆಳಗಿನ ಚುಂಬಕಗಳ ಶಕ್ತಿ ತಿಳಿಯಿತಂತೆ. ಅಕಸ್ಮಾತ್ ಲಾಪುಟಾವನ್ನು ಇಳಿಸಿದ್ದಿದ್ದರೆ ಅದು ಧೊಪ್ಪೆಂದು ಬಿದ್ದು ನಾಶವಾಗಿ ಹೋಗುತ್ತಿತ್ತು. ಮತ್ತೆ ಮೇಲೇರುವ ಸಾಧ್ಯತೆಯೇ ಇರಲಿಲ್ಲ.

ಇಷ್ಟೆಲ್ಲಾ ವಿಷಯ ಸಂಗ್ರಹಿಸಲು ನಾನು ಸಾಕಷ್ಟು ಪ್ರಯಾಸ ಪಡಬೇಕಾಯಿತು. ನನ್ನೊಡನೆ ನಿಸ್ಸಂಕೋಚವಾಗಿ ಮಾತನಾಡುತ್ತಿದ್ದವರೆಂದರೆ ಕಿಣಿಕಿಣಿ ಸೇವಕರು, ಹೆಂಗಸರು, ವ್ಯಾಪಾರಿಗಳು ಮಾತ್ರ. ಉಳಿದ 'ಗೌರವಾನ್ವಿತರು' ನನ್ನನ್ನು ಅನಾದರ ಮಾಡದಿದ್ದರೂ ಯಾವಾಗಲೂ ಗಣಿತ ಹಾಗೂ ಸಂಗೀತದ ವಿಷಯಗಳಲ್ಲೇ ಗಹನವಾಗಿ ಆಲೋಚಿಸುತ್ತಿದ್ದುದರಿಂದ ನನಗೆ ಬೇಸರವಾಗುತ್ತಿತ್ತು. ದಿನ ಕ್ರಮೇಣ ಬೇಸರ ಹೆಚ್ಚಿ ಅಲ್ಲಿಂದ ಕೆಳಗಿಳಿದು ಇತರರೊಡನೆ ಬೆರೆಯಬೇಕು ಎನ್ನಿಸತೊಡಗಿತು. ರಾಜನ ಸಂಬಂಧಿಯೊಬ್ಬ ಈ ನಡುವೆ ನನಗೆ ಆಪ್ತನಾಗಿದ್ದ. ಆತ ಇತರರಂತಿರಲಿಲ್ಲ.

ಚಿತ್ರ ೨



ಸಂಗೀತ ಜ್ಞಾನ ಅಷ್ಟಕ್ಕಷ್ಟೇ. ಯಾವಾಗಲೂ ಯೋಚನೆಯಲ್ಲಿ ಮುಳುಗಿರುತ್ತಿರಲಿಲ್ಲ. ಆದ್ದರಿಂದ ಸಾಮಾನ್ಯ ಜನರ ದೃಷ್ಟಿಯಲ್ಲಿ ಆತ 'ಅಜ್ಞಾನಿ.' ಆತ ನನ್ನೊಡನೆ ವಿಶೇಷ ಸ್ನೇಹ ಬೆಳೆಸಿದ. ಅವನಿಗೆ ಇಬ್ಬರು ಕಿಣಿಕಿಣಿ ಸೇವಕರಿದ್ದರು. ಆದರೆ ನನ್ನೊಡನೆ ಮಾತನಾಡುವಾಗ ಆತ ಅವರನ್ನು ಹೊರಗೆ ಕಳುಹಿಸಿಬಿಡುತ್ತಿದ್ದ. ಈತನ ಸಹಾಯ ಪಡೆದು ನಾನು ದ್ವೀಪದಿಂದ ಕೆಳಗಿಳಿಯಲು ರಾಜಾಜ್ಞೆಯನ್ನು ಯಾಚಿಸಿದೆ. ರಾಜನಿಗೆ ನಾನು ಕೆಳಗೆ ಹೋಗುವುದು ಅಷ್ಟೇನೂ ಇಷ್ಟವಿಲ್ಲದಿದ್ದರೂ ನನಗೆ ಸಾಕಷ್ಟು ಕಾಣಿಕೆಗಳನ್ನು ಕೊಟ್ಟು, ತನ್ನ ಪರಿಚಿತ ಗೌರವಾನ್ವಿತ ವ್ಯಕ್ತಿಯೊಬ್ಬನ ವಿಳಾಸವನ್ನೂ ಕೊಟ್ಟನು.

ಬಾಲ್ನಿಬಾರಿ ದ್ವೀಪದ ಕೇಂದ್ರದ ನಗರ ಲಗಾಡೋನಲ್ಲಿ ನಾನಿಳಿದೆ. ಭೂಮಿಯ ಮೇಲೆ ಓಡಾಡಿ ಬಹಳ ದಿನಗಳಾಗಿದ್ದರಿಂದ ಸಾಕಷ್ಟು ಓಡಾಡಿದೆ. ಆಮೇಲೆ ನನ್ನ ಬಳಿ ವಿಳಾಸವಿದ್ದ ಮುನೋಡಿ ಎಂಬ ಪ್ರತಿಷ್ಠಿತ ವ್ಯಕ್ತಿಯ ಮನೆ ಪತ್ತೆ ಮಾಡಿದೆ. ಅಲ್ಲಿ ನನಗೆ ಅದ್ಭುತ ಸ್ವಾಗತ ದೊರೆಯಿತು. ಆತಿಥ್ಯದ ಜೊತೆಗೆ ವಾಸ್ತವ್ಯದ ವ್ಯವಸ್ಥೆಯೂ ಆಗಿತ್ತು.

ಮರುದಿನ ಬೆಳಗ್ಗೆ ನಾನು ಆತನ ರಥದಲ್ಲಿ ಕುಳಿತು ನಗರ ಪ್ರದಕ್ಷಿಣೆ ಮುಗಿಸಿದೆ. ಮನೆಗಳ ರಚನೆ ತುಂಬಾ ವಿಚಿತ್ರವಾಗಿತ್ತು. ಕೆಲವಂತೂ ತುಂಬಾ ಹಳೆಯದಾಗಿ ಕಾಣುತ್ತಿದ್ದವು. ದುರಸ್ತಿಯನ್ನು ಪೂರ್ತಿ ಮರೆತಂತಿತ್ತು. ನಗರದ ಹೊರಗೆ ಸುಮಾರು ಮೂರುಮೈಲಿ ಆಚೆ ಒಂದು ಮಹಾದ್ವಾರವಿತ್ತು. ಅದರಿಂದ ಹೊರಗೆಲ್ಲಾ ಖಾಲಿ ಜಮೀನು. ಅನೇಕರು ಅಲ್ಲಿ ಏನೋ ಕೆಲಸ ಮಾಡುತ್ತಿದ್ದರು. ಭೂಮಿ ಫಲವತ್ತಾಗಿ ಕಂಡಿತಾದರೂ ಯಾವುದೇ ದವಸ ಧಾನ್ಯ ಬೆಳೆದ ಕುರುಹೂ ಇರಲಿಲ್ಲ. ವಾಸಿಸುವ ಮನೆಯ ಬಗ್ಗೆ ಹಾಗೂ ಈ ರೀತಿ ಜಮೀನು ಪೋಲಾಗುತ್ತಿರುವ ಬಗ್ಗೆ ಜನರ ಔದಾಸೀನ್ಯ ಕಂಡು ನನಗೆ ತುಂಬಾ ಆಶ್ಚರ್ಯವಾಯಿತು. ಮನೆಗೆ ಹಿಂದಿರುಗಿದ ಮೇಲೆ ಮುನೋಡಿಯನ್ನು ಈ ಬಗ್ಗೆ ಪ್ರಶ್ನಿಸಿದಾಗ, ಆತ ತಕ್ಷಣ ಜವಾಬು ಕೊಡಲಿಲ್ಲ. ಸ್ವಲ್ಪ ಯೋಚಿಸಿ ಆಮೇಲೆ, ಮರುದಿನ ತನ್ನ ಸ್ವಂತ ಜಮೀನಿಗೆ ಕರೆದುಕೊಂಡು ಹೋಗುವುದಾಗಿ ತಿಳಿಸಿದ. ಮೊದಲು ಆತ ಈ ಪ್ರಾಂತ್ಯಕ್ಕೆ ರಾಜ್ಯಪಾಲ ಅಂದರೆ ರಾಜನ ಪ್ರತಿನಿಧಿ ಆಗಿದ್ದನಂತೆ. ಕೆಲವು ವ್ಯಕ್ತಿಗಳ ಒಳಸಂಚಿನ ಪರಿಣಾಮವಾಗಿ ಅವನಿಗೆ ಆ ಹುದ್ದೆ ತಪ್ಪಿಹೋಯಿತಂತೆ.

ಮರುದಿನ ಮುನೋಡಿ ಇಪ್ಪತ್ತು ಮೈಲಿ ದೂರದ ತನ್ನ ಕೃಷಿ ನಿವಾಸಕ್ಕೆ ಕರೆದುಕೊಂಡು ಹೋದನು. ಆ ಪ್ರದೇಶದ ವಾತಾವರಣವೇ ಬೇರೆ. ಎಲ್ಲೆಲ್ಲೂ ಹಸಿರು. ಜನರಿಗೆ ಕೈತುಂಬಾ ಕೆಲಸ. ಮರಗಳ ತೋಪುಗಳು, ಹಣ್ಣಿನ ಗಿಡಗಳು, ತರಕಾರಿ, ಧಾನ್ಯ ಇವೆಲ್ಲಾ ಕಣ್ಣಿಗೆ ಹಬ್ಬ ಉಂಟುಮಾಡುತ್ತಿದ್ದವು. ಪಕ್ಕದಲ್ಲಿನ ನದಿಯ ನೀರನ್ನು ಕಾಲುವೆಯ ಮೂಲಕ ಜಮೀನಿಗೆ ಹರಿಸಲಾಗಿತ್ತು. ಮಧ್ಯೆ ಮಧ್ಯೆ ಅಲಂಕಾರದ ಚಿಲುಮೆಗಳೂ ಇದ್ದವು. ಈ ವಿಸ್ತಾರವಾದ ಜಮೀನಿನ ಮಧ್ಯೆ ಆತನ ಮನೆ; ಅದರ ರಚನೆ ನಾನು ನಗರದಲ್ಲಿ ಕಂಡಂತೆ ಇರಲಿಲ್ಲ. ಸುಭದ್ರವಾಗಿ ಸುಂದರವಾಗಿತ್ತು. ಆದರೆ ವಾಸ್ತು ಶಿಲ್ಪವೂ ನನಗೆ ಹಿಡಿಸಿತು.

ನಗರಕ್ಕೂ ಈ ಕೃಷಿ ನಿವಾಸಕ್ಕೂ ಇದ್ದ ಅಜಗಜಾಂತರವನ್ನು ಕಂಡು ನಾನು ಆಶ್ಚರ್ಯ ವ್ಯಕ್ತಪಡಿಸಿದಾಗ, ಆತ (ಕಿಣಿಕಿಣಿ ಸೇವಕರೂ ಇಲ್ಲದ) ಏಕಾಂತದಲ್ಲಿ ಹಿಂದಿನ ಚರಿತ್ರೆಯನ್ನು ಸೂಕ್ಷ್ಮವಾಗಿ ತಿಳಿಸಿದನು.

ಮೊದಲಿಗೆ ಇಡೀ ದ್ವೀಪ ಹೀಗೆಯೇ ಹಸಿರಾಗಿ ಕಂಗೊಳಿಸುತ್ತಿತ್ತು. ಜನರು ಕಷ್ಟಪಟ್ಟು ಕೆಲಸ ಮಾಡಿ, ದವಸಧಾನ್ಯ ಬೆಳೆದು

ಆನಂದದಿಂದಿದ್ದರು. ಅಷ್ಟರಲ್ಲಿ ಕೆಲವು ಜನ ಲಾಪುಟಾ ದ್ವೀಪಕ್ಕೆ ಹೋಗಿ ಬಂದರು. ಗಣಿತ ಹಾಗೂ ಸಂಗೀತವನ್ನು ಕಲಿತು ಬಂದಿದ್ದೇವೆಂದು ಇಡೀ ದ್ವೀಪದಲ್ಲಿ ಜನಜೀವನ, ಆರ್ಥಿಕ ಸಂಪತ್ತು, ವ್ಯವಸಾಯ- ಎಲ್ಲದರಲ್ಲೂ ಕ್ರಾಂತಿ ಉಂಟುಮಾಡುವುದಾಗಿ ಹೇಳಿಕೊಂಡರು. ಮುನೋಡಿಯಿಂದ ಅಧಿಕಾರವನ್ನು ಕಿತ್ತುಕೊಂಡು 'ಅಕೆಡಮಿ'ಯೊಂದನ್ನು ಸ್ಥಾಪಿಸಿಕೊಂಡರು. ತಮ್ಮನ್ನು ತಾವು 'ನಿಯೋಜಕ'ರೆಂದು ಕರೆದುಕೊಂಡು, ಹೊಸ ಯೋಜನೆಗಳಿಗಾಗಿ ರಾಜಭಂಡಾರದಿಂದ ಹಣ ಪಡೆದರು. ಹೊಸ ಉಪಾಯಗಳನ್ನು ಜಾರಿಗೊಳಿಸುವ ನೆಪದಲ್ಲಿ ಹಳೆಯ ಪದ್ಧತಿಗಳನ್ನು ನಿರ್ಮೂಲನ ಮಾಡಿದರು. ಒಬ್ಬನೇ ಮನುಷ್ಯ ಹತ್ತು ಜನರ ಕೆಲಸವನ್ನು ಮಾಡಲು ಸಾಧ್ಯವಾಗುವ ಹಾಗೆ, ಎಂದಿಗೂ ಕೆಡದ ಸಲಕರಣೆಗಳನ್ನು ತಯಾರಿಸುವ ಹಾಗೆ, ತಮಗೆ (ನಿಯೋಜಕರಿಗೆ) ಇಷ್ಟ ಬಂದಾಗ ಫಲಕೊಡುವಂತೆ ಗಿಡ, ಮರಗಳನ್ನು ನಿಯಂತ್ರಿಸುವ ಹಾಗೆ-ಹೀಗೆ ಏನೇನೋ ಯೋಜನೆಗಳನ್ನು ಹಾಕಿದರು. ನದಿಯು ಇಳಿಜಾರಿನಲ್ಲಿ ಹರಿಯುತ್ತಿದ್ದುದನ್ನು ಉಪಯೋಗಿಸಿ ಮುನೋಡಿಯು ಒಂದು ಗಿರಣಿಯಂತ್ರವನ್ನು ಸ್ಥಾಪಿಸಿಕೊಂಡಿದ್ದನು. ಇದರಿಂದ ಆತನ ಜಮೀನಿನ ಬೆಳೆಗಾರರಿಗೇ ಅಲ್ಲದೇ, ಸುತ್ತಮುತ್ತಲಿನ ರೈತರಿಗೂ ತುಂಬಾ ಅನುಕೂಲವಾಗಿತ್ತು. ಆದರೆ ಈ 'ನಿಯೋಜಕರು' ಬೇರೊಂದು ಜಾಗದಲ್ಲಿ ಇಂಥ ಗಿರಣಿಯನ್ನು ಸ್ಥಾಪಿಸಬೇಕೆಂಬ ಕಾರಣ ಕೊಟ್ಟು ಇದನ್ನು ಮುಚ್ಚಿಸಿದರು. ನದಿಯಿಂದ ಯಾವುದೋ ದಿಕ್ಕಿನಲ್ಲಿ (ಇಳಿಜಾರನ್ನು ಬಿಟ್ಟು) ಕಾಲುವೆ ತೋಡಿ, ಕೊಳವೆ, ಮತ್ತು ಯಂತ್ರಗಳನ್ನು ಸ್ಥಾಪಿಸಿ, ಕೊನೆಗೆ ಅದು ಕೆಲಸ ಮಾಡಲಿಲ್ಲವೆಂದು ಅರ್ಧಕ್ಕೇ ಬಿಟ್ಟು ಹೋದರು. ಹೀಗೆಯೇ ಅರ್ಧಕ್ಕೆ ನಿಂತು ಹೋದ ಯೋಜನೆಗಳೇ ಈಗ ಕಾಣುತ್ತಿರುವುವು.

ಇಷ್ಟೆಲ್ಲಾ ಕೇಳಿದ ಮೇಲೆ ನನಗೆ ಈ 'ಅಕೆಡಮಿ'ಯನ್ನು ನೋಡಬೇಕೆನಿಸಿತು. ನಗರಕ್ಕೆ ಹಿಂದಿರುಗಿದ ಮೇಲೆ ಮುನೋಡಿ ಮಾರ್ಗದರ್ಶಿಯೊಬ್ಬನನ್ನು ಜೊತೆಮಾಡಿ ಅಲ್ಲಿಗೂ ಕಳಿಸಿಕೊಟ್ಟನು.

ಈ 'ಅಕೆಡಮಿ' ಎಂಬುದು ರಸ್ತೆಯ ಇಬ್ಬದಿಯಲ್ಲಿ ಸಾಲಾಗಿ ಕಟ್ಟಲಾಗಿದ್ದ ಮನೆ



**ಇತಿಹಾಸ**

ಇಂತಹ ಸುರಸೌಂದರ್ಯಕ್ಕೂ
ಕೊನೆಯುಂಟೆ?
ನಂಬುವುದು ಕಷ್ಟ;
ಆದರೆ ಉಂಟು:
ಬಿಚ್ಚಿ ನೋಡಿರಿ ಬೇಕಾದರೆ
ಇತಿಹಾಸದ ಗಂಟು!

-ಸಿ.ಪಿ.ಕೆ.

ಗಳು. ಇಲ್ಲಿಯ ವ್ಯವಸ್ಥಾಪಕ ನನ್ನನ್ನು ಅತಿ ಆದರದಿಂದ ಬರಮಾಡಿಕೊಂಡ. ಅಲ್ಲಿ ಸುಮಾರು ಐನೂರು 'ನಿಯೋಜಕರು' ಕೆಲಸ ಮಾಡುತ್ತಿದ್ದಾರೆಂದು ತಿಳಿಸಿದ. ನಾನು ಅನೇಕ ಕೋಣೆಗಳಿಗೆ ಭೇಟಿಕೊಟ್ಟೆ.

ಮೊದಲನೆಯ ಯೋಜನೆ-ಸೌತೆಕಾಯಿಗಳಿಂದ ಸೂರ್ಯನ ಬಿಸಿಲನ್ನು ಪುನರುತ್ಪತ್ತಿ ಮಾಡುವುದು. ಇದನ್ನಾತ ಎಂಟು ವರ್ಷಗಳಿಂದ ಪ್ರಯತ್ನಿಸುತ್ತಿದ್ದ. ಆತನ ಕೋಣೆಯ ತುಂಬಾ ಮಸಿ, ಆತನ ಕೂದಲು, ಚರ್ಮ, ಬಟ್ಟೆ ಎಲ್ಲ ಒಂದೇ ಬಣ್ಣಕ್ಕೆ ತಿರುಗಿತ್ತು. ಹೆಚ್ಚಿನ ಸೌತೆಕಾಯಿಗಳು ಸಿಗುವಂತಿದ್ದರೆ ಈ ಯೋಜನೆ ಬೇಗ ಮುಗಿಯುತ್ತಿತ್ತಂತೆ. ಅವುಗಳ ಬೆಲೆ ಜಾಸ್ತಿ, ದೊರೆಯುವುದೂ ದುರ್ಲಭ. ಹೀಗಾಗಿ ಯೋಜನೆ ಕುಂಟುತ್ತಿದೆಯಂತೆ.

ಎರಡನೆಯ ಕೋಣೆಯೊಳಗೆ ಕಾಲಿಟ್ಟರೆ ಹಿಂದಕ್ಕೆ ತಳ್ಳುವಂತಹ ದುರ್ನಾತ. ಈ ನಿಯೋಜಕನ ಕೈ ಮೈ ಬಟ್ಟೆ ಎಲ್ಲದರಿಂದ ಬರುತ್ತಿತ್ತು. ನನ್ನೊಡನಿದ್ದ ವ್ಯವಸ್ಥಾಪಕ ನನ್ನನ್ನು ಆತನಿಗೆ ಪರಿಚಯ ಮಾಡಿಕೊಟ್ಟಾಗ, ಆತ ನನ್ನನ್ನು ಆಲಂಗಿಸಿಕೊಂಡು ಬಿಟ್ಟ. ನನಗೆ ಆಗ ವಾಂತಿ ಬರುವ ಹಾಗಾಯಿತು. ಆತ ಇಲ್ಲಿಯ ಹಳೆಯ ವಿದ್ಯಾರ್ಥಿ- ಕೆಲಸವೆಂದರೆ ಮಲ ಮೂತ್ರಗಳ ಅಧ್ಯಯನ. ಇದಕ್ಕಾಗಿ ಆತನಿಗೆ ಒಂದು ಪೆಟ್ಟಿಗೆ ತುಂಬಾ 'ಮಲ' ಪ್ರತಿವಾರವೂ ಸರಬರಾಜು ಆಗುತ್ತಿತ್ತಂತೆ. ಆತನ ಕೆಲಸವೆಂದರೆ- ಮಲದಿಂದ ಜೊಲ್ಲಿನ ಅಂಶ, ಮೇದೋಜೀರಕ ರಸದ ಅಂಶ, ಪಿತ್ತರಸದ ಅಂಶ ಈ ಎಲ್ಲವನ್ನೂ ಬೇರ್ಪಡಿಸಿ, ಮೊದಲಿನ ಆಹಾರವನ್ನು ಪುನರುತ್ಪತ್ತಿ ಮಾಡುವುದಂತೆ!

ಮುಂದಿನ ಯೋಜನೆ ಸಿಡಿಮದ್ದಿನ ಪುಡಿ ತಯಾರಿಸುವುದು. ಮೂಲವಸ್ತು ಉಪ್ಪು ನೀರು. ಇದನ್ನು ಹೆಪ್ಪುಗಟ್ಟಿಸಿ ಪರಿಷ್ಕರಿಸುವುದಂತೆ. ಇದರ ನಿಯೋಜಕ ಬೆಂಕಿಯ ಬಗ್ಗೆ ದೊಡ್ಡ ಗ್ರಂಥವನ್ನೇ ಬರೆದು, ಬೆಂಕಿಯ ಜ್ವಾಲೆಯನ್ನು ಯಾವ ಯಾವ ಆಕಾರಕ್ಕೆ ಹೇಗೆ ತಿರುಗಿಸಬಹುದು ಎಂದು ವಿವರಿಸಿದ್ದ.

ಇನ್ನೊಬ್ಬ ವಾಸ್ತು ಶಿಲ್ಪಿ. ಹೊಸ ಬಗೆಯಲ್ಲಿ ಮನೆ ಕಟ್ಟುವುದನ್ನು ಪ್ರಯೋಗ ಮಾಡುತ್ತಿದ್ದ-ತಾರಸಿಯಿಂದ ಪ್ರಾರಂಭಿಸಿ ಕೆಳಕ್ಕೆ ಗೋಡೆಯನ್ನು ಕಟ್ಟುತ್ತಾ ಹೋಗುವುದು. ಈ ಪ್ರಯೋಗಕ್ಕೆ ಅವನಿಗೆ ಸ್ಫೂರ್ತಿ ನೀಡಿದ್ದು ಎರಡು ಕೀಟಗಳು- ಜೇಡ ಮತ್ತು ಜೇನುನೊಣ.

ಇನ್ನೊಬ್ಬ ನಿಯೋಜಕ ಹುಟ್ಟು ಕುರುಡ. ಅವನ ವಿದ್ಯಾರ್ಥಿಗಳು ಸಹ ಕುರುಡರೇ. ವಿವಿಧ ಬಣ್ಣಗಳನ್ನು ಬೆರೆಸಿ ಹೊಸ ಬಣ್ಣಗಳನ್ನು ಸೃಷ್ಟಿಸುವುದೇ ಅವರ ಕೆಲಸ. ಆ ಬಣ್ಣಗಳನ್ನು ಅವರು ಸ್ಪರ್ಶ ಹಾಗೂ ವಾಸನೆಯಿಂದ ಗುರುತಿಸುತ್ತಿದ್ದರು. ಇವರ ಈ ಸಂಶೋಧನೆಗೆ ರಾಜನಿಂದ ಹಾಗೂ ಜನಸಾಮಾನ್ಯರಿಂದ ಅದ್ಭುತ ಬೆಂಬಲವಿತ್ತು.

ನೇಗಿಲು, ಎತ್ತು ಇವು ಯಾವುದನ್ನು ಬಳಸದೇ ವ್ಯವಸಾಯ ಮಾಡುವುದನ್ನು ಒಬ್ಬ ನಿಯೋಜಕ ಅಭಿವೃದ್ಧಿ ಪಡಿಸುತ್ತಿದ್ದ. ವಿಧಾನ ಹೀಗೆ- ಒಂದು ಎಕರೆ ನೆಲದಲ್ಲಿ ಆರು ಅಂಗುಲಗಳ ಅಂತರದಲ್ಲಿ ಸಣ್ಣ ಹಳ್ಳ ಮಾಡಿ (ಎಂಟು ಅಂಗುಲದಷ್ಟು) ಬೀಜಗಳು, ಕಾಯಿಗಳು, ಹಣ್ಣಿನ ಚೂರುಗಳು, ತರಕಾರಿಗಳ ಚೂರುಗಳು ಇಂತಹವುಗಳನ್ನು ಹೂತು ಬಿಡುವುದು. ಆಮೇಲೆ ಸುಮಾರು ೬೦೦ ಹೆಗ್ಗಣಗಳನ್ನು ಒಟ್ಟಿಗೇ ಅಲ್ಲಿಬಿಡುವುದು. ಅವು ಆಹಾರವನ್ನು ಹುಡುಕುತ್ತಾ ನೆಲವನ್ನು ಬಗೆದು ಹಾಕುವುವು ಜತೆಗೇ ಸಾಕಷ್ಟು ಗೊಬ್ಬರವನ್ನೂ ಒದಗಿಸುವುವು. ಈಗ ನೆಲ ಬಿತ್ತನೆಗೆ ಸಿದ್ಧ. ಈ ಪ್ರಯೋಗದಿಂದ ಲಾಭ ಎಷ್ಟು

ಎಂದು ಇನ್ನೂ ಅಂದಾಜು ಮಾಡಲು ಸಾಧ್ಯವಾಗಿಲ್ಲವಂತೆ. ಏಕೆಂದರೆ ಅನೇಕ ತೊಂದರೆಗಳಿಂದ ಫಸಲೇ ಬರಲಿಲ್ಲವಂತೆ.

ಮುಂದಿನ ನಿಯೋಜಕ ದಾರಗಳನ್ನು ಮಾಡಲು ಕೀಟಗಳನ್ನು ಉಪಯೋಗಿಸಿಕೊಳ್ಳುತ್ತಿದ್ದ. ವಿಶ್ವದ ಜನ ರೇಷ್ಮೇ ಹುಳುವಿನ ಹೊರತಾಗಿ ಇನ್ನಾವುದೇ ಕೀಟದ ಕಲಾ ಕೌಶಲವನ್ನು ಉಪಯೋಗಿಸುತ್ತಿಲ್ಲ ಎಂದು ಆತನ ವ್ಯಥೆ. ಆತನ ಕೋಣೆಯ ತುಂಬಾ ಜೇಡನ ಬಲೆ, ಇರಣಗಳು. ನಾವು ಕೋಣೆಯೊಳಗೆ ಹೆಜ್ಜೆ ಇಡುತ್ತಿದ್ದಂತೆಯೇ ಆತ ಯಾವುದೇ ಬಲೆಯನ್ನು ಮುಟ್ಟಕೂಡದೆಂದು ಕೂಗಿ ಹೇಳಿದ. ಜೇಡಗಳಿಗೆ ಬಣ್ಣ ಬಣ್ಣದ ಚಿಟ್ಟೆಗಳನ್ನು ಆಹಾರವಾಗಿ ಕೊಡುವುದರಿಂದ ನೇರವಾಗಿ ಬಣ್ಣದ ದಾರ ತಯಾರಿಸಬಹುದು ಎಂದು ತೋರಿಸಲು ಆತ ಪ್ರಯತ್ನಿಸುತ್ತಿದ್ದ. ಹಾಗೆಯೇ ಗೋಂದು, ಅಂಟು- ಇಂತಹ ಪದಾರ್ಥಗಳನ್ನು ತಿನ್ನಿಸಿದರೆ ಅವು ಗಟ್ಟಿಯಾದ ಹಾಗೂ ಒಂದೇ ದಪ್ಪದ ದಾರ ತಯಾರಿಸುತ್ತವೆ ಎಂದಾತ ನಂಬಿದ್ದ.

ಖಗೋಳ ವಿಜ್ಞಾನಿಯೊಬ್ಬ ಚರ್ಚುಗಳ ಗೋಪುರಗಳ ಮೇಲೆ ನಿಲ್ಲುವ ಹುಂಜಗಳನ್ನು ಸುಧಾರಿಸಲು ಶ್ರಮಿಸುತ್ತಿದ್ದ. ಅದರ ಕಾಲ ಬಳಿ ಒಂದು ಸೌರಗಡಿಯಾರವನ್ನು ಸ್ಥಾಪಿಸಿ, ಹುಂಜ (ಕೇವಲ ಗಾಳಿಯ ದಿಕ್ಕು ತೋರಿಸಲು ಮಾತ್ರವಲ್ಲದೇ) ಗಾಳಿಯ ದಿಕ್ಕು ಬದಲಾಯಿಸಿದಾಗಲೆಲ್ಲಾ ಮತ್ತು ಪ್ರತಿ ಗಂಟೆ ಗೊಮ್ಮೆ ಕೂಗುವಂತೆ ಮಾಡಲು ಪ್ರಯತ್ನಿಸುತ್ತಿದ್ದ.

ವೈದ್ಯನೊಬ್ಬ ಹೊಟ್ಟೆನೋವಿಗೆ ವಿಶೇಷ ಉಪಚಾರವನ್ನು ಕಂಡು ಹಿಡಿದಿದ್ದ. (ಕಮ್ಮಾರನ ತಿದಿಯಂತಹ) ಎರಡು ಚೀಲಗಳಿದ್ದವು. ಇವುಗಳ ಬಾಯಿಗೆ ದಂತದ ನಾಳಗಳು. ಈ ನಾಳವನ್ನು ರೋಗಿಯ ಗುದದ್ವಾರದೊಳಗೆ ನೂಕುತ್ತಿದ್ದ. ಅನಂತರ ಕೆಳಹೊಟ್ಟೆಯ ಗಾಳಿಯೆಲ್ಲವನ್ನೂ ಚೀಲದೊಳಕ್ಕೆ ಎಳೆಯುತ್ತಿದ್ದ. ಇದರಿಂದ ರೋಗಿಗೆ ಗುಣ ಕಾಣದಿದ್ದಲ್ಲಿ ಇನ್ನೊಂದು ತಿದಿಯೊಳಗೆ ಗಾಳಿತುಂಬಿ ಅದನ್ನು ದೇಹದೊಳಕ್ಕೆ ತಳ್ಳುತ್ತಿದ್ದ. ಪುನಃ ಅದನ್ನು ಎರಡನೆಯ ತಿದಿಯಿಂದ ಈಚೆಗೆ ಎಳೆಯುತ್ತಿದ್ದ. ಹೀಗೆ ಎರಡು ಮೂರು ಬಾರಿ ಮಾಡಿದಲ್ಲಿ ಹೊಟ್ಟೆನೋವು ಮಾಯವಾಗುವುದಂತೆ. ಏಕೆಂದರೆ ಗಾಳಿ ಹೊಟ್ಟೆಯೊಳಗಿನ ನೋವುಂಟು ಮಾಡುವ ಪದಾರ್ಥವನ್ನು



**ಭಾರ**

ಮೈತೂಕ ಹೆಚ್ಚಿಸಿಕೊಂಡರೆ,
ಬದುಕಿದಾಗ ಭೂಮಿಗೆ ಭಾರವಾಗುತ್ತೇವೋ
ಇಲ್ಲವೋ, ಆದರೆ
ಸತ್ತಾಗ ನಾಲ್ಕು ಜನಕ್ಕೆ
ಭಾರವಾಗುತ್ತೇವೆ!

–ಸಿ.ಪಿ.ಕೆ.

ಹೊರಕ್ಕೆ ಎಳೆದು ಹಾಕಿ ಬಿಡುತ್ತದೆಯಂತೆ. ಈ ಎರಡೂ ವಿಧಾನಗಳನ್ನು ನನ್ನೆದುರಿಗೆ ನಾಯಿಯೊಂದರ ಮೇಲೆ ಪ್ರಯೋಗಿಸಿದ. ಮೊದಲನೆಯ ಪ್ರಯೋಗದಿಂದ ನಾಯಿ ವಿಲಿವಿಲಿ ಎಂದು ಒದ್ದಾಡಿತು. ಎರಡನೆಯ ದರಿಂದ ಹೊಟ್ಟೆ ಊದಿ ಅದು ಸತ್ತೇ ಹೋಯಿತು. ಆದರೂ ಆತ ಧೃತಿಗೆಡದೆ (ಅದು ಬದುಕುತ್ತದೆ ಎಂಬ ವಿಶ್ವಾಸದಿಂದ) ಪ್ರಯೋಗ ಮುಂದುವರೆಸಿದ.

ಈ ಪ್ರಯೋಗಗಳೆಲ್ಲಾ ಸಾಧಾರಣ ದರ್ಜೆ ಯವಂತೆ. ಕೆಲವು ಪ್ರೊಫೆಸರುಗಳು ನಡೆಸು ತ್ತಿದ್ದ 'ಉತ್ತಮ' ಪ್ರಯೋಗಗಳನ್ನು ಸಹ ನಾನು ನೋಡಿದೆ.

ವಿಶ್ವ ಕಲಾಕಾರ ಎಂಬ ಹೆಸರು ಪಡೆದ ಪ್ರೊಫೆಸರ್ ಒಬ್ಬನಿಗೆ ಐವತ್ತು ಮಂದಿ ಸಹಾ ಯಕರು. ಅನೇಕ ಯೋಜನೆಗಳನ್ನಾತ ನಿರ್ವ ಹಿಸುತ್ತಿದ್ದ- ಕೋಣೆಯೊಳಗಿನ ಗಾಳಿಯೆಲ್ಲ ವನ್ನೂ ಸೇರಿಸಿ, ನೀರಿನಂಶವನ್ನು ಎಳೆದುಕೊ ಳ್ಳುವುದು ಒಂದು ಯೋಜನೆ: ಕಲ್ಲನ್ನು (ಹತ್ತಿ ಯಷ್ಟು) ಮೃದುವಾಗಿ ಪರಿವರ್ತಿಸುವುದು ಇನ್ನೊಂದು: (ಜೀವಂತ) ಕುದುರೆಗಳ ಪಾದ ಗಳನ್ನು ಕಲ್ಲಿನಷ್ಟು ಗಟ್ಟಿ ಮಾಡುವುದು- ಹೀಗೆ ಅನೇಕ ಪ್ರಯೋಗಗಳನ್ನು ನಡೆಸುತ್ತಿದ್ದನು. ಆತ ಎರಡು ಮುಖ್ಯವಾದ ಪ್ರಯೋಗಗಳನ್ನು ಮಾತ್ರ ತಾನೇ ಖುದ್ದಾಗಿ ಮಾಡುತ್ತಿದ್ದ. ಮೊದ ಲನೆಯದು ಉತ್ತಮ ತಳಿಯ ಬೀಜಗಳ ಹೊಟ್ಟನ್ನು ಹಾಕಿ ಬೆಳೆ ತೆಗೆಯುವುದು (ಈ ವಿಧಾನವನ್ನು ಆತ ಅನೇಕ ಬಾರಿ ವಿವರಿಸಿ ದರೂ ನನಗೆ ಸರಿಯಾಗಿ ತಿಳಿಯಲೇ ಇಲ್ಲ.) ಎರಡನೆಯದು ತರಕಾರಿ, ಅಂಟು ಹಾಗೂ ಖನಿಜಗಳಿಂದ ತಯಾರಿಸಿದ ವಿಶೇಷ ಲೇಪ ವನ್ನು ಎರಡು ಕುರಿಮರಿಗಳಿಗೆ (ಒಂದು ಗಂಡು, ಒಂದು ಹೆಣ್ಣು) ಹಚ್ಚುವುದು. ಇದರಿಂದ ಅವುಗಳ ಮೈಮೇಲೆ ತುಪ್ಪಟವೇ ಇಲ್ಲದಂತಾಗುವುದು. ಅವುಗಳ ಸಂತಾನಕ್ಕೂ ಇದೇ ವಿಧಾನ ಅನುಸರಿಸಿ, ಮುಂದೊಂದು ದಿನ ದ್ವೀಪದ ತುಂಬಾ ತುಪ್ಪಟವಿಲ್ಲದ ಕುರಿಗಳೇ ಕಾಣುವಂತೆ ಮಾಡುವುದು ಅವನ ಮಹದಾಸೆ.

ಮತ್ತೊಂದು ಕೋಣೆಯೊಳಗೆ ತಾರಸಿಯ ಮೇಲೆ ತಂತಿಗಳನ್ನು ಬಿಗಿದು ಕಟ್ಟಿ ಬಲೆ ಯನ್ನು ಹೆಣೆಯಲಾಗಿತ್ತು. ಗೋಡೆಯಂಚಿ ನಲ್ಲಿ ಸಾಲಾಗಿ ವಿದ್ಯಾರ್ಥಿಗಳು ನಿಂತಿದ್ದರು. ಈ ಬಲೆಯಿಂದ ದಾಳಗಳಂತೆ ಕಾಣುವ ವಸ್ತುಗಳನ್ನು ನೇತುಹಾಕಲಾಗಿತ್ತು. ಅವುಗಳ ವಿವಿಧ ಪದ ಸಮೂಹಗಳನ್ನು ಬರೆಯಲಾ ಗಿತ್ತು. ಒಂದು ಯಂತ್ರವನ್ನು ಶುರುಮಾಡಿದ ಕೂಡಲೇ ಪದಗಳ ಜೋಡಣೆ ಬದಲಾಗಿತ್ತು. ಮೂವತ್ತಾರು ವಿದ್ಯಾರ್ಥಿಗಳು ಒಂದು ಕ್ರಮ ವಾಗಿ ಈ ಪದಗಳನ್ನು ಓದಿ ಹೇಳುತ್ತಿದ್ದರು. ನಾಲ್ವರು ವಿದ್ಯಾರ್ಥಿಗಳು ಅವನ್ನು ಬರೆದು ಕೊಂಡರು. ಸ್ವಲ್ಪ ಹೊತ್ತಾದ ಮೇಲೆ ಯಂತ್ರ ಪುನಃ ಪದಗಳನ್ನು ಬದಲಾಯಿಸಿತು. ಮತ್ತೆ ಹುಡುಗರು ಹೊಸ ವಾಕ್ಯಗಳನ್ನು ಓದಿ ಬರೆ ದುಕೊಂಡರು. ಇದೇ ಕೆಲಸವನ್ನು ದಿನಕ್ಕೆ ಆರು ಗಂಟೆ ನಡೆಸಿ, ಎಲ್ಲಾ ವಾಕ್ಯಗಳನ್ನು ದಪ್ಪ ದಪ್ಪ ಪುಸ್ತಕಗಳಲ್ಲಿ ಬರೆದಿಡಲಾಗುತ್ತಿತ್ತು. ಈ ವಾಕ್ಯಗಳನ್ನು "ಸರಿಯಾಗಿ" ಜೋಡಿಸಿ ದಲ್ಲಿ ಯಾವುದೇ ಕಲೆ ಅಥವಾ ವಿಜ್ಞಾನವನ್ನು ಕಲಿತುಬಿಡಬಹುದಂತೆ. ಈ ಯಂತ್ರವನ್ನು ನಿರ್ಮಿಸಲು ಆ ಪ್ರೊಫೆಸರನು ತನ್ನೆಲ್ಲ ಶಬ್ದ ಭಾಂಡಾರವನ್ನು ಉಪಯೋಗಿಸಿದ್ದನಂತೆ. ನಾಮ ಪದ, ಕ್ರಿಯಾಪದ, ವಿಶೇಷಣಗಳನ್ನು ಒಂದು ಗೊತ್ತಾದ ಪ್ರಮಾಣದಲ್ಲಿ ವಿಂಗಡಿ ಸಿದ್ದನಂತೆ. ಇದು ಅನೇಕ ವರ್ಷಗಳ ಕಾರ್ಯದ ಫಲ. ಆದ್ದರಿಂದ ನಾನು ನನ್ನ ದೇಶಕ್ಕೆ ಹಿಂದಿರುಗಿದ ಕೂಡಲೇ ಈ ಹೊಸ ಆವಿಷ್ಕಾರದ ಬಗ್ಗೆ ಜನರಲ್ಲಿ ಸಾಕಷ್ಟು ಆಸಕ್ತಿ

ಉಂಟುಮಾಡಿ, ಆತನಿಗೆ ಪ್ರೋತ್ಸಾಹ ಸಿಕ್ಕುವಂತೆ ಮಾಡುವುದಾಗಿ ಹೇಳಿದೆ.

ಭಾಷಾಶಾಸ್ತ್ರದ ಪ್ರಗತಿ ಬೇರೆಯ ತರಹದ್ದಾಗಿತ್ತು. ಉದ್ದುದ್ದನೆಯ ವಾಕ್ಯಗಳನ್ನು ಚಿಕ್ಕದು ಮಾಡಲು ಕ್ರಿಯಾಪದ, ವಿಭಕ್ತಿ ಪ್ರತ್ಯಯ ಇತ್ಯಾದಿಗಳನ್ನು ತೆಗೆದುಬಿಡುವುದು. ಏಕೆಂದರೆ ನಾಮಪದಗಳ ಹೊರತಾಗಿ ಬಾಕಿ ಎಲ್ಲವೂ ಅರ್ಥವಿಲ್ಲದ ಶಬ್ದಗಳಂತೆ. ಇನ್ನೊಂದು ಯೋಜನೆ- ಶಬ್ದಗಳನ್ನೇ ತೆಗೆದು ಬಿಡುವುದು. ಒಂದೊಂದು ಶಬ್ದ ಉಚ್ಚರಿಸಿದಾಗಲೂ ನಮ್ಮ ಶ್ವಾಸಕೋಶಗಳಿಗೆ ಕೆಲಸ ಹೆಚ್ಚಾಗಿ ನಮ್ಮ ಆಯುಸ್ಸು ಕ್ಷೀಣಿಸುವುದಲ್ಲವೇ? ಆದ್ದರಿಂದ ಯಾವ ವಸ್ತುವಿನ ಬಗ್ಗೆ ಮಾತನಾಡಬೇಕೋ ಅದನ್ನೇ ಒಯ್ದುಬಿಡುವುದು. ಇದಕ್ಕೆ ಮುಖ್ಯವಾಗಿ ತಡೆ ಒಡ್ಡುತ್ತಿರುವವರೆಂದರೆ ಅಜ್ಞಾನಿಗಳಾದ ಸಾಮಾನ್ಯ ಮನುಷ್ಯರು. ಅವರು ತಮ್ಮ ಪೂರ್ವಜರ ಹಾಗೆಯೇ ವಟವಟ ಎಂದು ಮಾತನಾಡಬೇಕಂತೆ! ಈ ಪ್ರಯೋಗ ನಡೆಸುತ್ತಿದ್ದ ಪ್ರೊಫೆಸರುಗಳು ತಮ್ಮೊಡನೆ 'ವಸ್ತುಗಳನ್ನು' ಹೊತ್ತೊಯ್ದು ಅವುಗಳ ಭಾರಕ್ಕೆ ಕುಸಿಯುತ್ತಿದ್ದರಂತೆ! ಇಷ್ಟಾದರೂ ಈ ವಿಧಾನವನ್ನು ಅಭಿವೃದ್ಧಿಗೊಳಿಸಿ, ವಿಶ್ವದಾದ್ಯಂತ ಪ್ರಚುರಪಡಿಸಿದರೆ ರಾಷ್ಟ್ರಗಳ ನಡುವಿನ ವ್ಯವಹಾರವು ಸುಲಭವಾಗಿ ಬಿಡುತ್ತದೆ ಎಂದು ಅವರ ನಂಬಿಕೆ.

ಗಣಿತದ ಪ್ರೊಫೆಸರ್ ಹೊಸ ಪ್ರಯೋಗ ನಡೆಸಿದ್ದ. ಅದೆಂದರೆ ಮಗ್ಗಿ, ಕೋಷ್ಟಕಗಳನ್ನು ಒಂದು ವಿಶೇಷವಾದ ಟಿಂಕ್ಚರ್‌ನಂತಹ ಮಸಿಯಲ್ಲಿ ತೆಳ್ಳನೆಯ (ವೇಫರ್) ಕಾಗದದ ಮೇಲೆ ಬರೆದು, ವಿದ್ಯಾರ್ಥಿಗೆ ತಿನ್ನಿಸುವುದು; ಆಮೇಲೆ ಮೂರು ದಿನ ಅವನಿಗೆ ಪಥ್ಯದ ಆಹಾರ. ಆಗ ಆ ಟಿಂಕ್ಚರ್ ನಿಧಾನವಾಗಿ ಮಿದುಳಿಗೆ ಏರುವುದು. ಈ ವಿಧಾನವನ್ನು ಅಭಿವೃದ್ಧಿಪಡಿಸಲು ಆ ಪ್ರೊಫೆಸರನಿಗೆ ತುಂಬಾ ಕಷ್ಟವಾಗಿತ್ತು. ಏಕೆಂದರೆ ವಿದ್ಯಾರ್ಥಿಗಳು ಆ ಕೋಷ್ಟಕದ ಚೀಟಿಯನ್ನು ತಿನ್ನದೇ (ಸುಳ್ಳು ಹೇಳಿ) ಮೋಸ ಮಾಡುತ್ತಿದ್ದರು. ಬಲವಂತವಾಗಿ ತಿನ್ನಿಸಿದಾಗ ಅದು (ಮಿದುಳಿಗೆ ಹೋಗದೆ) ತಕ್ಷಣವೇ ಬಾಯಿಂದ ವಾಪಸ್ಸು ಬಂದು ಬಿಡುತ್ತಿತ್ತು.

ಕೆಲವು ರಾಜಕುಮಾರರ ಜ್ಞಾಪಕಶಕ್ತಿ



**ಕಣ್ಣೀರು**

ಕಣ್ಣೀರಿನಲ್ಲಿ
ಎರಡು ವಿಧ:
ಮೊಸಳೆ ಕಣ್ಣೀರು
ಮತ್ತು
ಹಸುಳೆ ಕಣ್ಣೀರು!

-ಪಿ.ಪಿ.ಕೆ.

ತುಂಬಾ ಕಡಿಮೆ ಇತ್ತು. ಅದನ್ನು ಸುಧಾರಿಸಲು ವೈದ್ಯನು ಮಂತ್ರಿಗಳಿಗೆ ಒಂದು ಸಲಹೆ ಕೊಟ್ಟಿದ್ದನು. ಈ ಮಂತ್ರಿಗಳು ತಂತಮ್ಮ ಇಲಾಖೆಯ ಬಗ್ಗೆ ರಾಜಕುಮಾರರಿಗೆ ವರದಿ ಒಪ್ಪಿಸುವಾಗ ಹಿಂದಿನ ವರದಿಯನ್ನು ರಾಜಕುಮಾರರು ಮರೆತುಬಿಟ್ಟಿರುತ್ತಿದ್ದರು. ಆದ್ದರಿಂದ ವರದಿಯನ್ನು ಒಪ್ಪಿಸಿದಮೇಲೆ ಈ ಕೆಳಕಂಡ ಯಾವುದಾದರೂ ಒಂದು ವಿಧಾನವನ್ನು ಅನುಸರಿಸುವುದು.

೧) (ರಾಜಕುಮಾರರ) ಮೂಗನ್ನು ಹಿಂಡುವುದು.
೨) ಹೊಟ್ಟೆಗೆ ಒದೆಯುವುದು.
೩) ಕಿವಿಗಳನ್ನು ಮೂರು ಸಲ ತಿರುಚುವುದು.
೪) ಸೂಜಿಯಿಂದ ಚುಚ್ಚುವುದು.
೫) ತೋಳನ್ನು ಹಿಂಡುವುದು.

ಪ್ರತಿಸಲ ವರದಿ ಒಪ್ಪಿಸಿದಾಗಲೂ ಈ ವಿಧಾನ ಅನುಸರಿಸಿದಲ್ಲಿ ರಾಜಕುಮಾರರ ಜ್ಞಾಪಕಶಕ್ತಿ ಖಂಡಿತ ಸುಧಾರಿಸಿ, "ಈ ಉಪಚಾರದ ಅವಶ್ಯಕತೆ ಇಲ್ಲ" ಎಂದು ತಾವಾಗಿ ಹೇಳುವರು.

ವಿವಿಧ ರಾಜಕೀಯ ಗುಂಪುಗಳು ಜಗಳ ಆರಂಭಿಸಿದಾಗ ಅದನ್ನು ಬಗೆಹರಿಸುವ ಸುಲಭ ವಿಧಾನ- ಎರಡೂ ಗುಂಪುಗಳ ನಾಯಕರನ್ನು ಕರೆಸಿ, ಸಾಧಾರಣವಾಗಿ ಒಂದೇ ಗಾತ್ರದ ತಲೆ ಇರುವ ಇಬ್ಬರನ್ನು (ವಾದಿ, ಪ್ರತಿವಾದಿ ಗುಂಪಿನಿಂದ ಒಬ್ಬೊಬ್ಬರು) ಜೊತೆ ಮಾಡುವುದು. ಅವರ ಮಿದುಳುಗಳನ್ನು ಅರ್ಧಕ್ಕೆ ಸೀಳಿ, ಈ ಅರ್ಧವನ್ನು ಆ ತಲೆಗೆ, ಆ ಅರ್ಧವನ್ನು ಈ ತಲೆಗೆ ಹೀಗೆ ಜೋಡಿಸುವುದು. ಈ ಕಾರ್ಯವನ್ನು ಚಾಕಚಕ್ಯದಿಂದ ಮಾಡಿದಲ್ಲಿ ಜಗಳವೇ ಇಲ್ಲದಂತಾಗುವುದಂತೆ.

ಜನರಿಗೆ ಏನೇನೂ ತೊಂದರೆ ಆಗದಂತೆ ಅವರಿಂದ ತೆರಿಗೆ ವಸೂಲು ಮಾಡುವ ವಿಧಾನವನ್ನು ಸಹ ಪರಿಶೀಲಿಸಲಾಗುತ್ತಿತ್ತು. ಪ್ರತಿಯೊಬ್ಬನ ಗುಣ ಮತ್ತು ಅವಗುಣಗಳ ಪಟ್ಟಿಯನ್ನು ಒಂದು ಸಮಿತಿ ತಯಾರಿಸುವುದು.

ಈ ಸಮಿತಿಯಲ್ಲಿ ಆತನ ನೆರೆಹೊರೆಯವರು ಇರುವರು. ಇನ್ನೊಂದು ವಿಧಾನವೆಂದರೆ ತನ್ನ ಗುಣಾವಗುಣಗಳ ಬಗ್ಗೆ ಬರೆದುಕೊಡುವಂತೆ ಆತನಿಗೇ ಸೂಚಿಸಬಹುದು. ಅದಕ್ಕೆ ಅನುಸಾರವಾಗಿ ತೆರಿಗೆ, ಗೌರವ, ಬುದ್ಧಿಮತ್ತೆ ನ್ಯಾಯ ಶಕ್ತಿ ಇವುಗಳಿಗೆ ತೆರಿಗೆ ಇಲ್ಲ. ವಿಧೇಯತೆ, ನಗೆ ಚಾಟಿಕೆ, ಜಂಬದ ನಡತೆಗಳಿಗೆ ತೆರಿಗೆ ಉಂಟು. ಹೆಚ್ಚಿನ ಸಂಖ್ಯೆಯಲ್ಲಿ ಹೆಂಗಸರು ಇಷ್ಟಪಡುವ ಗಂಡಸಿಗೆ ತೆರಿಗೆಯೂ ಹೆಚ್ಚು.

ಹೆಂಗಸರೂ ತಮ್ಮ ಗುಣಾವಗುಣಗಳ ಬಗ್ಗೆ ಹೇಳಿಕೆ ಕೊಡಬೇಕು. ಒಳ್ಳೆಯ ಸ್ವಭಾವ, ಪಾತಿವ್ರತ್ಯಕ್ಕೆ ತೆರಿಗೆ ಇಲ್ಲ. ಹೆಚ್ಚು ಸುಂದರಿಗೆ ಹೆಚ್ಚು ತೆರಿಗೆ; ಹಾಗೆಯೇ ಚೆನ್ನಾಗಿ ಅಲಂಕರಿಸಿಕೊಳ್ಳುವವರಿಗೂ ತೆರಿಗೆ ಹೆಚ್ಚು.

ರಾಜನ ವಿರುದ್ಧ ಪಿತೂರಿ ನಡೆಸುವವರನ್ನು ಕಂಡು ಹಿಡಿಯಲು ಒಂದು ಹೊಸ ಯೋಜನೆ ತಯಾರಾಗಿತ್ತು. ರಾಜನ ನಿಕಟವರ್ತಿಗಳೆಲ್ಲರ ಊಟ, ಆಹಾರ ಪದ್ಧತಿ ಯಾವ ಪಕ್ಕಕ್ಕೆ ತಿರುಗಿ ಮಲಗುತ್ತಾರೆ, ದೇಹವನ್ನು ಚೊಕ್ಕಟಮಾಡಲು ಯಾವ ಕೈ ಉಪಯೋಗಿಸುತ್ತಾರೆ, ಅವರ ಮಲದ ವಾಸನೆ, ಬಣ್ಣ, ಯಾವ ಪ್ರಮಾಣಕ್ಕೆ ಆಹಾರ ಜೀರ್ಣವಾಗಿದೆ, ಈ ಎಲ್ಲ ವಿವರಗಳನ್ನೂ ಗುಟ್ಟಾಗಿ ಗಮನಿಸಲಾಗುತ್ತಿತ್ತು. (ಇದಕ್ಕೆ ಕಾರಣವೆಂದರೆ ಮಲ ವಿಸರ್ಜನೆ ಮಾಡುವಾಗ ಯಾವುದೇ ಮನುಷ್ಯ ತುಂಬಾ ವಿವೇಕದಿಂದ, ನಿಧಾನವಾಗಿ ಆಲೋಚಿಸುತ್ತಾನೆಂಬುದು.) ರಾಜನಿಗೆ ಕೆಡುಕು ಮಾಡುವ ಉದ್ದೇಶ ಇದ್ದರೆ ಮಲ

ತುಂಬಾ ಹಸಿರಾಗಿರುತ್ತದಂತೆ!

ಈ ಎಲ್ಲ ವಿವರಗಳನ್ನೂ ಒಂದು ಗ್ರಂಥ ರೂಪದಲ್ಲಿ ಬರೆದಿಡುತ್ತಿದ್ದ ಪ್ರೊಫೆಸರ್‌ನನ್ನು ನಾನು ಶ್ಲಾಘಿಸಿದೆ. ಹಿಂದೆ ಟ್ರಿಬ್ನಿಯಾ ದೇಶದಲ್ಲಿ ನಾನು ನೋಡಿದ್ದ ಪದ್ಧತಿಯನ್ನು ವಿವರಿಸಿದೆ- ಅಲ್ಲಿ ಯಾವ ಅಧಿಕಾರಿಯ ಬಗ್ಗೆ ರಾಜದ್ರೋಹದ ಗುಮಾನಿ ಇದೆಯೋ ಆತನ ಎಲ್ಲಾ ಕಾಗದಗಳನ್ನೂ ವಶಪಡಿಸಿಕೊಂಡು ಎಲ್ಲ ಪದಗಳ ರಹಸ್ಯಾರ್ಥಗಳನ್ನು ಓದಿಕೊಳ್ಳಲಾಗುತ್ತಿತ್ತು. 'ಹಕ್ಕಿಗಳ ಗುಂಪು' ಎಂದರೆ ಸೆನೆಟ್ ಸಭೆ, 'ಕುಂಟನಾಯಿ' ಎಂದರೆ ಆಕ್ರಮಣಕಾರಿ, 'ಪೊರಕೆ' ಎಂದರೆ ಕ್ರಾಂತಿ, 'ಇಲಿಬೋನು' ಎಂದರೆ ಉದ್ಯೋಗ, 'ತಳವಿಲ್ಲದ ಹಳ್ಳ' ಎಂದರೆ ಖಜಾನೆ- ಹೀಗೆ ಅನೇಕ ಶಬ್ದಗಳ ಗೂಢಾರ್ಥ ಕೋಶವೇ ಇರುತ್ತಿತ್ತು. ಅಲ್ಲದೆ, ಆ ಕಾಗದಗಳಲ್ಲಿಯ ವಾಕ್ಯಗಳನ್ನೂ ಪದಗಳನ್ನೂ ಬೇರೆ ತರಹ ವಿಂಗಡಿಸಿ, ಬೇರೊಂದು ವಾಕ್ಯ ಮಾಡಿ ಅದರ ಅರ್ಥ ತಿಳಿಯವುದೂ ನಡೆಯುತ್ತಿತ್ತು.

ಇದೆಲ್ಲವನ್ನು ನಾನು ಪ್ರೊಫೆಸರನಿಗೆ ತಿಳಿಸಿದಾಗ, ಆತ ತುಂಬಾ ಸಂತುಷ್ಟನಾದನು. ಇದನ್ನು ತನ್ನ ಗ್ರಂಥದಲ್ಲಿ ಸೇರಿಸುವುದಾಗಿ ತಿಳಿಸಿ, ಕೃತಜ್ಞತೆಗಳಲ್ಲಿ ನನ್ನ ಹೆಸರನ್ನು ಸೇರಿಸುವುದಾಗಿ ಹೇಳಿದನು.

ಈ ಅಕೆಡಮಿಯ ಪೂರ್ಣದರ್ಶನ ಪಡೆದಾದ ಮೇಲೆ ನಾನು ಹೇಗಾದರೂ ಇಂಗ್ಲೆಂಡಿಗೆ ಮರಳುವ ಆಲೋಚನೆ ಮಾಡಿದೆ. ಉಗಾನಾಗ್ ಎಂಬ ದ್ವೀಪಕ್ಕೆ ಹೋಗಿ ಅಲ್ಲಿಂದ ಜಪಾನಿಗೆ ಹೋಗುವ ಯಾವುದಾದರೂ ಹಡಗನ್ನು ಹಿಡಿಯುವ ಆಲೋಚನೆ ಮಾಡಿದೆ. ನನ್ನ ಆತಿಥೇಯ ಮುನೋಡಿಯೂ ಅದೇ ಸಲಹೆ ನೀಡಿ ನನಗೆ ಕಾಣಿಕೆಗಳನ್ನಿತ್ತು ಬೀಳ್ಕೊಟ್ಟ. ನಾನು ಆ ದ್ವೀಪಕ್ಕೆ ಬಂದಾಗ, ಜಪಾನಿಗೆ ಹೋಗುವ ಹಡಗು ಹೊರಡಲು ಇನ್ನೂ ಒಂದು ತಿಂಗಳ ಕಾಲಾವಕಾಶ ಇದೆಯೆಂದು ತಿಳಿಯಿತು. ಅಲ್ಲಿಯೇ ಓಡಾಡುತ್ತಿದ್ದಾಗ ಸ್ಥಳೀಯನೊಬ್ಬನ ಪರಿಚಯವಾಯಿತು. ಈತ ಕಾಲಕಳೆಯಲು ಒಂದು ಸಲಹೆ ನೀಡಿದ- ಅದೆಂದರೆ ಸಮೀಪದ ಗ್ಲುಬ್ಡುಡ್ರಿಬ್ (ಮಾಂತ್ರಿಕರ ದ್ವೀಪ) ಎಂಬಲ್ಲಿಗೆ ಹೋಗಿಬರುವುದು. ನಾನು ಕುತೂಹಲದಿಂದ ಆತನೊಡನೆ ಹೊರಟೆ.



ದ್ವೀಪದ ಮಾಂತ್ರಿಕರಲ್ಲಿ ಯಾರೂ ದ್ವೀಪ ಬಿಟ್ಟು ಹೊರಗೆ ಬರುವಂತಿಲ್ಲ. ಅವರೊಳಗಿನ ಅತ್ಯಂತ ಹಿರಿಯ ವ್ಯಕ್ತಿಯೇ ರಾಜ. ಆತನದೊಂದು ಸುಭದ್ರಕೋಟೆ, ಅರಮನೆ, ಎಲ್ಲಾ ವ್ಯವಸ್ಥಿತವಾಗಿತ್ತು. ಬೇರೆ ದ್ವೀಪದಿಂದ ಬರುವ ಪ್ರವಾಸಿಗಳಿಗೆ ಕೋಟೆಯ ಹೊರಗೆ ಉಳಿದುಕೊಳ್ಳುವ ವ್ಯವಸ್ಥೆ ಇತ್ತು.

ರಾಜನ ಸೇವಕರೆಲ್ಲಾ ಗೋರಿಯಿಂದೆದ್ದು ಬಂದ ಭೂತಗಳು. ರಾಜನಿಗೆ ಯಾವ ಭೂತವನ್ನಾದರೂ ಕರೆಸುವ ಶಕ್ತಿ ಇತ್ತು. ಆದರೆ ಒಮ್ಮೆ ಬಂದು ಹೋದ ಭೂತ ಮೂರು ತಿಂಗಳಲ್ಲಿ ಮತ್ತೆ ಬರುವಂತಿಲ್ಲ. (ಆದರೆ ವಿಶೇಷ ಸಂದರ್ಭಗಳಲ್ಲಿ ಕರೆಸಬಹುದಂತೆ.)

ನನ್ನನ್ನು ಈ ದ್ವೀಪಕ್ಕೆ ಕರೆದೊಯ್ದ ಮಾರ್ಗದರ್ಶಿ, ನೇರವಾಗಿ ರಾಜನ ಬಳಿ ನಿಲ್ಲಿಸಿದ. ದಾರಿಯಲ್ಲಿ ನಿಂತಿದ್ದ ದ್ವಾರಪಾಲಕರ ವೇಷಗಳು ನನಗೆ ಗ್ರೀಕ್ ಯೋಧರನ್ನು ನೆನಪಿಗೆ ತರುತ್ತಿದ್ದವು. ರಾಜನಿಗೆ ಲಗಾಡೋದ ಭಾಷೆ ತಿಳಿಯುತ್ತಾದ್ದರಿಂದ ಸಂಭಾಷಿಸಲು ಏನೂ ಕಷ್ಟವಾಗಲಿಲ್ಲ. ನಾವು ಸಂಭಾಷಣೆ ಆರಂಭಿಸುವ ಮೊದಲು ರಾಜ ಬೆರಳಿನಲ್ಲಿ ಹೋಗಬೇಕೆಂದು ಸನ್ನೆ ಮಾಡಿದ ಕೂಡಲೇ, ಎಲ್ಲ ಸೇವಕರೂ ನಿಂತ ಜಾಗದಲ್ಲಿ ಅದೃಶ್ಯರಾಗಿ ಹೋದದ್ದು ಕಂಡು ನನಗೆ ಸ್ವಲ್ಪ ಭಯವಾಯಿತು. ನನ್ನ ಸಾಹಸಗಳ ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡ ಮೇಲೆ ರಾಜ ನಮ್ಮಿಬ್ಬರಿಗೆ ಊಟದ ಏರ್ಪಾಡು ಮಾಡಿದ. ನಮಗೆ ಆಹಾರ ಬಡಿಸಿದವರು. ಹೊಸ 'ಭೂತ' ಸೇವಕರು. ನಮ್ಮನ್ನು ಅಲ್ಲಿಯೇ ಉಳಿಯಬೇಕೆಂದು ಆತ ಆಗ್ರಹಪಡಿಸಿದರೂ ಹೀಗೆ ಭೂತಗಳ ನಡುವೆ ನಿದ್ರಿಸಲು ಹಿಂದೇಟು ಹೊಡೆದು ನಾವು ಕೋಟೆಯ ಹೊರಗೇ ಉಳಿದುಕೊಂಡೆವು. ನನ್ನ ಮಾರ್ಗದರ್ಶಿ ಎರಡು ದಿನಗಳ ನಂತರ ಹಿಂದಿರುಗಿದನು. ನಾನು ಇದ್ದ ಹತ್ತು ದಿನಗಳಲ್ಲಿ ದಿನವೂ ಭೂತಗಳನ್ನೆ ಕಾಣುತ್ತಿದ್ದೆನಾದ್ದರಿಂದ ಅಲ್ಲಿಂದ ಹೊರಡುವ ಹೊತ್ತಿಗೆ ನನಗೆ ಅವುಗಳ ಬಗ್ಗೆ ಭಯ ಮಾಯವಾಗಿ ಅವು ತುಂಬಾ ಸಹಜವಾಗಿಯೇ ಕಾಣುತ್ತಿದ್ದವು.

ಎರಡನೆಯ ದಿನ ರಾಜನು ನನಗಿಷ್ಟ ಬಂದ ಪುರಾತನ ವ್ಯಕ್ತಿಯೊಡನೆ ನಾನು ಮಾತನಾಡಬಹುದು ಎಂದು ಸೂಚಿಸಿದಾಗ ನನಗೆ ಮೊದಲು ನೆನಪಾದದ್ದು-ವೀರ ಅಲೆಕ್ಸಾಂಡರ್. ಎರಡೇ ಸೆಕೆಂಡಿನಲ್ಲಿ ಆತ ನನ್ನ ಮುಂದೆ ನಿಂತಿದ್ದ. ಆತ ಮಾತನಾಡುತ್ತಿದ್ದ ಗ್ರೀಕ್ ನನಗೆ ಸರಿಯಾಗಿ ತಿಳಿಯುತ್ತಿರಲಿಲ್ಲ. ತಾನು ಸತ್ತದ್ದು ಮಿತಿಮೀರಿ ಕುಡಿದು ಜ್ವರ ಬಂದದ್ದರಿಂದ, ಯಾರೂ ವಿಷ ಉಣಿಸಲಿಲ್ಲ ಎಂದಾತ ತಿಳಿಸಿದ. ಆಮೇಲೆ ನಾನು ಜೂಲಿಯಸ್ ಸೀಸರ್‌ನನ್ನು ಕರೆಸಿದೆ. ಆತನ ಭವ್ಯ ಸಭಾಂಗಣವನ್ನು (ಎಲ್ಲ ಸದಸ್ಯರನ್ನೊಳಗೊಂಡು) ನೋಡಿದೆ. ಸೀಸರ್ ಮತ್ತು ಬ್ರೂಟಸ್ ಇಬ್ಬರೂ ಮುನ್ನಡೆದು ನನ್ನ ಹತ್ತಿರವೇ ಬಂದರು. ಸೀಸರ್‌ನಿಗಿಂತ ಬ್ರೂಟಸ್‌ನ ವ್ಯಕ್ತಿತ್ವ ನನಗೆ ಹಿಡಿಸಿತು. ಆತನ ತಲೆಮಾರಿನಲ್ಲಿ ಜೂನಿಯಸ್, ಸಾಕ್ರೆಟಿಸ್, ಎಪಾಮಿನೊಂಡಸ್, (ಕಿರಿಯ) ಕ್ಯಾಟೋ, ಸರ್ ಥಾಮಸ್ ಮೂರ್ ಹೀಗೆ ಆರು ಪ್ರತಿಷ್ಠಿತ ವ್ಯಕ್ತಿಗಳಿದ್ದಾರಂತೆ. ಇಂತಹ ಏಳನೆಯ ವ್ಯಕ್ತಿ ಇನ್ನೂ ಹುಟ್ಟಿಲ್ಲವಂತೆ.

ಈಗ ಹೋಮರ್ ಮತ್ತು ಅರಿಸ್ಟಾಟಲ್‌ರನ್ನು ನೋಡುವ ಆಸೆ ಆಯಿತು ನನಗೆ. ಹೋಮರ್ ಎತ್ತರವಾಗಿದ್ದು, ನೆಟ್ಟಗೆ ನಡೆಯಬಲ್ಲವನಾಗಿದ್ದರೆ, ಅರಿಸ್ಟಾಟಲ್‌ನ ಶರೀರ ಕುಗ್ಗಿ, ಬೆತ್ತವನ್ನುಪಯೋಗಿಸಬೇಕಾದ ಸ್ಥಿತಿಯಲ್ಲಿದ್ದ. ಸುತ್ತಲಿದ್ದ ಇತರ ಭೂತಗಳು ಇವರ ಕಾಲದವರಲ್ಲ- ಅದಕ್ಕೆ ಕಾರಣವೂ ಇತ್ತು.

ಇವರಿಬ್ಬರಿಗೆ ಸಾಕಷ್ಟು ಗೌರವ ಕೊಡದಿದ್ದುದರಿಂದ ಇವರ ಇತರ ಸಮಕಾಲೀನರಿಗೆ ಇವರೊಟ್ಟಿಗೆ ಕಾಣಿಸಿಕೊಳ್ಳಲು ನಾಚಿಕೆಯಂತೆ. ನಾನು ಡೆಕಾರ್ಟೆ ಹಾಗೂ ಗಾಸೆಂಡಿ ಇವರನ್ನೂ ಆಗಲೇ ಕರೆಸಿ, ಅರಿಸ್ಟಾಟಲ್‌ನೊಂದಿಗೆ ಚರ್ಚಿಸಲು ಹೇಳಿದೆ. ಅರಿಸ್ಟಾಟಲ್ ಬಿಚ್ಚು ಮನಸ್ಸಿನಿಂದ ಅವರಿಬ್ಬರೊಡನೆ ಮಾತನಾಡಿ, ತಾನು ಊಹಿಸಿದ್ದ ಕೆಲವು ಅಂಶಗಳು ತಪ್ಪಾಗಿದ್ದುದನ್ನು ಒಪ್ಪಿಕೊಂಡನು. ಗುರುತ್ವಾಕರ್ಷಣೆ ಎಂಬುದು ಹೊಸ ಸಂಪ್ರದಾಯ ಎಂದು ಹೇಳಿ, ಹೀಗೆ ಗಣಿತದಿಂದ ಪ್ರಕೃತಿಯ ನಿಯಮಗಳನ್ನು ತೋರಿಸಿಕೊಡುವ ಹುಚ್ಚು ಸಂಪ್ರದಾಯ ಹೆಚ್ಚು ದಿನ ನಿಲ್ಲಲಾರದು ಎಂದು ಹೇಳಿದನು.

ಇದೇ ರೀತಿ ನಾನು ಅನೇಕ ರೋಮನ್ ಚಕ್ರವರ್ತಿಗಳನ್ನೇ ಅಲ್ಲದೆ ಅವರ ಅಡಿಗೆಯ ಭಟ್ಟರನ್ನು ನೋಡಿದೆ. ಆಮೇಲೆ ಇತ್ತೀಚಿನ ಕೆಲವು ವ್ಯಕ್ತಿಗಳನ್ನೂ ನೋಡಿದೆ. ಒಂದೆರಡು ರಾಜ ವಂಶಗಳ ಎಲ್ಲ ತಲೆಮಾರಿನವರನ್ನೂ ಒಟ್ಟಿಗೇ ನೋಡಬಯಸಿದಾಗ ರಾಜ ತೋರಿಸಿದ್ದು ನನಗೆ ಆಶ್ಚರ್ಯ ಉಂಟು ಮಾಡಿತ್ತು. ಏಕೆಂದರೆ ಒಂದು ರಾಜವಂಶದಲ್ಲಿ, ಇಬ್ಬರು ಪಿಟೀಲು ವಾದಕರು, ಮೂರು ಜನ (ಚುರುಕಾದ) ರಾಜ ಸಿಬ್ಬಂದಿ ವರ್ಗದವರು, ಒಬ್ಬ ಇಟಾಲಿಯನ್ ಧರ್ಮದರ್ಶಿ ಇದ್ದರೆ ಮತ್ತೊಂದು ರಾಜವಂಶದಲ್ಲಿ ಒಬ್ಬ ಕ್ಷೌರಿಕ, ಒಬ್ಬ (ಧರ್ಮದ) ಶಿಕ್ಷಕ, ಪೋಪ್‌ನನ್ನು ಆರಿಸುವ ಅಧಿಕಾರವಿದ್ದ ರಾಜಕುಮಾರನೊಬ್ಬ- ಇವರೆಲ್ಲಾ ಸೇರಿದ್ದರು. ಒಟ್ಟಿನಲ್ಲಿ ಯಾವುದೋ ರಾಜನ ಉದ್ದನೆಯ ಗಲ್ಲ ಯಾರಿಂದ ಬಂದಿತು, ಇನ್ನೊಬ್ಬ ರಾಜವಂಶದ ಮಕ್ಕಳು ಏಕೆ ಎರಡು ತಲೆ ಮಾರಿನವರೆಗೂ ಪೆದ್ದರಾಗಿದ್ದರು, ಮತ್ತೊಬ್ಬನ ಮಕ್ಕಳು ಏಕೆ ಮೋಸಗಾರರಾಗಿದ್ದರು ಎಂದು ತಿಳಿಯಲು ಸಾಧ್ಯವಾಯಿತು.

ಇತಿಹಾಸದ ಬಗ್ಗೆ ಅನೇಕ ಅನುಮಾನಗಳಿದ್ದವು. ಚರಿತ್ರಕಾರರು ಇತಿಹಾಸವನ್ನೆಲ್ಲಾ ತಮಿಷ್ಟ ಬಂದ ಹಾಗೆ ಸೃಷ್ಟಿಸಿರಬೇಕು ಎಂದೇ ನನ್ನ ಅನಿಸಿಕೆ. ಏಕೆಂದರೆ ವಿಷಕುಡಿಸಿ ರಾಜನನ್ನು ಕೊಂದದ್ದು, ಗುಟ್ಟಾಗಿ ನಡೆದ ಮಂತ್ರಿ



ಗಳ ದೂರಾಲೋಚನೆ ಇವನ್ನೆಲ್ಲಾ ಕಲ್ಪಿಸಲು ಮಾತ್ರ ಸಾಧ್ಯ. ಅನೇಕ ರಾಜರು ಹಾಗೂ ಮಂತ್ರಿಗಳ ಭೂತಗಳನ್ನು ಕರೆಸಿ ಮಾತನಾಡಿ ನನ್ನ ಈ ಅನುಮಾನವನ್ನು ದೃಢಪಡಿಸಿ ಕೊಂಡೆ. ಹೀಗೆಯೇ ಅನೇಕ ಗೌರವಾನ್ವಿತರು ಅಡ್ಡ ದಾರಿ ಹಿಡಿದು ರಾಜಮರ್ಯಾದೆಯನ್ನು ಸಂಪಾದಿಸಿದ್ದನ್ನೂ ತಿಳಿದುಕೊಂಡೆ. ಹಾಗಾದರೆ ನಿಜವಾಗಿ ರಾಜನಿಗೆ ಪ್ರಾಮಾಣಿಕವಾಗಿ ನಡೆದುಕೊಂಡವರನ್ನು ನಾನು ನೋಡಬೇಕೆಂದಾಗ ರಾಜನು ಕೆಲವು ಭೂತಗಳನ್ನು ಕರೆಸಿದನು. ಅವೆಲ್ಲಾ ತಾವು ದಾರಿದ್ರ್ಯ ಹಾಗೂ ವ್ಯಸನದಿಂದ ಸತ್ತೆವೆಂದು ಹೇಳಿಕೊಂಡವು. ರಾಣಿಗೆ ಪ್ರಿಯನಾಗಿದ್ದ ತನ್ನ ಮಗನನ್ನು ಹಡಗಿನಲ್ಲಿ ಕಳಿಸಿ ಹೇಗೆ ಕೊಲ್ಲಿಸಿದರೆಂದು ಒಬ್ಬ ವ್ಯಕ್ತಿ (ಯ ಭೂತ) ತಿಳಿಸಿ, ತನ್ನ ಆ ಮಗನ(ಭೂತ)ನ್ನು ಕರೆಸಿದ. ಕುತೂಹಲದಿಂದ ನಾನು ಹಾಗೆ ಆದೇಶ ಕೊಟ್ಟ ಅಧಿಕಾರಿಯ(ಭೂತ)ನ್ನೂ ಕರೆಸಿದಾಗ, ಆತ ಆ ಘಟನೆ ಸತ್ಯವೆಂದು ಒಪ್ಪಿಕೊಂಡ.

ಈ ಗ್ಲುಬ್ಡುಡ್ರಿಬ್ ದ್ವೀಪದಲ್ಲಿ ಹೀಗೆ ಹತ್ತು ದಿನಗಳನ್ನು ಕಳೆದು ರಾಜನಿಂದ ಬೀಳ್ಕೊಂಡೆ. ಇನ್ನು ಹದಿನೈದು ದಿನಗಳಲ್ಲಿ ಜಪಾನಿಗೆ ಹಡಗೊಂದು ತೆರಳಲಿದೆ ಎಂದು ತಿಳಿಯಿತು. ಎಲ್ಲರಿಂದ ಬೀಳ್ಕೊಂಡು ಹೊರಟ ಒಂದು ತಿಂಗಳಲ್ಲಿ ದೊಡ್ಡ ಬಿರುಗಾಳಿ ಎದ್ದಿತು. ಆಗ ನಾವು ಕ್ಲುಮೆಗಿಗ್ ಎಂಬ ನದಿಯೊಳಗೆ ಪ್ರವೇಶಿಸಿ, ಲುಗ್‌ನಾಗ್ ಎಂಬ ಬಂದರು ಸೇರಿದೆವು. ಆ ಊರಿನ ಜಲ ರಕ್ಷಕರು ನಮ್ಮನ್ನು ಸುರಕ್ಷಿತವಾಗಿ ಇಳಿಸಿಕೊಂಡರು. ಊರೊಳಕ್ಕೆ ನಮ್ಮನ್ನು ಕಳಿಸುವ ಮುನ್ನ ಚೆನ್ನಾಗಿ ತಪಾಸಣೆ ಮಾಡಿದರು. ನನ್ನನ್ನಂತೂ ಆಮೂಲಾಗ್ರವಾಗಿ ವಿಚಾರಿಸಿಕೊಂಡರು. ನಾನೊಬ್ಬ ಡಚ್ ವೈದ್ಯನೆಂದು ಹೇಳಿಕೊಂಡೆ. ನನಗೆ ವಸತಿ ಏರ್ಪಡಿಸಿ ಒಬ್ಬ ಭಾಷಾಂತರಕಾರನನ್ನೂ ಒದಗಿಸಿಕೊಟ್ಟರು.

ಯಾರೂ ಕೇಳಿರದಂತಹ ದೂರ ದೇಶದಿಂದ ನಾನು ಬಂದಿದ್ದೆನಾದ್ದರಿಂದ ಬಹಳ ಜನ ನನ್ನನ್ನು ಮಾತನಾಡಿಸಲು ಬಂದಿದ್ದರು. ಭಾಷಾಂತರಕಾರನ ಅವಶ್ಯಕತೆ ಇದ್ದೇ ಇತ್ತು. ನನ್ನನ್ನು ಊರೊಳಗೆ ಓಡಾಡಲು ಬಿಡುವಂತೆ ರಾಜನಿಗೊಂದು ನಿವೇದನಾ ಪತ್ರವನ್ನು ಬರೆದು ಕಳಿಸಿದೆ. ರಾಜನ ಉತ್ತರ ಬರಲು ಕನಿಷ್ಠ ಹದಿನೈದು ದಿನ ಬೇಕಾಗುವುದೆಂದು ತಿಳಿದು, ಅದಕ್ಕಾಗಿ ಕಾಯುತ್ತಾ ಕುಳಿತೆ. ಈ ನಡುವೆ ಅನೇಕರು ಬಂದು ನನ್ನನ್ನು ಮಾತನಾಡಿಸಿಹೋದರು. ರಾಜನ ಪತ್ರವೇನೋ ಬಂದಿತು. ಆದರೆ ಅದರಲ್ಲಿ ನಾನು ರಾಜನನ್ನು ಭೇಟಿ ಮಾಡಬೇಕೆಂದು ಬರೆದಿತ್ತು. ನಾನು ಮತ್ತು ನನ್ನ ಸಹಾಯಕ ಇಬ್ಬರೂ ಕುದುರೆಯ ಮೇಲೆ ಪಯಣಿಸಿದೆವು. ನಮ್ಮ ಆಗಮನವನ್ನು ಹೇಳಿ ಕಳುಹಿಸಿ, "ರಾಜನ ಎದುರಿಗೆ ಧೂಳನ್ನು ನೆಕ್ಕಲು" ಅನುಮತಿ ಕೇಳಿದೆವು. ರಾಜನ ಬಳಿ ತಲುಪಿದಾಗ ನನಗೆ ಈ ವಾಕ್ಯದ ಸತ್ಯಾಂಶ ಅರಿವಾಯಿತು. ನಾನು ರಾಜನ ಎದುರಿಗೆ ಅಂಬೆಗಾಲಿಟ್ಟು ನಡೆದು ಅವನ ಪಾದ ಪೀಠದ ಧೂಳನ್ನು ನೆಕ್ಕಲೇಬೇಕಾಗಿತ್ತು. ಅದು ಅಲ್ಲಿಯ ರಾಜಮರ್ಯಾದೆ. (ನನಗೋಸ್ಕರ ಪೀಠದ ಮೇಲಿನ ಧೂಳು ಒರೆಸಿದ್ದರಂತೆ. ಶತ್ರುಗಳಿಗಾದರೆ ಬೇಕೆಂದೇ ಹೆಚ್ಚಿನ ಧೂಳು ಉದುರಿಸುತ್ತಾರಂತೆ. ರಾಜದ್ರೋಹಿಗಳಿಗಾದರೆ ವಿಷದ ಧೂಳು ಉದುರಿಸಿ, ಇಪ್ಪತ್ನಾಲ್ಕು ಗಂಟೆಯೊಳಗೆ ಅವನು ಪರಲೋಕವಾಸಿಯಾಗುವಂತೆ ಮಾಡುತ್ತಾರಂತೆ.) ರಾಜನ ಮುಂದೆ, ನನಗೆ ನನ್ನ ಸಹಾಯಕರು ಹೇಳಿಕೊಟ್ಟಿದ್ದ ವಾಕ್ಯವೊಂದನ್ನು ಗಿಣಿಪಾಠ ಒಪ್ಪಿಸಿದೆ. ಅದರ ಅರ್ಥ "ಸೂರ್ಯ ಮತ್ತು ಹನ್ನೊಂದುವರೆ ಚಂದ್ರರಿಗಿಂತ ಶಾಶ್ವತವಾಗಿ ಚಕ್ರವರ್ತಿಗಳು

ಬಾಳಲಿ" ಎಂದು. ಆಮೇಲೆ ಆತ ನನಗೆ ಹೇಳಿಕೊಟ್ಟಿದ್ದ ಇನ್ನೊಂದು ವಾಕ್ಯವನ್ನು ಹೇಳಿದೆ. ಇದರ ಅರ್ಥ "ನನ್ನ ನಾಲಗೆಯು ನನ್ನ ಸಹಾಯಕನ ಬಾಯಲ್ಲಿದೆ" ಎಂದು (ಭಾಷಾಂತರಕಾರರನ್ನು ಪರಿಚಯಿಸುವ ರೀತಿ). ಮುಂದೆ ಸಂಭಾಷಣೆ ನಡೆಯಿತು. ರಾಜನಿಗೆ ನನ್ನ ಬಗ್ಗೆ ವಿಶ್ವಾಸ ಮೂಡಿ (ಹಾದಿಯ ಖರ್ಚಿಗೆಂದು) ಕೆಲವು ಚಿನ್ನದ ನಾಣ್ಯಗಳನ್ನು ಕೊಟ್ಟನು. ಈ ರಾಜನ ಮುಖ ನೋಡಲು ತುಂಬಾ ಅಸಹ್ಯವಾಗಿತ್ತು. ಉಳಿದವರ ಬಾಯಿಗಳೂ ಅಷ್ಟೇ. ಏಕೆಂದರೆ ಅಲ್ಲಿ ಉಗುಳುವುದು ಮತ್ತು ಬಾಯಿ ಒರೆಸಿಕೊಳ್ಳುವುದು ನಿಷಿದ್ಧ. ಈ ಆಜ್ಞೆಯನ್ನು ಪಾಲಿಸುವುದು ನನಗೆ ತುಂಬಾ ಕಷ್ಟವಾಯಿತು.

ಈ ಲುಗ್‌ನಾಗ್ ದ್ವೀಪದ ಜನ ಬಹಳ ವಿಧೇಯರಾಗಿ ಕಂಡರು. ಎಲ್ಲ ಪೂರ್ವ ರಾಷ್ಟ್ರಗಳ ಜನರಿಗಿರುವಂತಹ ಹೆಮ್ಮೆ ಇವರ ಮುಖದಲ್ಲೂ ಕಾಣುತ್ತದೆ. ಆದರೂ ಹೊರ ರಾಷ್ಟ್ರಗಳವರೊಡನೆ ಸಂತೋಷದಿಂದ ಬೆರೆಯುತ್ತಾರೆ. ಸಂಭಾಷಣೆಗೆ ನನ್ನ ಸಹಾಯಕ ಯಾವಾಗಲೂ ಇರುತ್ತಿದ್ದುದರಿಂದ ಜನಜೀವನ ತಿಳಿಯಲು ಸುಲಭವಾಯಿತು.

ಒಮ್ಮೆ ಒಬ್ಬಾತ "ಚಿರಂಜೀವಿ"ಗಳನ್ನು ನೋಡಿರುವಿರಾ? ಎಂದು ಕೇಳಿದ. ಹಾಗೆಂದರೇನು ನನಗೆ ತಿಳಿಯಲಿಲ್ಲ. ಆಗ ಆತ ಆ ಪದದ ವಿವರಣೆ ನೀಡಿದ. ಈ ವ್ಯಕ್ತಿಗಳು ಸಾವನ್ನು ಮೆಟ್ಟಿ ನಿಂತವರು. ಅವರಿಗೆ ಸಾವಿಲ್ಲ! ಅದ್ಭುತ ಎನಿಸಿತು ನನಗೆ. ಅವರನ್ನು ಗುರುತಿಸುವುದು ಹೇಗೆ? ಅದಕ್ಕೂ ಆತ ವಿವರಣೆ ಕೊಟ್ಟ. ಹುಟ್ಟಿದ ಮಗುವಿನ ಎಡ ಹುಬ್ಬಿನ ಮೇಲ್ಭಾಗದಲ್ಲಿ ಕೆಂಪು ವೃತ್ತ ಇದ್ದರೆ ಅದು "ಚಿರಂಜೀವತ್ವ"ದ ಗುರುತು. ಇದು ಬರಬರುತ್ತಾ ದೊಡ್ಡದಾಗಿ ಹತ್ತು-ಹನ್ನೆರಡು ವಯಸ್ಸಿನ ಹೊತ್ತಿಗೆ ಹಸಿರು ಬಣ್ಣಕ್ಕೆ ತಿರುಗು




"ನಮ್ಮಲ್ಲಿನ 'ಹೇನು ನಿವಾರಕ ಔಷಧಿ'ಯನ್ನು ಬಳಸಿದರೆ ಸ್ವಲ್ಪ ದಿನದಲ್ಲಿ ಅದರ ಪತ್ತೆಯೇ ಇರೋದಿಲ್ಲ."

ತ್ತದೆ. ಇಪ್ಪತ್ತೈದನೆಯ ವಯಸ್ಸಿಗೆ ಕಡು ನೀಲಿ ಬಣ್ಣದ್ದಾಗಿ ನಲವತ್ತರ ಹೊತ್ತಿಗೆ ಕಪ್ಪಾಗಿಬಿಡುತ್ತದೆಯಂತೆ. ಅಷ್ಟು ಹೊತ್ತಿಗೆ ಅದು ಷಿಲ್ಲಿಂಗ್ ನಾಣ್ಯದಷ್ಟು ದೊಡ್ಡದಾಗಿರುತ್ತದೆ. ಈ ಜೀವಿಗಳು ಅಪೂರ್ವ ಎಂದರೂ ಈಗ ಸುಮಾರು ೧೧೦೦ ಜನ ಇದ್ದಾರಂತೆ.

ಈ ವಿಷಯವನ್ನು ಕೇಳಿದ ಕೂಡಲೇ ನನಗೆ ವಿಚಿತ್ರವಾದ ಭಾವನೆಗಳು ಬರತೊಡಗಿದವು. ಮೃತ್ಯುವಿನ ಭಯವೇ ಇಲ್ಲದ ಬದುಕು ಎಷ್ಟು ಸಂತೋಷಮಯವಾಗಿರಬೇಕು ಎನ್ನಿಸತೊಡಗಿತು. ರಾಜನಿಗೆ ಈ ವಿಷಯವನ್ನು ಸೂಚಿಸಿ, ಇಂಥ ವ್ಯಕ್ತಿಗಳನ್ನು ನೋಡಬೇಕು ಎಂದು ಕೇಳಿದಾಗ, ರಾಜ ಈ ಕೋರಿಕೆಯನ್ನು ಮಂತ್ರಿಗೆ ತಿಳಿಸಿದನು. ನನ್ನ ಸಹಾಯಕ ನನ್ನ ಕೋರಿಕೆಯನ್ನು, ಸಂತೋಷದ ಕಾರಣವನ್ನೂ ಅನುವಾದಿಸಿ ತಿಳಿಸಿದಾಗ ಮಂತ್ರಿಯು ನಸುನಕ್ಕು "ನೀವೇ ಇಂತಹ ಚಿರಂಜೀವಿಯಾಗಿದ್ದರೆ ಏನೇನು ಸಾಧಿಸುತ್ತಿದ್ದಿರಿ?" ಎಂದು ಕೇಳಿದ. ಆಗ ನಾನು ದೊಡ್ಡ ಭಾಷಣವನ್ನೇ ಮಾಡಿದೆ.

ಇನ್ನೂರು ವರ್ಷಗಳಿಗಿಂತ ಹೆಚ್ಚಿನ ಕಾಲ ದುಡಿದು, ಪ್ರಪಂಚದಲ್ಲಿ ಎಲ್ಲರಿಗಿಂತ ಶ್ರೀಮಂತನಾಗಬಹುದು. ಸಣ್ಣ ವಯಸ್ಸಿನಿಂದಲೇ ಜ್ಞಾನಾರ್ಜನೆ ಆರಂಭಿಸಿ; ಎಲ್ಲ ವಿಷಯಗಳಲ್ಲೂ ಪರಿಣಿತಿ ಸಾಧಿಸಬಹುದು. ದಿನಚರಿಯನ್ನು ವಿಸ್ತಾರವಾಗಿ ಬರೆದು ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆಯನ್ನು ಗುರುತಿಸಬಹುದು. ಪ್ರತಿಯೊಬ್ಬ ರಾಜ ಹಾಗೂ ಮಂತ್ರಿಯ ಆಡಳಿತ ವೈಖರಿಯನ್ನು ವಿವರವಾಗಿ ಬರೆದಿಟ್ಟು ನಿಜವಾದ ಇತಿಹಾಸವನ್ನು ಸೃಷ್ಟಿಸುತ್ತಿದ್ದೆ. ಒಟ್ಟಿನಲ್ಲಿ "ಒಳ್ಳೆಯ" ಜ್ಞಾನಭಾಂಡಾರವಾಗುತ್ತಿದ್ದೆ. ಆದರೆ ಚಿರಂಜೀವಿಯಾದ ಮಾತ್ರಕ್ಕೆ ನಾನು ಮತ್ತೆ ಮತ್ತೆ ಮದುವೆ ಆಗುತ್ತಿರಲಿಲ್ಲ. ಯುವಕರಿಗೆ ಸ್ಫೂರ್ತಿ ನೀಡಿ, ಹೊಸ ಜೀವನಕ್ಕೆ ನಾಂದಿ ಮಾಡಿಕೊಡುತ್ತಿದ್ದೆ. ದೇಶದ ಹಿತಕ್ಕೆ ನನ್ನ ಎಲ್ಲ ಅನುಭವವನ್ನೂ ಮೀಸಲಾಗಿಡುತ್ತಿದ್ದೆ. ಭೌಗೋಳಿಕ ವಿವರಗಳು ಉದಾಹರಣೆಗೆ ನದಿಗಳ ಪಾತ್ರಗಳ ಬದಲಾವಣೆ, ಹೊಸ ಭೂಖಂಡಗಳ ಆವಿಷ್ಕಾರ, ಪುರಾತನ ನಾಗರಿಕತೆಯನ್ನು ಹುಡುಕುವಂತಹ ಕೆಲಸಗಳಿಗೆ ಯಾವಾಗಲೂ ಗಮನ ಕೊಡುತ್ತಿದ್ದೆ. ಖಗೋಳ ವಿಜ್ಞಾನಕ್ಕಂತೂ ತುಂಬಾ ಸಹಾಯ ಮಾಡುತ್ತಿದ್ದೆ. ಯಾವುದೇ ಧೂಮಕೇತು ಬಂದಾಗ, ಇದು ಹಿಂದೆ ಯಾವಾಗ ಬಂದಿತ್ತು ಎಂದು ನನ್ನ ದಿನಚರಿಯಿಂದ ಹೇಳಿಬಿಡುತ್ತಿದ್ದೆ.

ಹೀಗೆ ನಾನು ಕೊಟ್ಟ ದೊಡ್ಡ ಭಾಷಣವನ್ನು ನನ್ನ ಸಹಾಯಕ ಅನುವಾದಿಸಿ ಹೇಳಿ ಮುಗಿಸಿದಾಗ, ರಾಜಸಭೆಯಲ್ಲಿ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಕೆಲವರು ಮುಸಿಮುಸಿ ನಕ್ಕರು ಎಂದು ನನಗೆನಿಸಿತು. ಆಗ ಆ ಮಂತ್ರಿ ಚಿರಂಜೀವಿಗಳ ವಿಷಯವನ್ನು ವಿವರವಾಗಿ ತಿಳಿಸಿ, ಇಂಥವರು ಈ ದ್ವೀಪದಲ್ಲಿ ಮಾತ್ರ ಇರುವುದು ಒಂದು ಸಮಸ್ಯೆಯಾಗಿದೆ ಎಂದು ಹೇಳಿದ. ಉಳಿದೆಲ್ಲ ಕಡೆಗಳಲ್ಲಿ ಮನುಷ್ಯನ ಒಂದು ಕಾಲು ಯಾವಾಗಲೂ ಗೋರಿಯಲ್ಲೇ ಇರುವುದೆಂಬ ಸತ್ಯ ಅತ್ಯಂತ ಸಹೃದಯವಾಗಿದೆ ಎಂದಾತ ವಿವರಿಸಿದಾಗ ನನ್ನ ಕಲ್ಪನೆಯ ಭಯಂಕರ ತಪ್ಪುಗಳು ನನಗೆ ಗೋಚರಿಸಿದವು. ಸುಮಾರು ಮೂವತ್ತು ವಯಸ್ಸಿನವರೆಗೆ ಈ ಚಿರಂಜೀವಿಗಳು ಸಾಮಾನ್ಯರಂತೆಯೇ ಇರುತ್ತಾರೆ. ಬರಬರುತ್ತಾ ಒಂದು ಬಗೆಯ ನಿರಾಶೆ ಹಾಗೂ ವ್ಯಸನ ಅವರನ್ನು ಕಾಡತೊಡಗುತ್ತದೆ ಎಂಭತ್ತನೆಯ ವಯಸ್ಸನ್ನು ತಲುಪುವಷ್ಟರಲ್ಲಿ ತಮ್ಮ ಜೊತೆಯವರನ್ನೆಲ್ಲಾ ಕಳೆದುಕೊಂಡು ತಾವು ಏಕಾಕಿ ಎಂದು ನೊಂದುಕೊಳ್ಳುತ್ತಾರೆ. ಈ ನೋವಿ

ನಿಂದ ಪಾರಾಗಲು ವಾಚಾಳಿಗಳಾಗುತ್ತಾರೆ. ಅಸೂಯೆ ಅವರ ಸಂಭಾಷಣೆಗಳಲ್ಲಿ ಎದ್ದು ಕಾಣುತ್ತದೆ. ಮರೆವು ಹೆಚ್ಚಾಗುತ್ತದೆ. ಯಾರಾದರೂ ಸತ್ತ ಸುದ್ದಿ ಕೇಳಿದ ಕೂಡಲೇ (ಅಸೂಯೆಯಿಂದ) ಹುಚ್ಚರಂತೆ ಕಿರಿಚಾಡುತ್ತಾರೆ. ತಮ್ಮ ಹರೆಯದಲ್ಲಿ ಕಲಿತ ವಿದ್ಯಾಭ್ಯಾಸ, ದೈನಂದಿನ ನಡೆವಳಿಕೆಗಳನ್ನೂ ಮರೆತು ಕುಟುಂಬಕ್ಕೆ ಒಂದು ಹೊರೆಯಾಗಿಬಿಡುತ್ತಾರೆ. ಆದ ಕಾರಣ ಸರಕಾರ ಒಂದು ವಿಶೇಷ ಕಾನೂನು ಮಾಡಿದೆ- ಇದರ ಪ್ರಕಾರ ಅವರಿಗೆ ಎಂಭತ್ತು ವಯಸ್ಸಾದೊಡನೆಯೇ, (ಕಾನೂನು ರೀತ್ಯಾ ಅವರು ಸತ್ತು ಹೋದರೆಂದು ಪರಿಗಣಿಸಿ) ಅವರ ಸ್ಥಿರ, ಚರ ಆಸ್ತಿಗಳನ್ನು ಕುಟುಂಬಕ್ಕೆ ವಹಿಸಬೇಕಾಗುತ್ತದೆ. ಅವರ ಜೀವನೋಪಾಯಕ್ಕೆ ಬೇಕಾದಷ್ಟು ಸಂಪತ್ತನ್ನು ಮಾತ್ರ ಅವರಿಗೆ ಬಿಟ್ಟು ಕೊಡಲಾಗುತ್ತದೆ. ಇದು ಸಾಲದೇ ಬಂದಾಗ ಕೆಲವು ಸಹಾನುಭೂತಿಯ ಜನರು, ಸಂಸ್ಥೆಗಳು ಹಾಗೂ ಸರಕಾರ ಕೊಡುವ ದಾನದಿಂದ ಅವರು ತಿಂದುಣ್ಣಬೇಕಾಗುತ್ತದೆ. ಯಾವುದೇ ಉದ್ಯೋಗ ಮಾಡಲು ಅವರು ಅಸಮರ್ಥರು; ಜಮೀನನ್ನು ಖರೀದಿಸುವ ಹಕ್ಕು ಅವರಿಗಿಲ್ಲ. ನೂರು ವಯಸ್ಸಾಗುವ ಹೊತ್ತಿಗೆ ಅವರ ಹಲ್ಲುಗಳು ಬಿದ್ದು (ಗಂಡಸರಾದರೆ ತಲೆಯೂ ಬೋಳಾಗಿ) ಬಾಯಿಯ ರುಚಿ ಕೆಟ್ಟು, ಸಿಕ್ಕದ್ದನ್ನೇ ತಿಂದು ಕುಡಿಯುವ ಪ್ರಾಣಿಗಳಂತಿರುತ್ತಾರೆ. ಖಾಯಿಲೆಯೇನಾದರೂ ಬಂದಿತೆಂದರೆ ವೈದ್ಯರಿಗೆ ಆಪತ್ತು- ಅವರು ಸಾಯುವುದಿಲ್ಲ; ಅದು ವಾಸಿಯಾಗುವುದಿಲ್ಲ.

ಇನ್ನೊಂದು ವಿಚಿತ್ರವೆಂದರೆ ಈ ಚಿರಂಜೀವಿಗಳು ಬೇರೆ ಬೇರೆ ಅವಧಿಯಲ್ಲಿ ತಮ್ಮ ಹರೆಯವನ್ನು ಕಳೆದಿರುವುದರಿಂದ, ಒಬ್ಬರನ್ನೊಬ್ಬರು ಸರಿಯಾಗಿ ಅರ್ಥಮಾಡಿಕೊಳ್ಳಲಾರರು. ಭಾಷೆಯ ಬೆಳವಣಿಗೆಯ ವಿವಿಧ ಹಂತಗಳನ್ನು ಅವರ ಸಂವಾದದಲ್ಲಿ ಗುರುತಿಸಬಹುದು. ಹೀಗಾಗಿ ತಮ್ಮ ನಾಡಿನಲ್ಲೇ ಅವರು ಪರಕೀಯರಾಗಿಬಿಡುತ್ತಾರೆ.

ಈ ವಿವರಣೆ ಕೇಳಿ ನನಗೆ ದಿಗ್ಭ್ರಮೆಯಾಯಿತು. ಈ "ಚಿರಂಜೀವತ್ವ" ಒಂದು ಶಾಪವೇ ಸರಿ ಎಂದು ಅನ್ನಿಸತೊಡಗಿತು. ನಮ್ಮ ಕೋರಿಕೆಯಂತೆ ಐದಾರು ಜನ ಚಿರಂಜೀವರನ್ನು ಕರೆಸಿದರು. ಅವರಲ್ಲಿ ಚಿಕ್ಕವನಿಗೆ ಇನ್ನೂರು ವರ್ಷ ವಯಸ್ಸಿದ್ದಿರಬಹುದು. ಯಾರಿಗೂ ಸಂವಾದ ನಡೆಸಲು ಇಷ್ಟವೇ ಇರಲಿಲ್ಲ. ತನಗೆ "ಏನನ್ನಾದರೂ" ಕೊಡುವಂತೆ ಒಬ್ಬ ಕೇಳಿದ. ಭಿಕ್ಷಾಟನೆ ಅಲ್ಲಿ ಕಾನೂನುಬಾಹಿರ. ಹೀಗಾಗಿ ಅವರು ಏನಾದರೂ ಸಂಗ್ರಹ ಯೋಗ್ಯ ವಸ್ತುಗಳನ್ನು ಅಪೇಕ್ಷಿಸುತ್ತಾರೆ. ಈ ಜನರ ವಯಸ್ಸನ್ನು ತಿಳಿಯಲು ಅವರಿಗೆ ನೆನಪಿರುವ ರಾಜರ



**ಪರಿ-ಸರ ವಾದ**

ಈಗೀಗ ಹೆಚ್ಚುತ್ತಿದ್ದಾರೆ ಪರಿ
ಸರವಾದಿಗಳು:
ಮಹಿಳೆಯರು ವಾಯುವಿಹಾರ ಹೋಗುವಾಗ
ಕತ್ತಿನ ಸರ ಎಗರಿಸುವವರು!

-ಸಿ.ಪಿ.ಕೆ.

ಹೆಸರುಗಳನ್ನು ಕೇಳಿ, ಇತಿಹಾಸದ ಪುಟಗಳನ್ನು ತಿರುಗಿಸಬೇಕು. ಇಂತಹ ಕೆಲವು ಮಹಿಳೆಯರನ್ನೂ ನಾನು ನೋಡಿದೆ- ಅವರ ಮುಖಗಳಲ್ಲಿ ನೋವು, ದುಗುಡ ಎದ್ದು ಕಾಣುತ್ತಿತ್ತು.

ನಿಮಗೆಲ್ಲ ಈಗಾಗಲೇ ನನ್ನ ಮನಸ್ಸಿನ ಭಾವನೆಗಳು ತಿಳಿಯುತ್ತಿರಬೇಕು. ಚಿರಂಜೀವತ್ವ ಹಾಗೂ ಚಿರಯೌವನಗಳಿಗಿರುವ ಅಗಾಧ ವ್ಯತ್ಯಾಸ ನನ್ನ ಕಲ್ಪನೆಯಲ್ಲಿ ಬಿಟ್ಟು ಹೋಗಿತ್ತು. ಈ ಜೀವಿಗಳ ಗತಿಯೇನು ಎಂದು ಬಹಳ ಪರಿತಾಪವಾಯಿತು. ರಾಜನು ನನ್ನೊಡನೆ ಇಂತಹ ಒಂದಿಬ್ಬರನ್ನು ನಮ್ಮ ದೇಶಕ್ಕೆ ಕಳಿಸಿಕೊಡುವುದರಲ್ಲಿದ್ದನು. ಇದರಿಂದ ನಮ್ಮ ದೇಶದ ಜನ ಮೃತ್ಯುವಿಗೆ ಹೆದರದೆ ಆದರದಿಂದ ಬರಮಾಡಿಕೊಳ್ಳಲಿ ಎಂದು. ಆದರೆ ಅವರನ್ನು ಸಾಗಿಸಲು ನಾನು ತಯಾರಾಗಿರಲಿಲ್ಲ.

ಅಲ್ಲಿ ಸ್ವಲ್ಪ ದಿನಗಳನ್ನು ಕಳೆದ ಮೇಲೆ ನಮ್ಮ ಹಡಗು ಜಪಾನಿನತ್ತ ಹೊರಟಿತು. ಅಲ್ಲಿ ಅದು ಕೆಲಕಾಲ ತಂಗಿದಾಗ, ಅಲ್ಲಿಯೂ ಚಿರಂಜೀವರು ಇರಬಹುದೇ ಎಂಬ ಕುತೂಹಲ ನನ್ನನ್ನು ಕಾಡಿತು. ಆದರೆ ಕ್ರಿಶ್ಚಿಯನ್ನಾದ ನಾನು ಈ ಜಪಾನಿಯರ ಮಧ್ಯೆ ಅತ್ಯಂತ ಎಚ್ಚರಿಕೆಯಿಂದ ಇರಬೇಕಾಗಿತ್ತು. ಲುಗ್‌ನಾಗ್ ದ್ವೀಪದ ಮೊಹರು ನನ್ನ ಕಾಗದ ಪತ್ರಗಳ ಮೇಲೆ ಇದ್ದುದರಿಂದ, ನನಗೆ ರಾಜಮರ್ಯಾದೆಯೇನೋ ಸಿಕ್ಕಿತು. ಉಳಿಯಲು ಒಳ್ಳೆಯ ವಸತಿ, ಊಟ ಎಲ್ಲವೂ ದೊರಕಿದವು. ಆದರೂ ಭಾಷಾಸಮಸ್ಯೆಯಿಂದ ನನ್ನ ಕುತೂಹಲ ನನ್ನಲ್ಲೇ ಉಳಿಯಿತು.

೧೭೦೯ರ ಜೂನ್ ೯ ರಂದು ಆಮ್‌ಸ್ಟರ್‌ಡಾಂಗೆ ಹೋಗುತ್ತಿದ್ದ ಹಡಗೊಂದನ್ನು ಹಿಡಿದೆ. ಅದು ಹೊರಡುವವರೆಗೂ ನನಗೆ ಭಯ. ಎಲ್ಲಿ ಇಳಿಸಿಬಿಡುತ್ತಾರೋ ಎಂದು. ಡಚ್ ನಾವಿಕರಿಗೆ ಬ್ರಿಟೀಶರನ್ನು ಕಂಡರೆ ಅಷ್ಟಕ್ಕಷ್ಟೇ. ಈ ನಾವಿಕನ ಹತ್ತಿರ ಐದು ವರ್ಷಗಳಿಂದ ನಾನು ಅನುಭವಿಸಿದ ಕಷ್ಟಕಾರ್ಪಣ್ಯಗಳನ್ನು ತೋಡಿಕೊಂಡೆ. (ನನ್ನ ಬಾಲ್ಯವನ್ನು ಹಾಲೆಂಡಿನಲ್ಲಿ ಕಳೆದಿದ್ದೆನಾದ್ದರಿಂದ ಆ ಭಾಷೆ ನನಗೆ ಬರುತ್ತಿತ್ತು.) ನಾನು ವೈದ್ಯನೆಂಬ ಕಾರಣಕ್ಕಾಗಿ ಆತ ನನ್ನನ್ನು ಕರೆದೊಯ್ಯಲು ಒಪ್ಪಿಕೊಂಡ.

ಅಂತೂ ಇಂತೂ ೧೭೧೦ರ ಏಪ್ರಿಲ್ ೬ ರಂದು ಆಮ್‌ಸ್ಟರ್ ಡಾಂ ತಲುಪಿ, ಅಲ್ಲಿಂದ ಮತ್ತೊಂದು ನಾವೆ ಹಿಡಿದು ಮೂರುದಿನಗಳ ನಂತರ ಇಂಗ್ಲೆಂಡ್ ಮುಟ್ಟಿದೆ. ಐದು ವರ್ಷಗಳಿಂದ ಅಗಲಿದ್ದ ಹೆಂಡತಿ, ಮಕ್ಕಳನ್ನು ಕಂಡಾಗ ನಿಶ್ಚಿಂತೆಯ ನಿಟ್ಟುಸಿರು ಹೊರಹೊಮ್ಮಿತು. ●



**ಮೇಲು**

"ಮರಗಳಿಲ್ಲದ ಪ್ರದೇಶದಲ್ಲಿ
ಹರಳುಗಿಡವೆ ಮಹಾವೃಕ್ಷ!"
ಎಂಬ ವ್ಯಂಗ್ಯವೇತಕ್ಕೆ ?
ಪಾರ್ಥೇನಿಯಂಗಿಂತ
ಹರಳುಗಿಡ ಮೇಲಲ್ಲವೆ ?

-ಪಿ.ಪಿ.ಕೆ.

# 'ಸೇವೆ' ಅಂದರೆ ಇದು..

• ಸೋನಿ

ಆತನ ಹೆಸರು ಎಸ್. ರಾಮಚಂದ್ರನ್. ಮುಂಬಯಿ ನಿವಾಸಿ ದಕ್ಷಿಣ ಭಾರತೀಯ. ವ್ಯವಹಾರ ಆತನ ವೃತ್ತಿ.

ಆದರೆ, ನೀವು ಈ ಹಿಂದೆಂದೂ ಕೇಳಿರದಂಥ ಕಂಡಿರದಂಥ ವ್ಯವಹಾರ ಅದು. ಹೌದು, ಖಂಡಿತವಾಗಿಯೂ ಅಚ್ಚರಿಪಡುವ ರೀತಿಯದು. ಹೋಟಲು ವ್ಯವಹಾರವೇ ಆದರೂ ಲಾಭದ ಆಸೆಯಿಂದ ಕೈಗೊಂಡಿಲ್ಲ. ಕೇವಲ ಸೇವಾ ಮನೋಭಾವದಿಂದ ಪ್ರಾರಂಭಿಸಿದ್ದು. ಬಡಮಕ್ಕಳಿಗೆ ಉಚಿತವಾಗಿ ಊಟ ನೀಡುವ ಹೋಟಲು!

ಕೆಲವು ವರ್ಷಗಳ ಹಿಂದೆ ರಾಮಚಂದ್ರನ್ ಒಂದು ಹೋಟಲಿನಲ್ಲಿ ಕುಳಿತು ತಿಂಡಿ ತಿನ್ನುತ್ತಿದ್ದ. ಬಡ ಮಗುವೊಂದು ದೈನ್ಯದಿಂದ ಏನಾದರೂ ಒಂದಷ್ಟು ತಿನ್ನಲು ಕೊಡಿ ಎಂದು ಗಲ್ಲೆಯ ಮೇಲೆ ಕುಳಿತಿದ್ದಾತನನ್ನು ಅಂಗಲಾಚುತ್ತಿದ್ದುದನ್ನು ರಾಮಚಂದ್ರನ್ ಗಮನಿಸಿದ. ಅರೆಕ್ಷಣ ಏನೋ ಕಸಿವಿಸಿಯಾಯಿತು. ಆದರೆ ಅದೇ ಹೊತ್ತಿಗೆ, "ಛೆ, ಎಲ್ಲಿಯ ಪಿರಿಪಿರಿ ಮಾರಾಯಾ," ಎಂದೆನ್ನುತ್ತ ಗಲ್ಲೆಯ ಮೇಲೆ ಕೂತಿದ್ದಾತ ಎದ್ದು ಹೋಗಿ ಆ ಹುಡುಗನ ಕತ್ತಿಗೆ ಕೈಕೊಟ್ಟು ನೂಕಿಬಿಟ್ಟ. ಬಿದ್ದ ಹುಡುಗನ ಹಣೆ ಬಾತುಕೊಂಡಿತು, ಕೈ ಕಾಲುಗಳು ತರಚಿಕೊಂಡು ಸಣ್ಣಗೆ ರಕ್ತ ಜಿನುಗಿತು. ಖಾಲಿ ಹೊಟ್ಟೆಯ ಹುಡುಗ ಬವಳಿ ಬಂದು ಬಿದ್ದು ಬಿಟ್ಟ.

ರಾಮಚಂದ್ರನ್ ತಟ್ಟೆಯನ್ನು ಸರಿಸಿ ಥಟ್ಟನೆ ಎದ್ದ. ಬಿಲ್ಲು ಎಷ್ಟೆಂದೂ ಕೇಳದೆಯೇ ಜೇಬಿಗೆ ಕೈ ಹಾಕಿ ಬಂದ ಯಾವುದೋ ಒಂದು ನೋಟನ್ನು ಗಲ್ಲೆಯವನ ಮುಖಕ್ಕೆಸೆದು ಹೊರಗೆ ಓಡಿದ. ಆ ಬಡ ಹುಡುಗನನ್ನು ರಿಕ್ಷಾವೊಂದರಲ್ಲಿ ಮಲಗಿಸಿಕೊಂಡು ಆಸ್ಪತ್ರೆಗೆ ಧಾವಿಸಿದ.

ದಾರಿಯಲ್ಲೇ ರಾಮಚಂದ್ರನ್ ನಿರ್ಧಾರ ಗಟ್ಟಿಯಾಗಿತ್ತು. 'ಈ ಬಡ ಹುಡುಗರಿಗೆ ಏನಾದರೂ ಒಂದಷ್ಟು ನೆರವಾಗಬೇಕು.' ಗೆಳೆಯರನ್ನು ಕಂಡು ತನ್ನ ವಿಚಾರ ಹೇಳಿದ. ಕೆಲವರು ಕೇಳಿದಾಕ್ಷಣ ನಕ್ಕುಬಿಟ್ಟರು. ಇನ್ನು ಕೆಲವರು, ಒಳ್ಳೆಯ ವಿಚಾರ, ಆದರೂ ಕಾರ್ಯರೂಪಕ್ಕಿಳಿಸುವುದು ಕಷ್ಟ ಎಂದರು. ನಾಲ್ವರು ಮಾತ್ರ ರಾಮಚಂದ್ರನ್ ಜತೆಗೆ ಸಹಕರಿಸುವುದಾಗಿ ವಚನವಿತ್ತರು.

ಆ ಐವರ ಪ್ರಯತ್ನದ ಫಲವಾಗಿ ತಲೆ ಎತ್ತಿತು. 'ನಮ್ಮ ಮಕ್ಕಳು' ('Our Children') ಸಂಸ್ಥೆ.

ಬೀದಿಬೀದಿ ಅಲೆಯುವ ಬಡಮಕ್ಕಳನ್ನೆಲ್ಲ ಒಂದೆಡೆ ಕೂಡಿಸುವುದು ಅದೆಂಥ ಕಷ್ಟದ ಕೆಲಸ ಎಂಬುದು ಅನುಭವಕ್ಕೆ ಬರತೊಡಗಿತು. ಆದರೂ ಆತ ಜಗ್ಗಲಿಲ್ಲ. ಕ್ರಮೇಣ ಆ ಹುಡುಗರಿಗಾಗಿ ಶೈಕ್ಷಣಿಕ ವರ್ಗಗಳನ್ನು ಆರಂಭಿಸಿದ. ಕಥೆ ಹೇಳಿ, ಕಣ್ಣಾಮುಚ್ಚಾಲೆಯಾಡಿಸಿ ಕೈಗೊಂದು ಪೆಪ್ಪರಮಿಂಟ್‌ನ್ನೂ ಕರಿ ಹಲಗೆ-ಬಳಪವನ್ನೂ ಕೊಟ್ಟು ಕೂಡಿ

ಸಿದ. ಹುಡುಗರು ಉತ್ಸಾಹದಿಂದ ಕಲಿಯತೊಡಗಿದ್ದನ್ನು ಕಂಡು ಆತನಿಗೆ ಹಿಗ್ಗೋ ಹಿಗ್ಗು.

ರಾಮಚಂದ್ರನ್ ಕೆಲಸ ಮಾಡುತ್ತಿದ್ದ ಕಂಪನಿಯ ಅಧಿಕಾರಿಗಳಿಗೆ, ಆಡಳಿತವರ್ಗಕ್ಕೆ ಇದು ಹೆಮ್ಮೆ ತಂದಿತು. "ಆ ಮಕ್ಕಳನ್ನು ವಾರಕ್ಕೊಮ್ಮೆ ಮುಂಬಯಿಯ ಬೇರೆ ಬೇರೆ ಭಾಗಗಳಿಗೆ ಕರೆದುಕೊಂಡು ಹೋಗಿ ಬಾ. ಖರ್ಚು-ಗಿರ್ಚಿನ ಚಿಂತೆ ನಮಗಿರಲಿ," ಎಂದರು. ಜತೆಗೆ ಅದಕ್ಕೆಂದೇ ಒಮಿನಿ ಬಸ್ಸೊಂದನ್ನು ಪ್ರತಿ ಭಾನುವಾರ ನೀಡಲು ಮುಂದಾದರು.

ಆದರೆ ಅತ್ತ ಕಂಪನಿಯ ಕೆಲಸ, ಇತ್ತ ಈ ಮಕ್ಕಳ ಪಾಲನೆ ಎರಡನ್ನೂ ಏಕಕಾಲಕ್ಕೆ ನಿಭಾಯಿಸುವುದು ಅಸಾಧ್ಯವೆಂದೆನಿಸಿ ಕೆಲಸಕ್ಕೆ ರಾಜೀನಾಮೆ ಕೊಟ್ಟ.

ಸಂಸ್ಥೆ ಬೆಳೆಯತೊಡಗಿತು. ಪೂರ್ಣಾವಧಿ ದುಡಿದರೂ ಸಮಯ ಸಾಕಾಗದು ಎಂಬಷ್ಟು ಕೆಲಸ. ಜತೆಗೆ ಆತನೊಂದಿಗೆ ಕೈ ಕೂಡಿಸುವವರ ಸಂಖ್ಯೆಯೂ ಹೆಚ್ಚಾಯಿತು. ಮಿತಭಾಷಿ-ಮೃದುಭಾಷಿ ರಾಮಚಂದ್ರನ್ ಆ ಸಂಸ್ಥೆಯಲ್ಲಿ ಯಾವ ಅಧಿಕಾರ ಸ್ಥಾನ ಬಯಸದೆಯೇ ಕೇವಲ ಕಾರ್ಯಕರ್ತನಾಗಿ ಉಳಿದ.

'ನಮ್ಮ ಮಕ್ಕಳು' ಸಂಸ್ಥೆಯಲ್ಲಿ ಬೆಳೆದ ಹುಡುಗರು ಈಗ ವಿವಿಧ ವೃತ್ತಿಪರ ತರಬೇತಿ ಪಡೆದು ಕೆಲಸ ಮಾಡುತ್ತಿದ್ದಾರೆ. ಇನ್ನು ಕೆಲವರು ಓದಿನಲ್ಲಿ ಮುಂದುವರಿದು ಪದವೀಧರರಾಗುವುದರಲ್ಲಿದ್ದಾರೆ. ವಡಾಲಾದ ಕೊಳಚೆ ಪ್ರದೇಶದಲ್ಲಿ ಕಣ್ಣು ಬಿಟ್ಟು, ಕಾಪಾಡುವವರಿಲ್ಲದೆ ಕಾಲನ ಅತಿಥಿಯಾಗಲಿದ್ದ ಹುಡುಗನೊಬ್ಬ ರಾಮಚಂದ್ರನ್‌ರ ಕಣ್ಣಿಗೆ ಬಿದ್ದ. ಈಗ ಅದೇ ಹುಡುಗ ಮುಂಬಯಿಯಲ್ಲಿ ಡಾಕ್ಟರ್ ಆಗಿದ್ದಾನೆ. ತಾನು ಬೆಳೆದ ಸಂಸ್ಥೆಯ ಮಕ್ಕಳಿಗೆ ಆತ ನಿತ್ಯವೂ ವೈದ್ಯಕೀಯ ಚಿಕಿತ್ಸೆ ನೀಡುತ್ತಿದ್ದಾನೆ.

ಸಮಾಜ ಸೇವೆಯ ಹೆಸರಿನಲ್ಲಿ ದೊಡ್ಡ ದೊಡ್ಡ ಘೋಷಣೆ, ಭಾಷಣ, ಭೋಜನ ಕೂಟ, ಪ್ರಚಾರಗಳಲ್ಲೇ ತೊಡಗಿರುವ ಸೇವಾ ಸಂಸ್ಥೆಗಳು ಒಮ್ಮೆ ರಾಮಚಂದ್ರನ್‌ರ ಸಾಧನೆಯನ್ನು ಪರಿಕಿಸಬೇಕು. ಅವನಂತೆ ತಮಗೆ ಮಾಡಲು ಆಗದಿದ್ದರೂ ಆತನ ಕೈಗೆ ಬಲ ತುಂಬಬೇಕು. ಅಂದರೆ ಅವರ 'ಧ್ಯೇಯ ವಾಕ್ಯ' ಸಾರ್ಥಕವೆನಿಸುತ್ತದೆ. ●




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಷಿ<br>ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

